ಶ್ರೀಮತ್ಪರಮಹಂಸ-ಪರಿವ್ರಾಜಕಾಚಾರ್ಯ-ಸದಾನಂದಪ್ರಣೀತ

# ವೇದಾಂತಸಾರ

ಮೂಲ ಅನುವಾದ ಟಿಪ್ಪಣಿ ಸಹಿತ

ಸ್ವಾಮಿ ಹರ್ಷಾನಂದ





ಶ್ರೀರಾಮಕೃಷ್ಣಾಶ್ರಮ
ಮೈಸೂರು-20

ಶ್ರೀಮತ್ಪರಮಹಂಸ-ಪರಿವ್ರಾಜಕಾಚಾರ್ಯ-ಸದಾನಂದಪ್ರಣೀತ

# ವೇದಾಂತಸಾರ

ಮೂಲ ಅನುವಾದ ಟಿಪ್ಪಣಿ ಸಹಿತ



ॐ

ಸ್ವಾಮಿ ಹರ್ಷಾನಂದ

Swami Harshananda
15.2.84







ಶ್ರೀರಾಮಕೃಷ್ಣಾಶ್ರಮ
ಮೈಸೂರು-20

# ಪ್ರಥಮ ಮುದ್ರಣದ ಪೀಠಿಕೆ

ಮೋಕ್ಷವು ಮಾನವ ಜೀವನದ ಚರಮಲಕ್ಷ್ಯ; ಆದುದರಿಂದಲೇ ಅದು ಪರಮಪುರುಷಾರ್ಥವೂ ಹೌದು. ಅದನ್ನು ಪಡೆದ ಮರ್ತ್ಯನು ಅಮೃತನಾಗುತ್ತಾನೆ, ಪರಮಾನಂದದಲ್ಲಿ ತೇಲಿ ಮುಳುಗಿ ಕರಗಿಹೋಗುತ್ತಾನೆ. ಇಂಥ ಅನುಭವ, ಅನುಭೂತಿ ಯಾರಿಗೆ ತಾನೆ ಬೇಡ? ಆದರೆ 'ಕೈ ಕೆಸರಾಗದೆ ಬಾಯಿ ಮೊಸರಾಗದು!' ಸಾಧನೆಯಿಲ್ಲದೆ ಸಿದ್ಧಿಯಾಗದು. ಎಂತಲೇ ಪರಮಪುರುಷಾರ್ಥವನ್ನು ನಮ್ಮ ಮುಂದಿಡುವ ದರ್ಶನ ಗ್ರಂಥಗಳು ತತ್ತ್ವಚಿಂತನೆಗೆ ಕೊಟ್ಟಷ್ಟೇ ಪ್ರಾಧಾನ್ಯವನ್ನು ಅದರ ಸಾಕ್ಷಾತ್ಕಾರವನ್ನು ತಂದುಕೊಡುವ ಸಾಧನಗಳಿಗೂ ಕೊಟ್ಟಿವೆ. ಅವನ್ನು 'ದರ್ಶನ' ಎಂದು ಕರೆಯಲು ಇದೇ ಕಾರಣ. ದರ್ಶನವೆಂದರೆ ನೋಡುವುದು, ಸಾಕ್ಷಾತ್ತಾಗಿ ಅನುಭವಿಸುವುದು. ಋಷಿಗಳು ತಾವು ಪರತತ್ತ್ವವನ್ನು 'ಕಂಡು', ಅನುಭವಿಸಿ, ಅದರ ಸ್ವರೂಪವನ್ನೂ ಅದಕ್ಕೆ ಕರೆದೊಯ್ಯುವ ಮಾರ್ಗವನ್ನೂ ವಿವರಿಸಿರುವುದರಿಂದಲೇ ಈ ಗ್ರಂಥಗಳಿಗೆ ದರ್ಶನಗಳೆಂಬ ಹೆಸರು ಬಂದಿದೆ. ಇದೇ ಭಾರತೀಯ 'ದರ್ಶನ'ಗಳಿಗೂ ಪಾಶ್ಚಾತ್ಯ 'ಫಿಲಾಸಫಿ'ಗೂ ಇರುವ ಮುಖ್ಯ ವ್ಯತ್ಯಾಸ.

ಇಂಥ ದರ್ಶನಗಳಲ್ಲಿ, ವೇದಪ್ರಾಮಾಣ್ಯವನ್ನೊಪ್ಪಿರುವ, 'ಆಸ್ತಿಕ' ಎನ್ನಿಸಿರುವ, ದರ್ಶನಗಳು ಆರು: ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸಾ, ವೇದಾಂತ. ಇವುಗಳಲ್ಲಿ ಕಟ್ಟಕಡೆಯದಾದ ವೇದಾಂತ ದರ್ಶನವು ಭಾರತೀಯ ತತ್ತ್ವಶಾಸ್ತ್ರಕ್ಕೇ ಕಿರೀಟಪ್ರಾಯವಾದದ್ದು. ಮುಖ್ಯವಾಗಿ ಉಪನಿಷತ್ತುಗಳನ್ನು ಅವಲಂಬಿಸಿರುವ ಇದು ಸಂಪ್ರದಾಯ ಪ್ರಭೇದದಿಂದ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಎಂದು ಮೂರು ಕವಲಾಗಿ ಒಡೆದಿದೆ. ಇವುಗಳಲ್ಲಿ ಅನುಯಾಯಿಗಳ ಸಂಖ್ಯಾಬಲದ ಮತ್ತು ಜನಪ್ರಿಯತೆಯ ದೃಷ್ಟಿಯಿಂದ ನೋಡಿದಾಗ ಅದ್ವೈತ ವೇದಾಂತವೇ

ಪ್ರಧಾನವೆನ್ನಬಹುದು. ಶ್ರೀಗೌಡಪಾದ ಶಂಕರರಿಂದ ಪ್ರಾರಂಭಿಸಿ ಸುಮಾರು ಹದಿನಾಲ್ಕು ಶತಮಾನಗಳ ವರೆಗೆ ಅವಿರತವಾಗಿ ಹರಿದುಬಂದಿರುವ ಅದ್ವೈತ ವೇದಾಂತ ಸಂಪ್ರದಾಯದಲ್ಲಿ ಇದುವರೆಗೆ ನೂರಾರು ಗ್ರಂಥಗಳು ರಚಿಸಲ್ಪಟ್ಟಿವೆ. ಕೆಲವು ಗ್ರಂಥಗಳನ್ನು ಉಪನಿಷತ್ತುಗಳು, ಭಗವದ್ಗೀತೆ, ಬ್ರಹ್ಮಸೂತ್ರಗಳು ಮೊದಲಾದ ಮೂಲಶಾಸ್ತ್ರಗಳಿಗೆ ವ್ಯಾಖ್ಯಾನರೂಪದಲ್ಲಿ ಬರೆದಿದ್ದರೆ ಇನ್ನು ಕೆಲವನ್ನು ಈ ವ್ಯಾಖ್ಯಾನಗಳ ಮೇಲೆ ಉಪವ್ಯಾಖ್ಯಾನ ಗಳನ್ನಾಗಿ ಟೀಕೆ ಟಿಪ್ಪಣಿ ವೃತ್ತಿಗಳ ರೂಪದಲ್ಲಿ ಬರೆಯಲಾಗಿದೆ. ಇವುಗಳಲ್ಲಿ ಪ್ರತಿಪಾದಿಸಿದ ತತ್ತ್ವಗಳನ್ನೂ ವಾದಸರಣಿಯನ್ನೂ ಖಂಡಿಸಿ ಇತರ ದಾರ್ಶನಿಕರು ಗ್ರಂಥಗಳನ್ನು ರಚಿಸಿದ್ದರಿಂದ ಅವಕ್ಕೆ ಉತ್ತರವಾಗಿ ಪರಮತ-ಖಂಡನ–ಸ್ವಮತ-ಮಂಡನಾತ್ಮಕವಾದ ತರ್ಕಪ್ರಧಾನವಾದ ಹಲವು ಗ್ರಂಥ ಗಳನ್ನೂ ಬರೆಯಲಾಯಿತು. ಪಂಡಿತಮನರಂಜಕವಾದ ಇಂಥ ಗ್ರಂಥ ಗಳನ್ನಲ್ಲದೇ ಪಾಮರರಿಗೂ ತತ್ತ್ವವು ಸುಲಭವಾಗಿ ಅರ್ಥವಾಗಲೆಂದು ಇತರ ಸರಳ ಗ್ರಂಥಗಳನ್ನೂ ರಚಿಸಲಾಯಿತು. ‘ ಪ್ರಕರಣಗಳು ’ ಎಂದು ಕರೆಯಲ್ಪಡುವ ಈ ಗ್ರಂಥಸರಣಿಯಲ್ಲಿ ಶ್ರೀ ಸದಾನಂದರ ‘ ವೇದಾಂತ ಸಾರ ’ಕ್ಕೆ ವಿಶಿಷ್ಟಸ್ಥಾನವಿದೆ.

ಶ್ರೀ ಸದಾನಂದರ ವಿಷಯ ಹೆಚ್ಚೇನೂ ತಿಳಿದಿಲ್ಲ. ಇವರು ಬಹುಶಃ ೧೫ ನೆಯ ಶತಮಾನದ ಅಂತ್ಯದಲ್ಲಿಯೋ ೧೬ನೆಯ ಶತಮಾನದ ಆದಿಭಾಗ ದಲ್ಲಿಯೋ ಇದ್ದಿರಬಹುದೆಂದೂ ‘ ಸುಬೋಧಿನೀ ’ ವ್ಯಾಖ್ಯಾನಕಾರ ರಾದ ನೃಸಿಂಹಸರಸ್ವತಿಗಳ ಪರಮಗುರುಗಳಾಗಿದ್ದರೆಂದೂ ವಿದ್ವಾಂಸರ ಅಭಿಪ್ರಾಯ. ‘ ಅದ್ವೈತ ಬ್ರಹ್ಮಸಿದ್ಧಿ ’ಯನ್ನು ಬರೆದ ಸದಾನಂದ ಕಾಶ್ಮೀರಕರು, ‘ ಅದ್ವೈತಸಿದ್ಧಿ-ಸಿದ್ಧಾಂತ-ಸಾರ ’ವನ್ನು ಬರೆದ ಸದಾನಂದ ವ್ಯಾಸರು, ಈ ‘ ವೇದಾಂತಸಾರ ’ದ ಕರ್ತೃ ಸದಾನಂದಯೋಗೀಂದ್ರರು— ಇವರೆಲ್ಲ ಒಬ್ಬರೇ ವ್ಯಕ್ತಿಯೇ ಅಥವಾ ಬೇರೆ ಬೇರೆಯೇ ಎಂಬುದರಲ್ಲಿ ವಿದ್ವಾಂಸರು ಒಮ್ಮತವನ್ನು ಹೊಂದಿಲ್ಲ. ಆದರೆ ಸಾಧಕರಿಗೆ ಹೆಚ್ಚು ಆವಶ್ಯಕ ವಲ್ಲದ ಪ್ರಮಾಣಗಳ ವಿಷಯವನ್ನು ಬಿಟ್ಟು ಪ್ರಮೇಯಗಳನ್ನೇ ಪ್ರಧಾನ ವಾಗಿ ವರ್ಣಿಸಿರುವುದು, ಶ್ರೀಶಂಕರರ ಅನಂತರ ಬಂದ ಅದ್ವೈತಿಗಳ ವಾದಗಳನ್ನು ಸ್ಥೂಲವಾಗಿ ಸೂಚಿಸಿರುವುದು, ‘ ತತ್ತ್ವಮಸಿ ’ ಮಹಾ

ವಾಕ್ಯದ ಅರ್ಥವನ್ನು ವಿಶೇಷವಾಗಿ ಮತ್ತು ವಿಸ್ತಾರವಾಗಿ ಚರ್ಚಿಸಿರುವುದು, ಪಾತಂಜಲ-ಯೋಗವನ್ನು ನಿದಿಧ್ಯಾಸನದ ಅವಿಭಾಜ್ಯ ಅಂಗವಾಗಿ ಪರಿಗಣಿಸಿರುವುದು ಎಂಬೀ ಹಲವು ಕಾರಣಗಳಿಂದ ಇದು ಪ್ರಾಥಮಿಕ ಪ್ರಕರಣಗ್ರಂಥಗಳಲ್ಲಿ ಬಹು ಪ್ರಶಸ್ತವಾದುದು ಎಂಬುದನ್ನು ಮಾತ್ರ ಎಲ್ಲರೂ ಒಪ್ಪುತ್ತಾರೆ.

ಈ ಪ್ರಕರಣವು ಪುಟ್ಟದಾದರೂ ಅತ್ಯಂತ ಜನಪ್ರಿಯ ಎಂಬುದಕ್ಕೆ ಅದರ ಮೇಲೆ ರಚಿಸಿರುವ ಆರು ಸಂಸ್ಕೃತ ವ್ಯಾಖ್ಯಾನಗಳೇ ಸಾಕ್ಷಿ! ಇವಾವುವೆಂದರೆ: (೧) ಶ್ರೀ ಆಪದೇವರ 'ಬಾಲಬೋಧಿನೀ'; (೨) ಶ್ರೀ ನೃಸಿಂಹಸರಸ್ವತಿಗಳ 'ಸುಬೋಧಿನೀ'; (೩) ಶ್ರೀ ರಾಮತೀರ್ಥರ 'ವಿದ್ವನ್ಮನೋರಂಜನೀ'; (೪) 'ವೇದಾಂತಸಾರಟೀಕಾ'; (೫) 'ವೇದಾಂತಸಾರಟಿಪ್ಪಣೀ'; (ಇವೆರಡರ ಕರ್ತೃಗಳು ಅಜ್ಞಾತ) (೬) ಶ್ರೀರಾಮಚಂದ್ರಾನಂದಸರಸ್ವತಿಗಳ 'ವೇದಾಂತಸಾರವ್ಯಾಖ್ಯಾ'.

ಇವುಗಳಲ್ಲಿ ಮೊದಲ ಮೂರು ಅಚ್ಚಾಗಿವೆ. ಉಳಿದ ಮೂರು ಅಚ್ಚಾಗಿಲ್ಲ. ಇವುಗಳಲ್ಲಿ ೪ ನೆಯದು ಮತ್ತು ೫ ನೆಯದು ಬರೋಡಾದ ಓರಿಯಂಟಲ್ ಲೈಬ್ರರಿಯಲ್ಲೂ ೬ ನೆಯದು ಮದ್ರಾಸಿನ ಅಡ್ಯಾರ್ ಲೈಬ್ರರಿಯಲ್ಲೂ ಹಸ್ತಪ್ರತಿಯ ರೂಪದಲ್ಲಿ ಸಿಗುತ್ತವೆ. ಈ ಅನುವಾದ ಕಾರ್ಯದಲ್ಲಿ ನಾನು ಅಚ್ಚಾಗಿರುವ ಮೂರು ವ್ಯಾಖ್ಯಾನಗಳನ್ನೂ ಉಪಯೋಗಿಸಿಕೊಂಡಿರುತ್ತೇನೆ.

ಗ್ರಂಥದ ವಿಷಯವನ್ನು ಸಂಗ್ರಹವಾಗಿ ಹೀಗೆ ನಿರೂಪಿಸಬಹುದು: ವೇದಗಳ ಸಾರಭೂತವಾದ ಉಪದೇಶವನ್ನು ಒಳಕೊಂಡಿರುವ ಉಪನಿಷತ್ತುಗಳು ಬ್ರಹ್ಮಸೂತ್ರಗಳು ಭಗವದ್ಗೀತೆ ಮತ್ತು ಇವುಗಳಿಗೆ ಅನುಸಾರವಾಗಿರುವ ಗ್ರಂಥಗಳು—ಇವೇ 'ವೇದಾಂತ'. ಈ ವೇದಾಂತದರ್ಶನವು ತತ್ತ್ವದ ಸ್ವರೂಪವನ್ನು ವಿವರಿಸುವುದಲ್ಲದೆ ಅದರ ಸಾಕ್ಷಾತ್ಕಾರದ ಮಾರ್ಗವನ್ನೂ ತೋರಿಸಿಕೊಡುತ್ತದೆ. ಆದರೆ ಇದನ್ನು ಅನುಸರಿಸಬಯಸುವವನು ವೇದಾಧ್ಯಯನ ಮಾಡಿ ಶಾಸ್ತ್ರೋಕ್ತ ಕರ್ಮಗಳನ್ನೂ ಉಪಾಸನೆಗಳನ್ನೂ ಅನುಷ್ಠಿಸಿ ಅಂತಃಕರಣವನ್ನು ನಿರ್ಮಲಗೊಳಿಸಿಕೊಂಡವನಾಗಿರಬೇಕು. ಹೀಗೆ ಚಿತ್ತಶುದ್ಧಿಯಾದನಂತರ ಸಾಧನಚತುಷ್ಟಯವನ್ನು ಸಂಪಾದಿಸಿ

ಕೊಳ್ಳಬೇಕು. ವಿವೇಕ, ವೈರಾಗ್ಯ, ಶಮಾದಿ ಷಟ್ಕ ಮತ್ತು ಮುಮುಕ್ಷುತ್ವ ಇವೇ ಸಾಧನಚತುಷ್ಟಯ. ಬ್ರಹ್ಮವೊಂದೇ ಸತ್ಯ, ವಿಷಯವಸ್ತುಗಳಿಂದ ತುಂಬಿ ರಮಣೀಯವಾಗಿ ಕಾಣುತ್ತಿರುವ ಈ ಜಗತ್ತು ಅನಿತ್ಯ—ಎಂಬೀ ಜ್ಞಾನವೇ 'ವಿವೇಕ'. ಇದರಿಂದ ಅನಿತ್ಯಪ್ರಪಂಚದ ವಿಷಯದಲ್ಲಿ ವೈರಾಗ್ಯ ಹುಟ್ಟುತ್ತದೆ. ಆಗ ಸಾಧಕನು ಶಮ (ಮನಶ್ಶಾಂತಿ), ದಮ (ಇಂದ್ರಿಯ ನಿಗ್ರಹ) ಮೊದಲಾದ ಆರು ಸದ್ಗುಣಗಳನ್ನು ಪಡೆಯಲು ಪ್ರಯತ್ನಿಸುತ್ತಾನೆ. ಇದರ ಫಲವಾಗಿ ಮೋಕ್ಷೇಚ್ಛೆಯು ಅಥವಾ ಮುಮುಕ್ಷುತ್ವವು ಮೊಳೆಯುತ್ತದೆ, ಬೆಳೆಯುತ್ತದೆ. ಆಗ ಅವನು ಸದ್ಗುರುವನ್ನು ಅರಸಿ ವಿಧಿವತ್ತಾಗಿ ಬಳಿಸಾರುತ್ತಾನೆ. ಅವನಿಂದ ಉಪದೇಶವನ್ನು ಶ್ರವಣ ಮಾಡುತ್ತಾನೆ. ಅದನ್ನೇ ಮನನಮಾಡುತ್ತಾನೆ. ತತ್ತ್ವವು ದೃಢವಾದನಂತರ ಅದರ ಮೇಲೆ ನಿದಿಧ್ಯಾಸನ ಮಾಡುತ್ತಾನೆ. ತತ್ಫಲವಾಗಿ ಅಜ್ಞಾನವನ್ನು ಕಳೆದುಕೊಳ್ಳುತ್ತಾನೆ. ಆಗ ಅವನಲ್ಲಿಯೇ ಮುಂಚಿನಿಂದಲೂ ಇದ್ದುಕೊಂಡಿದ್ದ, ಅವನ ಸ್ವರೂಪವೇ ಆಗಿರುವ, ಆತ್ಮವಸ್ತುವು ಅಥವಾ ಬ್ರಹ್ಮಚೈತನ್ಯವು ಒಮ್ಮೆಗೇ ಬೆಳಗುತ್ತದೆ. ಪ್ರಾರಬ್ಧಕರ್ಮವಿರುವವರೆಗೂ ಜೀವನ್ಮುಕ್ತಿಯನ್ನು ಅನುಭವಿಸಿ ಅದು ತೀರಿದ ನಂತರ ದೇಹವು ಬಿದ್ದುಹೋದಾಗ ವಿದೇಹಮುಕ್ತಿಯನ್ನು ಪಡೆಯುತ್ತಾನೆ.

ಜಿಜ್ಞಾಸುವೂ ಮುಮುಕ್ಷುವೂ ಆಗಿ ತನ್ನ ಬಳಿಗೆ ಬಂದಿರುವ ಶಿಷ್ಯನಿಗೆ ಗುರುವು ಅಧ್ಯಾರೋಪ ಮತ್ತು ಅಪವಾದ ಎಂಬ ಕ್ರಮವನ್ನನುಸರಿಸಿ ತತ್ತ್ವವನ್ನು ಉಪದೇಶಿಸುತ್ತಾನೆ. ಇವೆರಡೂ ಪಾರಿಭಾಷಿಕ ಶಬ್ದಗಳು. ಅಧ್ಯಾರೋಪವನ್ನು ಅಧ್ಯಾಸ ಎಂತಲೂ ಕರೆಯುವುದುಂಟು. ನಸುಗತ್ತಲಿನಲ್ಲಿ ಹಗ್ಗದ ಸ್ವರೂಪವನ್ನು ಸರಿಯಾಗಿ ತಿಳಿಯದೆ ಅಜ್ಞಾನದಿಂದ ಅದರಲ್ಲಿ ಹಾವನ್ನು ಆರೋಪಿಸುವಂತೆ ಬ್ರಹ್ಮವಸ್ತುವಿನ ಸ್ವರೂಪವನ್ನು ಸರಿಯಾಗಿ ತಿಳಿಯದ ಕಾರಣ (ಅವಿದ್ಯೆಯಿಂದ ಅಥವಾ) ಅಜ್ಞಾನದಿಂದ ಅದರಲ್ಲಿ ಈ ಜಗತ್ತನ್ನು ಆರೋಪಿಸುವುದೇ 'ಅಧ್ಯಾರೋಪ'.

ಈ ಅಜ್ಞಾನವು ಸತ್ ಅಲ್ಲ, ಅಸತ್ ಅಲ್ಲ, ಅವೆರಡಕ್ಕಿಂತ ವಿಲಕ್ಷಣವಾದದ್ದು. ಆದುದರಿಂದಲೇ ಅದನ್ನು 'ಹೀಗೆ' ಎಂದು ನಿರ್ವಚನ ಮಾಡಲು ಸಾಧ್ಯವಿಲ್ಲ ('ಅನಿರ್ವಚನೀಯ'). ಇದು ಸತ್ತ್ವ ರಜಸ್ಸ್ನು

ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿದೆ. ಇದು ಜ್ಞಾನವಿರೋಧಿ ಮತ್ತು ಭಾವರೂಪವುಳ್ಳದ್ದು.

ಈ ಅಜ್ಞಾನಕ್ಕೆ 'ಆವರಣ' ಮತ್ತು 'ವಿಕ್ಷೇಪ' ಎಂಬ ಎರಡು ಶಕ್ತಿಗಳಿವೆ. ನಸುಗುತ್ತಲೆಯು ಹಗ್ಗದ ನಿಜಸ್ವರೂಪವನ್ನು ಮರೆಮಾಚಿ ಅದರಲ್ಲಿ ಹಾವು ಕಾಣುವಂತೆ ಮಾಡುತ್ತದೆ. ಹಾಗೆಯೇ ಅಜ್ಞಾನದ ಆವರಣಶಕ್ತಿಯು ಬ್ರಹ್ಮವಸ್ತುವಿನ ನಿಜಸ್ವರೂಪವನ್ನು ಮರೆಮಾಚುತ್ತದೆ; ಅದರ ವಿಕ್ಷೇಪಶಕ್ತಿಯು ಅದೇ ಬ್ರಹ್ಮದಲ್ಲಿ ಈ ಜಡಜಗತ್ತು ತೋರುವಂತೆ ಮಾಡುತ್ತದೆ.

ಜೀವಾತ್ಮನ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳು, ಸ್ಥೂಲ ಸೂಕ್ಷ್ಮ ಮತ್ತು ಕಾರಣ ಎಂಬ ಮೂರು ಶರೀರಗಳು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಮತ್ತು ಆನಂದಮಯ ಎಂಬ ಐದು ಕೋಶಗಳು, ಪರಮಾತ್ಮನ ಈಶ್ವರ ಹಿರಣ್ಯಗರ್ಭ ವಿರಾಟ್ ಎಂಬ ಮೂರು ರೂಪಗಳು, ಭೂರಾದಿ ಹದಿನಾಲ್ಕು ಲೋಕಗಳು, ಅವುಗಳಲ್ಲಿರುವ ಜೀವಿಗಳ ಶರೀರಗಳು, ಇವುಗಳಿಗೆ ಕಾರಣವಾದ ಪಂಚತನ್ಮಾತ್ರಗಳು ಮತ್ತು ಪಂಚಭೂತಗಳು—ಇವೆಲ್ಲವೂ ಅಜ್ಞಾನದ ಕಾರ್ಯಗಳೇ! ಅದರ ವಿಕ್ಷೇಪ ಶಕ್ತಿಯ ಪ್ರಭಾವ!

ಹಗ್ಗದಲ್ಲಿ ಅಜ್ಞಾನದಿಂದ ತೋರುತ್ತಿರುವ ಹಾವನ್ನು ಅಲ್ಲಗಳೆದು ಅದು ಹಗ್ಗವೇ ಎಂಬುದನ್ನು ತೋರಿಸುವಂತೆ ಬ್ರಹ್ಮವಸ್ತುವಿನಲ್ಲಿ ಅಜ್ಞಾನದಿಂದ ತೋರುತ್ತಿರುವ ಈ ಜಗತ್ತನ್ನು ಪ್ರಮಾಣ-ಯುಕ್ತಿ-ಅನುಭವಗಳ ಮೂಲಕ ಅಲ್ಲಗಳೆದು ಅದು ಬ್ರಹ್ಮವೇ ಎಂದು ತೋರಿಸಿಕೊಡುವ ಕ್ರಮವೇ 'ಅಪವಾದ'. ಬ್ರಹ್ಮದಿಂದ ಜಗತ್ತು ಯಾವ ಕ್ರಮದಲ್ಲಿ 'ಉದ್ಭವಿಸಿತೋ' ಅದಕ್ಕೆ ವಿರುದ್ಧವಾದ ಕ್ರಮದಲ್ಲಿ ಜಗತ್ತನ್ನು ಬ್ರಹ್ಮದಲ್ಲಿ 'ಲಯಗೊಳಿಸಿದಾಗ' ಬ್ರಹ್ಮವೊಂದೇ ಉಳಿಯುತ್ತದೆ.

ಅಪವಾದದಿಂದ ಮುಖ್ಯವಾಗಿ ತಿಳಿದುಬರುವ ಅಂಶವೆಂದರೆ ಜೀವಚೈತನ್ಯವೂ ಈಶ್ವರಚೈತನ್ಯವೂ ತತ್ತ್ವತಃ ಒಂದೇ. ಉಪನಿಷತ್ತಿನ ಮಹಾವಾಕ್ಯಗಳು ಘೋಷಿಸುತ್ತಿರುವುದು ಇದನ್ನೇ. ಈ ಮಹಾವಾಕ್ಯಗಳಲ್ಲಿ 'ತತ್ತ್ವಮಸಿ' ಎಂಬ ಉಪದೇಶವಾಕ್ಯ ಮತ್ತು 'ಅಹಂ ಬ್ರಹ್ಮಾಸ್ಮಿ' ಎಂಬ

ಅನುಭವವಾಕ್ಯ—ಇದನ್ನು ಅದ್ವೈತವೇದಾಂತಗ್ರಂಥಗಳು ಹೆಚ್ಚು ವಿವರವಾಗಿ ವರ್ಣಿಸುತ್ತವೆ. ಈ ಗ್ರಂಥದಲ್ಲಿ 'ತತ್ತ್ವಮಸಿ' ವಾಕ್ಯಕ್ಕೆ ಅರ್ಥ ಮಾಡುವ ಕ್ರಮವನ್ನು ವಿಸ್ತಾರವಾಗಿ ನಿರೂಪಿಸಿರುತ್ತದೆ. ಇದರ ಸ್ಥೂಲಾರ್ಥ 'ಅದು (ಈಶ್ವರನು) ನೀನೇ (ಜೀವಾತ್ಮ) ಆಗಿರುವೆ' ಎಂದು. ಅಜಗಜಾಂತರವಿರುವ ಜೀವೇಶ್ವರರಲ್ಲಿ ಐಕ್ಯವು ಸಾಧ್ಯವಿಲ್ಲದ್ದರಿಂದಲೂ, ಆದರೆ ಶ್ರುತಿವಾಕ್ಯವು ಪರಮಪ್ರಮಾಣವಾದುದರಿಂದಲೂ, ಈ ವಾಕ್ಯಕ್ಕೆ ನೇರವಾಗಿ ಅರ್ಥಮಾಡದೆ 'ಭಾಗಲಕ್ಷಣೆ'ಯಿಂದ ಅರ್ಥಮಾಡಬೇಕು. 'ಸೋಽಯಂ ದೇವದತ್ತಃ', 'ಅವನೇ ಈ ದೇವದತ್ತನು' ಎಂಬ ವಾಕ್ಯದಲ್ಲಿ ಬೇರೆ ಕಾಲದಲ್ಲಿ ಬೇರೆ ಜಾಗದಲ್ಲಿ ನೋಡಿದ್ದ ದೇವದತ್ತನನ್ನು ಇಂದು ಇಲ್ಲಿ ಗುರುತಿಸುವಂತೆ, ಹೀಗೆ ಗುರುತಿಸುವಾಗ ಭಿನ್ನಭಿನ್ನವಾಗಿರುವ ದೇಶಕಾಲಗಳನ್ನು ತ್ಯಜಿಸಿ ವ್ಯಕ್ತಿಯನ್ನು ಮಾತ್ರ ಗ್ರಹಿಸುವಂತೆ, 'ತತ್ತ್ವಮಸಿ' ಮಹಾವಾಕ್ಯದಲ್ಲಿಯೂ ಕೂಡ ಜೀವೇಶ್ವರರಿಗೆ ಸಮಾನವಾದ ಚೈತನ್ಯಾಂಶವನ್ನು ಮಾತ್ರ ಗ್ರಹಿಸಿ, ಉಪಾಧಿಯ ದೆಸೆಯಿಂದ ಆಗಂತುಕವಾಗಿ ಉಂಟಾಗಿರುವ ಸರ್ವಜ್ಞತ್ವ, ಅಲ್ಪಜ್ಞತ್ವ ಮೊದಲಾದ ವಿಶೇಷಣಗಳನ್ನು ಬಿಡಬೇಕು. ಆಗ ಅವರಿಬ್ಬರಲ್ಲಿನ ಐಕ್ಯವು ಸಿದ್ಧಿಸುತ್ತದೆ, ಅರ್ಥವತ್ತಾಗುತ್ತದೆ.

ಈ ಐಕ್ಯವು ಅನುಭೂತಿಯಿಂದ, ಅನುಭವದಿಂದ, ಬರಬೇಕು. ಇದಕ್ಕಾಗಿ ಮುಮುಕ್ಷುವು ಸಾಧನೆ ಮಾಡಬೇಕು. ಈ ಸಾಧನೆಯಲ್ಲಿ 'ಶ್ರವಣ'ವು ಮೊದಲನೆಯದು. ಶ್ರವಣವೆಂದರೆ ಸುಮ್ಮನೆ ಕೇಳುವುದು ಎಂದರ್ಥವಲ್ಲ. ಉಪನಿಷದ್ ವಾಕ್ಯಗಳನ್ನು ಗುರುಮುಖದಿಂದ ಕೇಳಿ, ಉಪಕ್ರಮ, ಉಪಸಂಹಾರ ಮೊದಲಾದ ಆರು ಲಿಂಗಗಳ ಮೂಲಕ ಅರ್ಥವನ್ನು ಚೆನ್ನಾಗಿ ನಿಶ್ಚಯಿಸಿಕೊಳ್ಳುವುದು. ಹೀಗೆ ನಿಶ್ಚಯಿಸಿದ ಅರ್ಥವನ್ನು ಎಡೆಬಿಡದೆ ಚಿಂತಿಸುವುದೇ 'ಮನನ'. ಇದು ಎರಡನೆಯ ಸಾಧನೆ. ಈ ಮನನವು ಪರಿಪಕ್ವವಾದಾಗ ಚಿತ್ತವು ಬ್ರಹ್ಮವಸ್ತುವಿಗಿಂತ ಭಿನ್ನವಾದದ್ದೆಲ್ಲವನ್ನೂ ತ್ಯಜಿಸಿ ಬ್ರಹ್ಮಾಕಾರವನ್ನೇ ತಾಳಿ ಅವ್ಯಾಹತವಾಗಿ ಹರಿಯುತ್ತದೆ. ಈ ಬ್ರಹ್ಮಾಕಾರವೃತ್ತಿಯ ಪ್ರವಾಹವೇ 'ನಿದಿಧ್ಯಾಸನ'. ನಿದಿಧ್ಯಾಸನವು ಪರಿಪಕ್ವವಾದಾಗ ಅದು 'ಸಮಾಧಿ'ಯಲ್ಲಿ ಕೊನೆಗಾಣುತ್ತದೆ.

ಸಮಾಧಿಯು ಸವಿಕಲ್ಪಕ ಮತ್ತು ನಿರ್ವಿಕಲ್ಪಕ ಎಂದು ಎರಡು ವಿಧ. ಆನೆಯೇ ಮೊದಲಾದ ಆಕಾರದಲ್ಲಿರುವ ಮಣ್ಣಿನ ಬೊಂಬೆಗಳನ್ನು ನೋಡಿದಾಗ ಜೊತೆಯಲ್ಲಿಯೇ ಮಣ್ಣೂ ಕಂಡುಬರುವಂತೆ ಜ್ಞಾತೃ, ಜ್ಞೇಯ ಮೊದಲಾದ ದ್ವೈತವನ್ನು ನೋಡುತ್ತಿದ್ದರೂ ಅದರ ಸಂಗಡವೇ ಬ್ರಹ್ಮದ ಅನುಭವವೂ ಆಗುತ್ತಿರುವ ಅವಸ್ಥೆಯೇ 'ಸವಿಕಲ್ಪಕಸಮಾಧಿ'. 'ನಿರ್ವಿಕಲ್ಪಕಸಮಾಧಿ'ಯಲ್ಲಿ ಈ ಜ್ಞಾತೃ-ಜ್ಞೇಯ-ರೂಪವಾದ ಭೇದಗಳು ಕರಗಿಹೋಗಿ ಬ್ರಹ್ಮದ ಅನುಭವ ಮಾತ್ರ ಆಗುತ್ತಿರುತ್ತದೆ.

ಇಂತಹ ನಿರ್ವಿಕಲ್ಪಕ ಸಮಾಧಿಯನ್ನು ಪಡೆಯಲು ಯಮ, ನಿಯಮ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿ ಎಂಬ ಎಂಟು ಸಾಧನಾಂಗಗಳು ಆವಶ್ಯಕ. ಇವುಗಳ ಅಭ್ಯಾಸವು ನಿರ್ವಿಕಲ್ಪಕ ಸಮಾಧಿಯ ಮೂಲಕ ಬ್ರಹ್ಮಸಾಕ್ಷಾತ್ಕಾರವನ್ನು ತಂದುಕೊಡುತ್ತದೆ.

ಪ್ರಾರಬ್ಧಕರ್ಮವು ಅನುಭವಿಸಿಯೇ ತೀರಬೇಕಾಗಿರುವುದರಿಂದ, ಅದು ತೀರುವುದಕ್ಕೆ ಮುಂಚೆಯೇ ಬ್ರಹ್ಮಾನುಭವವುಂಟಾದರೆ ಆಗ ಜೀವನ್ಮುಕ್ತಾವಸ್ಥೆಯು ಬರುತ್ತದೆ. ಈ ಅವಸ್ಥೆಯಲ್ಲಿ ದೇಹೇಂದ್ರಿಯಾದಿಗಳಿದ್ದರೂ, ಅವು ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿದ್ದರೂ, ಜೀವನ್ಮುಕ್ತನಿಗೆ ಅವುಗಳಲ್ಲಿ ಅಹಂಕಾರ-ಮಮಕಾರರೂಪದ ಅಭಿಮಾನವಿರುವುದಿಲ್ಲ. ಆದುದರಿಂದ ಇತರ ದೇಹಾಭಿಮಾನಿಗಳಿಗಾಗುವಂತೆ ಇವನಿಗೆ ಸುಖದುಃಖಾದಿ ಅನುಭವಗಳಿರುವುದಿಲ್ಲ. ಆದರೆ ಬ್ರಹ್ಮಾನುಭವವು ಮಾತ್ರ ಸದಾ ಇದ್ದೇ ಇರುತ್ತದೆ. ಹಾಗೆಯೇ ಸಕಲ ಸದ್ಗುಣಗಳೂ ಅಲಂಕಾರದಂತೆ ಅನುವರ್ತಿಸಿಕೊಂಡು ಬರುತ್ತವೆ.

ಪ್ರಾರಬ್ಧಕರ್ಮವು ಮುಗಿದಾಗ ದೇಹವು ತಾನಾಗಿಯೇ ಬಿದ್ದುಹೋಗುತ್ತದೆ. ಅಜ್ಞಾನವೂ ಅದರ ಕಾರ್ಯಗಳೂ ಸಂಸ್ಕಾರಗಳೂ ಪೂರ್ಣವಾಗಿ ನಾಶವಾಗಿರುವುದರಿಂದ ಅವನು ಅದ್ವಯಬ್ರಹ್ಮದಲ್ಲಿ ಏಕೀಭೂತನಾಗಿ ಈ ಸಂಸಾರಕ್ಕೆ ಮತ್ತೆಂದಿಗೂ ಹಿಂದಿರುಗುವುದಿಲ್ಲ.

ಇದು ಗ್ರಂಥದ ಸಾರಾಂಶ.

ಮೈಸೂರಿನ ಶ್ರೀರಾಮಕೃಷ್ಣಾಶ್ರಮದ ಸಂಸ್ಕೃತ-ಕನ್ನಡ-ಗ್ರಂಥ ಮಾಲೆಯಲ್ಲಿ ಈ ಅನುವಾದವನ್ನು ಸೇರಿಸಿ ಪ್ರಕಟಿಸಲು ಅನುಮತಿಯಿತ್ತಿರುವ ಪೂಜ್ಯ ಸ್ವಾಮಿ ಸೋಮನಾಥಾನಂದಜಿಯವರಿಗೆ ನನ್ನ ಕೃತಜ್ಞತೆಗಳು.

ವೇದಾಂತದ ಅಧ್ಯಯನದಲ್ಲಿ ಅಭಿರುಚಿಯಿರುವ ಕನ್ನಡಿಗರಾದ ಮುಮುಕ್ಷುಗಳು ಈ ನೂತನ ಅನುವಾದವನ್ನು ಸ್ವಾಗತಿಸುವರೆಂದು ನಂಬಿದ್ದೇನೆ.

ಮೈಸೂರು
31-1-1978 ಸ್ವಾಮಿ ಹರ್ಷಾನಂದ

## ದ್ವಿತೀಯ ಮುದ್ರಣದ ಪೀಠಿಕೆ

ಈ ಮುದ್ರಣದಲ್ಲಿ, ಹಿಂದಿನ ಮುದ್ರಣದಲ್ಲಿ ಪ್ರಮಾದವಶಾತ್ ಸೇರಿಹೋಗಿದ್ದ ತಪ್ಪುಗಳನ್ನು ಸರಿಪಡಿಸಿರುವುದಲ್ಲದೆ ಗ್ರಂಥವು ಹೆಚ್ಚು ಉಪಯುಕ್ತವಾಗುವಂತೆ ಶಬ್ದಸೂಚಿಯೊಂದನ್ನೂ ಸೇರಿಸಲಾಗಿದೆ.

ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವ ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನ ಮಾಲೀಕರಿಗೆ ನಮ್ಮ ಕೃತಜ್ಞತೆಗಳು.

ಮೈಸೂರು
ಸ್ವಾಮಿ ವಿವೇಕಾನಂದ ಜಯಂತಿ ಸ್ವಾಮಿ ಹರ್ಷಾನಂದ
24-1-1984

# ಸಂಕೇತಾಕ್ಷರ ಸೂಚಿ

| | |
|---|---|
| ಉ. ಸಾ. | ಉಪದೇಶಸಾಹಸ್ರೀ |
| ಋ. ಸಂ. | ಋಗ್ವೇದಸಂಹಿತಾ |
| ಐ. ಉ. | ಐತರೇಯೋಪನಿಷತ್ |
| ಕ. ಉ. | ಕಠೋಪನಿಷತ್ |
| ಕೇ. ಉ. | ಕೇನೋಪನಿಷತ್ |
| ಕೈ. ಉ. | ಕೈವಲ್ಯೋಪನಿಷತ್ |
| ಕೌ. ಉ. | ಕೌಷೀತಕಿಬ್ರಾಹ್ಮಣೋಪನಿಷತ್ |
| ಗೀತಾ | ಶ್ರೀಮದ್ಭಗವದ್ಗೀತಾ |
| ಛಾಂ. ಉ. | ಛಾಂದೋಗ್ಯೋಪನಿಷತ್ |
| ತೈ. ಉ. | ತೈತ್ತಿರೀಯೋಪನಿಷತ್ |
| ತೈ. ಬ್ರಾ. | ತೈತ್ತಿರೀಯಬ್ರಾಹ್ಮಣಮ್ |
| ನೃ. ಉ. ತಾ. | ನೃಸಿಂಹ-ಉತ್ತರತಾಪಿನ್ಯುಪನಿಷತ್ |
| ನೈ. ಸಿ. | ನೈಷ್ಕರ್ಮ್ಯಸಿದ್ಧಿಃ |
| ಪ್ರ. ಉ. | ಪ್ರಶ್ನೋಪನಿಷತ್ |
| ಬೃ. ಉ. | ಬೃಹದಾರಣ್ಯಕೋಪನಿಷತ್ |
| ಬ್ರ. ಸೂ. | ಬ್ರಹ್ಮಸೂತ್ರಮ್ |
| ಮ. ನಾ. ಉ. | ಮಹಾನಾರಾಯಣೋಪನಿಷತ್ |
| ಮ. ಭಾ. | ಮಹಾಭಾರತಮ್ |
| ಮ. ಸ್ಮೃ. | ಮನುಸ್ಮೃತಿಃ |
| ಮಾಂ. ಉ. | ಮಾಂಡೂಕ್ಯೋಪನಿಷತ್ |
| ಮುಂ. ಉ. | ಮುಂಡಕೋಪನಿಷತ್ |
| ಯೋ. ಸೂ. | ಯೋಗಸೂತ್ರಮ್ |
| ಶ್ವೇ. ಉ. | ಶ್ವೇತಾಶ್ವತರೋಪನಿಷತ್ |

# ವಿಷಯ ಸೂಚಿ

ಓಂ

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ

ಸದಾನಂದ ಪ್ರಣೀತ

# ವೇದಾಂತಸಾರ

---

## ಮಂಗಲಾಚರಣ

**ಅಖಂಡಂ ಸಚ್ಚಿದಾನಂದಮವಾಙ್ಮನಸಗೋಚರಮ್ ।**
**ಆತ್ಮಾನಮಖಿಲಾಧಾರಮಾಶ್ರಯೇಽಭೀಷ್ಟಸಿದ್ಧಯೇ ॥ ೧ ॥**

೧. ಅಖಂಡನೂ[1] ಸತ್-ಚಿತ್-ಆನಂದ ಸ್ವರೂಪನೂ[2] ಮಾತು ಮನಸ್ಸುಗಳಿಗೆ ಸಿಲುಕದವನೂ[3] ಎಲ್ಲ ವಸ್ತುಗಳ ಆಧಾರವೂ[4] ಆದ ಆತ್ಮನನ್ನು[5] (ನನ್ನ) ಇಷ್ಟಾರ್ಥಲಾಭಕ್ಕಾಗಿ[6] ಆಶ್ರಯಿಸುತ್ತೇನೆ.

ಗ್ರಂಥರಚನೆಯು ನಿರ್ವಿಘ್ನವಾಗಿ ನೆರವೇರಲೆಂದು ಗ್ರಂಥಾರಂಭದಲ್ಲಿ ಪರಮಾತ್ಮನನ್ನು ಕುರಿತು ಪ್ರಾರ್ಥಿಸುವುದು ವಾಡಿಕೆ.

1 ತುಂಡರಿಸಲು ಆಗದಂಥ ವಸ್ತು. ಅವಯವಸಹಿತವಾದ ವಸ್ತುಗಳೆಲ್ಲವನ್ನೂ ಅವಯವಚ್ಛೇದದ ಮೂಲಕ ನಾಶಪಡಿಸಬಹುದು. ಆತ್ಮನಾದರೋ ನಿರವಯವನು, ಆದುದರಿಂದಲೇ ಅವಿನಾಶಿಯು.

2 ಸತ್= ಹುಟ್ಟಿಲ್ಲದವನು, ಸದಾ ಇರತಕ್ಕವನು, ಇರವಿನ ಸ್ವರೂಪನು.

ಚಿತ್= ಅರಿವಿನ ಸ್ವರೂಪವನೂ ಚೈತನ್ಯಸ್ವರೂಪನು.

ಆನಂದ= ದುಃಖದ ಲವಲೇಶವೂ ಇಲ್ಲದವನು, ಅನಂತ ಆನಂದದಸ್ವರೂಪನು.

3 ನಮ್ಮ ಮಾತು ಮನಸ್ಸುಗಳು ಪಂಚೇಂದ್ರಿಯಗಳ ಮೂಲಕ ಬರುವ ಅನುಭವಗಳನ್ನು ಮಾತ್ರ ವಿವರಿಸಬಲ್ಲವು, ಗ್ರಹಿಸಬಲ್ಲವು. ಆತ್ಮನು ಇಂದ್ರಿಯಗಳಿಗೆ ಅಗೋಚರನಾದುದರಿಂದ ನಮ್ಮ ಶಬ್ದಕೋಶದಲ್ಲಿ ಅವನನ್ನು ವಿವರಿಸತಕ್ಕ ಶಬ್ದಗಳಿಲ್ಲ.

ನಮ್ಮ ಭಾವನಾಕೋಶದಲ್ಲಿ ಅವನನ್ನು ಗ್ರಹಿಸತಕ್ಕ ಭಾವನೆಗಳೂ ಇಲ್ಲ. ಆದುದರಿಂದಲೇ ಉಪನಿಷತ್ತುಗಳು ಅವನನ್ನು ಹೀಗೆ ವಿವರಿಸುತ್ತವೆ: ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ, 'ಯಾವುದರಿಂದ ಮಾತುಗಳು, ಮನಸ್ಸಿನೊಂದಿಗೆ (ಅದನ್ನು) ಹೊಂದಲಾರದೆ ಹಿಂತಿರುಗುವುವೊ' (ತೈ. ಉ. ೨, ೪, ೨.೯); ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ, 'ಮಾತಿನಿಂದಾಗಲಿ ಮನಸ್ಸಿನಿಂದಾಗಲಿ ಕಣ್ಣಿನಿಂದಾಗಲಿ ಹೊಂದಲು ಶಕ್ಯವಲ್ಲ' (ಕ.ಉ. ೬, ೧೨).

4 ಈ ಜಗತ್ತಿನ ಸೃಷ್ಟಿ ಸ್ಥಿತಿ ಪ್ರಳಯಗಳು ಆತ್ಮನಿಂದಲೇ ಆಗುವುದರಿಂದ ಅವನು ಎಲ್ಲ ವಸ್ತುಗಳಿಗೂ ಆಧಾರಭೂತನು. ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಗಣಾ ಇವ, 'ದಾರದಲ್ಲಿ ಪೋಣಿಸಿದ ಮಣಿಗಳಂತೆ ಈ ಜಗತ್ತೆಲ್ಲವೂ ನನ್ನಲ್ಲಿ ಪೋಣಿಸಲ್ಪಟ್ಟಿವೆ' ಎಂದು ಗೀತೆಯಲ್ಲಿ (೭-೭) ಭಗವಂತನು ಹೇಳಿರುತ್ತಾನೆ.

5 ನಮ್ಮ ಆತ್ಮವೇ ಆಗಿರುವ ಪರಮಾತ್ಮವಸ್ತುವನ್ನು, ಅದ್ವೈತವೇದಾಂತದಲ್ಲಿ ಆತ್ಮ-ಪರಮಾತ್ಮರಿಬ್ಬರೂ ಅಥವಾ ಆತ್ಮ-ಬ್ರಹ್ಮರಿಬ್ಬರೂ ಅಭಿನ್ನ.

6 ಗ್ರಂಥ ನಿರ್ವಿಘ್ನಸಮಾಪ್ತಿಗಾಗಿ.

ಈ ಶ್ಲೋಕದಲ್ಲಿ ಅಖಿಲಾಧಾರಂ ಎನ್ನುವುದು ಸಗುಣಬ್ರಹ್ಮವನ್ನೂ ಉಳಿದ ಪದಗಳು ನಿರ್ಗುಣಬ್ರಹ್ಮವನ್ನೂ ಸೂಚಿಸುತ್ತವೆ.

## ಗುರುನಮಸ್ಕಾರ

**ಅರ್ಥತೋಽಪ್ಯದ್ವಯಾನಂದಾನತೀತದ್ವೈತಭಾನತಃ ।**
**ಗುರೂನಾರಾಧ್ಯ ವೇದಾಂತಸಾರಂ ವಕ್ಷ್ಯೇ ಯಥಾಮತಿ ॥ ೨ ॥**

೨. ದ್ವೈತದ ತೋರ್ಕೆಯನ್ನು ಕಳೆದುಕೊಂಡಿರುವುದರಿಂದ (ಹೆಸರಿನಿಂದ ಮಾತ್ರವಲ್ಲದೆ) ಅರ್ಥದ ದೃಷ್ಟಿಯಿಂದಲೂ "ಅದ್ವಯಾನಂದ"[1]ರೆನಿಸಿದ ಗುರುಗಳನ್ನು ಪೂಜಿಸಿ ವೇದಾಂತಸಾರವನ್ನು[2] ನನ್ನ ಬುದ್ಧಿಗೆ ತೋಚಿದಂತೆ[3] ಹೇಳುತ್ತೇನೆ.

1 ಅದ್ವಯಾನಂದ ಎಂಬುದು ಸದಾನಂದರ ಗುರುಗಳ ಹೆಸರು. ಅವರು ಜ್ಞಾನಿಗಳಾದುದರಿಂದ ಅವರಿಗೆ ದ್ವೈತದ ತೋರ್ಕೆಯು ನಿವೃತ್ತವಾಗಿದೆ, ಅದ್ವಯ ಬ್ರಹ್ಮದ ಆನಂದವು ಲಭಿಸಿದೆ.

2 ವೇದಾಂತದ ಸಾರವನ್ನು ಒಳಕೊಂಡಿರುವ ಈ ಗ್ರಂಥವನ್ನು—ಎಂದೂ ಆಗಬಹುದು.

3 ಇದು ಗ್ರಂಥಕರ್ತೃಗಳ ವಿನಯವನ್ನು ಸೂಚಿಸುತ್ತದೆ.

### ‘ ವೇದಾಂತ ’ ಶಬ್ದದ ಅರ್ಥ

**ವೇದಾಂತೋ ನಾಮ ಉಪನಿಷತ್ಪ್ರಮಾಣಂ ತದುಪಕಾರೀಣಿ ಶಾರೀರಕಸೂತ್ರಾದೀನಿ ಚ ॥ ೩ ॥**

೩. ವೇದಾಂತವೆಂದರೆ[1] (ಆತ್ಮನ ಇರುವಿಕೆಗೆ) ಪ್ರಮಾಣವಾದ[2] ಉಪನಿಷತ್ತು[3] ಮತ್ತು ಅದಕ್ಕೆ ಸಹಾಯಕವಾಗಿರುವ[4] ಶಾರೀರಕ ಸೂತ್ರವೇ[5] ಮೊದಲಾದ[6] (ಗ್ರಂಥಗಳು).

1 ವೇದಗಳ ಕೊನೆಯ ಭಾಗ ಎಂಬುದು ವೇದಾಂತಶಬ್ದದ ಅಕ್ಷರಾರ್ಥ, ವೇದಗಳ ಸಿದ್ಧಾಂತ ಅಥವಾ ಸಾರಭೂತವಾದ ಉಪದೇಶ ಎಂಬುದು ತಾತ್ಪರ್ಯ. ಕಾಲದ ದೃಷ್ಟಿಯಿಂದ ಉಪನಿಷತ್ತುಗಳೇ ಪ್ರಪ್ರಥಮ ವೇದಾಂತ.

2 ‘ಮಾ’ ಎಂದರೆ ಅಳೆಯುವುದು. ಅಳೆಯಲು, ಅರಿಯಲು, ಸಹಾಯಕವಾದುದೇ ‘ಮಾನ’ ಅಥವಾ ‘ಪ್ರ-ಮಾಣ’. ಅದ್ವೈತವೇದಾಂತವು ವಸ್ತುಜ್ಞಾನವನ್ನು ಪಡೆಯಲು ಸಹಾಯಕವಾದ ಆರು ಪ್ರಮಾಣಗಳನ್ನು ಸ್ವೀಕರಿಸುತ್ತದೆ; ಪ್ರತ್ಯಕ್ಷ. ಅನುಮಾನ, ಆಗಮ ಅಥವಾ ಶಬ್ದ, ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧಿ. ಇವುಗಳಲ್ಲಿ ಇಂದ್ರಿಯಾತೀತನಾದ ಆತ್ಮನ ವಿಷಯವನ್ನು ತಿಳಿಸಿಕೊಡಬಲ್ಲ ಪ್ರಮಾಣವು ಆಗಮ ಅಥವಾ ವೇದಗಳು ಮಾತ್ರ. (ವೇದಗಳೆಂದರೆ ಇಲ್ಲಿ ಉಪನಿಷತ್ತುಗಳನ್ನು ಗ್ರಹಿಸಬೇಕು.)

3 ವಿಶರಣ, ಗತಿ, ಅವಸಾದನ—ಎಂಬ ಅರ್ಥಗಳುಳ್ಳ ‘ಸದ್’ ಧಾತುವಿನ ಹಿಂದೆ ‘ಉಪ’, ‘ನಿ’ ಎಂಬ ಉಪಸರ್ಗಗಳೂ ಮುಂದೆ ‘ಕ್ವಿಪ್’ ಎಂಬ ಪ್ರತ್ಯಯವೂ ಬಂದು ‘ಉಪನಿಷತ್’ ಎಂಬ ರೂಪವು ಆಗಿರುತ್ತದೆ. ಬ್ರಹ್ಮವಿಷಯಕವಾದ ವಿದ್ಯೆ ಎಂಬುದು ತಾತ್ಪರ್ಯಾರ್ಥ. ವಿರಕ್ತರೂ ಬ್ರಹ್ಮವಿದ್ಯಾನಿಷ್ಠರೂ ಆದ ಮುಮುಕ್ಷುಗಳ ಸಂಸಾರಬೀಜವಾದ ಅವಿದ್ಯೆ ಕಾಮ ಕರ್ಮಗಳನ್ನು ನಾಶಗೊಳಿಸುವುದರಿಂದ (ಸದ್=ವಿಶರಣ= ನಾಶಗೊಳಿಸುವುದು ಬ್ರಹ್ಮವಿದ್ಯೆಯು ಉಪನಿಷತ್ ಎನಿಸುತ್ತದೆ. ಅಥವಾ ಮುಮುಕ್ಷುಗಳನ್ನು ಬ್ರಹ್ಮದಲ್ಲಿ ಸೇರಿಸುವುದರಿಂದ (ಸದ್= ಗತಿ= ಗುರಿ) ಈ ವಿದ್ಯೆಯು

ಉಪನಿಷತ್. ಅಥವಾ ಗರ್ಭವಾಸ ಜನ್ಮ ರೋಗ ಮೃತ್ಯು ಮೊದಲಾದ ಉಪದ್ರವ ಸಮೂಹವನ್ನು ಶಿಥಿಲಮಾಡುವುದರಿಂದ(ಸದ್= ಅವಸಾದನ= ಶಿಥಿಲಗೊಳಿಸುವುದು) ಈ ವಿದ್ಯೆಯೇ ಉಪನಿಷತ್ ಎನ್ನಿಸಿದೆ. (ಶ್ರೀ ಶಂಕರಭಗವತ್ಪಾದರ ಕಠೋಪನಿಷತ್ ಭಾಷ್ಯಾವತರಣಿಕೆಯನ್ನು ನೋಡಿ.)

4 ವೇದಾರ್ಥಕ್ಕೆ ಅನುಗುಣವಾದ, ಅದನ್ನು ಪೋಷಿಸುವ.

5 ಶರೀರದಲ್ಲಿರುವ ಜೀವನೇ ಶಾರೀರಕನು. ಅವನ ನಿಜಸ್ವರೂಪವನ್ನು ವಿವರಿಸುವ ವೇದಾಂತಸೂತ್ರಗಳನ್ನು ಅಥವಾ ಬ್ರಹ್ಮಸೂತ್ರಗಳನ್ನು ಶಾರೀರಕ ಸೂತ್ರಗಳು ಎಂದೂ ಕರೆಯುವುದುಂಟು.

6 ಭಗವದ್ಗೀತೆಯೇ ಮೊದಲಾದ ವೇದಾಂತಸಿದ್ಧಾಂತಕ್ಕೆ ಅನುಗುಣವಾಗಿರುವ ಇತರ ಗ್ರಂಥಗಳು.

### ಅನುಬಂಧ–ಚತುಷ್ಟಯ

**ಅಸ್ಯ ವೇದಾಂತಪ್ರಕರಣತ್ವಾತ್ ತದೀಯೈಃ ಏವ ಅನುಬಂಧೈಃ ತದ್ವತ್ತಾಸಿದ್ಧೇಃ ನ ತೇ ಪೃಥಗಾಲೋಚನೀಯಾಃ ॥ ೪ ॥**

೪. ಇದು[1] ವೇದಾಂತದ ಪ್ರಕರಣ ಗ್ರಂಥವಾಗಿರುವುದರಿಂದ[2], ಅದರ ಅನುಬಂಧಗಳೇ[4] ಇದಕ್ಕೂ ಆಗುವುದರಿಂದ, ಅವನ್ನು ಕುರಿತು ಬೇರೆಯಾಗಿ ವಿಚಾರ ಮಾಡಬೇಕಾಗಿಲ್ಲ.

1 ಈ ಗ್ರಂಥವು.

2 ಯಾವುದಾದರೂ ಶಾಸ್ತ್ರದ ವಿಷಯವೊಂದನ್ನು ವಿವರಿಸುವ ಅಥವಾ ಅದಕ್ಕೆ ಪ್ರವೇಶವನ್ನೊದಗಿಸುವ ಗ್ರಂಥವನ್ನು ಪ್ರಕರಣಗ್ರಂಥವೆಂದು ಕರೆಯುತ್ತಾರೆ. ಶಾಸ್ತ್ರೈಕದೇಶಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಮ್ । ಆಹುಃ ಪ್ರಕರಣಂ ನಾಮ ಗ್ರಂಥಭೇದಂ ವಿಪಶ್ಚಿತಃ ॥ ‘ಶಾಸ್ತ್ರದ ಒಂದುಭಾಗಕ್ಕೆ ಸಂಬಂಧಿಸಿರುವ ಅಥವಾ ಶಾಸ್ತ್ರದಿಂದಾಗಬೇಕಾದ ಮತ್ತೊಂದು ಕಾರ್ಯದಲ್ಲಿ ತಾತ್ಪರ್ಯವನ್ನುಳ್ಳ ವಿಶೇಷ ಗ್ರಂಥವನ್ನು ಪ್ರಕರಣವೆಂದು ಜ್ಞಾನಿಗಳು ಕರೆಯುತ್ತಾರೆ.’

3 ವೇದಾಂತಶಾಸ್ತ್ರದ.

4 ಅನುಬಂಧವೆಂದರೆ ಸಂಬಂಧಿಸಿರುವ, ಪ್ರಾರಂಭಿಕ ವಿಷಯ. ಇದನ್ನು ಮುಂದಿನ ಭಾಗದಲ್ಲಿ ವಿವರಿಸಿದೆ.

**ತತ್ರ ಅನುಬಂಧೋ ನಾಮ ಅಧಿಕಾರಿ-ವಿಷಯ-ಸಂಬಂಧ-ಪ್ರಯೋಜನಾನಿ ॥ ೫ ॥**

೫. ಅಲ್ಲಿ[1] ಅನುಬಂಧ[2]ಎಂದರೆ ಅಧಿಕಾರಿ, ವಿಷಯ, ಸಂಬಂಧ ಮತ್ತು ಪ್ರಯೋಜನ.

1 ವೇದಾಂತಶಾಸ್ತ್ರದಲ್ಲಿ.

2 ಶಾಸ್ತ್ರದಲ್ಲಿ ಹೇಳಿರುವ ವಿಷಯವನ್ನು ಅರ್ಥಮಾಡಿಕೊಳ್ಳಬಲ್ಲವನು, ಅದನ್ನು ಅನುಷ್ಠಾನಕ್ಕೆ ತರುವ ಶಕ್ತಿಯಿರುವವನು 'ಅಧಿಕಾರಿ'. ಶಾಸ್ತ್ರದ ತಾತ್ಪರ್ಯಾರ್ಥವೇ 'ವಿಷಯ'. ಶಾಸ್ತ್ರಾಧ್ಯಯನದಿಂದ, ಅದರ ತತ್ತ್ವಗಳ ಅನುಷ್ಠಾನದಿಂದ ಆಗುವ ಉಪಯೋಗವೇ, 'ಪ್ರಯೋಜನ'. ಶಾಸ್ತ್ರಕ್ಕೂ ವಿಷಯಕ್ಕೂ ಅಥವಾ ಶಾಸ್ತ್ರಕ್ಕೂ ಪ್ರಯೋಜನಕ್ಕೂ ಇರುವ ಸಂಬಂಧವೇ 'ಸಂಬಂಧ'.

### ಅಧಿಕಾರಿಯ ಲಕ್ಷಣ

**ಅಧಿಕಾರೀ ತು ವಿಧಿವದ್-ಅಧೀತ-ವೇದವೇದಾಂಗತ್ವೇನ ಆಪಾತತಃ ಅಧಿಗತ-ಅಖಿಲ-ವೇದಾರ್ಥಃ, ಅಸ್ಮಿನ್ ಜನ್ಮನಿ ಜನ್ಮಾಂತರೇ ವಾ ಕಾಮ್ಯ-ನಿಷಿದ್ಧ-ವರ್ಜನಪುರಸ್ಸರಂ ನಿತ್ಯ-ನೈಮಿತ್ತಿಕ-ಪ್ರಾಯಶ್ಚಿತ್ತ-ಉಪಾಸನಾಽನುಷ್ಠಾನೇನ ನಿರ್ಗತನಿಖಿಲಕಲ್ಮಷತಯಾ ನಿತಾಂತ-ನಿರ್ಮಲಸ್ವಾಂತಃ ಸಾಧನಚತುಷ್ಟಯಸಂಪನ್ನಃ ಪ್ರಮಾತಾ ॥ ೬ ॥**

೬. ವಿಧಿವತ್ತಾಗಿ[1] ವೇದ-ವೇದಾಂಗಗಳನ್ನು[2] ಅಧ್ಯಯನ ಮಾಡಿ, ಸಕಲ ವೇದಾರ್ಥವನ್ನೂ ಸ್ಥೂಲವಾಗಿ ಅರಿತಿರುವ[3], ಈ ಜನ್ಮದಲ್ಲಾಗಲಿ ಹಿಂದಿನ ಜನ್ಮಗಳಲ್ಲಾಗಲಿ[4] ಕಾಮ್ಯ-ನಿಷಿದ್ಧ-ಕರ್ಮಗಳನ್ನು ತ್ಯಜಿಸಿ ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತ ಕರ್ಮಗಳನ್ನೂ ಉಪಾಸನೆಯನ್ನೂ ಅನುಷ್ಠಿಸಿ[5] ತನ್ಮೂಲಕ ಎಲ್ಲ ಕಲ್ಮಷಗಳನ್ನೂ ಕಳೆದುಕೊಂಡು, ಅತ್ಯಂತ ಶುದ್ಧಮನಸ್ಕನಾಗಿ, ಸಾಧನ ಚತುಷ್ಟಯವನ್ನು[6] ಸಂಪಾದಿಸಿಕೊಂಡಿರುವ ಪ್ರಮಾತೃವೇ[7] 'ಅಧಿಕಾರಿ'.

1 ಉಪನಯನವನ್ನು ಮಾಡಿಸಿಕೊಂಡು ಶ್ರೋತ್ರಿಯರಾದ ಆಚಾರ್ಯರನ್ನು ಬಳಿ ಸಾರಿ ಅವರ ಮನೆಯಲ್ಲಿ ಬ್ರಹ್ಮಚರ್ಯವನ್ನು ಅನುಷ್ಠಿಸುತ್ತ.

2 ವೇದಾರ್ಥವನ್ನು ಸರಿಯಾಗಿ ಗ್ರಹಿಸಬೇಕಾದರೆ ಶಬ್ದಗಳ ಉಚ್ಚಾರಣೆ ಸ್ವರ ಇತ್ಯಾದಿಗಳನ್ನು ಕುರಿತ 'ಶಿಕ್ಷಾ', ಶಬ್ದಗಳ ಶುದ್ಧವಾದ ರೂಪ ಪ್ರಯೋಗಗಳನ್ನು ವಿವರಿಸುವ 'ವ್ಯಾಕರಣ', ಮಂತ್ರಗಳ ಅಕ್ಷರ ಮಾತ್ರೆಗಳ ಜೋಡಣೆಯನ್ನು ನಿರೂಪಿಸುವ 'ಛಂದಸ್ಸು', ವೈದಿಕ ಶಬ್ದಗಳ ಅರ್ಥವನ್ನು ನಿರ್ವಚನಮಾಡುವ 'ನಿರುಕ್ತ', ವೈದಿಕ ಕರ್ಮಗಳ ಕಾಲನಿರ್ಣಯ ಮಾಡುವ 'ಜ್ಯೋತಿಷ', ವೈದಿಕ ಕರ್ಮಗಳ ಪ್ರಯೋಗ ವಿಧಿಗಳನ್ನು ತಿಳಿಸುವ 'ಕಲ್ಪ'–ಎಂಬ ಆರು ವೇದಾಂಗಗಳನ್ನೂ ಅರಿತಿರಬೇಕು.

3 ವೇದಾರ್ಥವನ್ನು ಸಂಪೂರ್ಣವಾಗಿ ಮತ್ತು ಸೂಕ್ಷ್ಮವಾಗಿ ಅರಿತರೆ ಮೋಕ್ಷವೇ ಫಲವಾಗಿ ಸಿದ್ಧಿಸುತ್ತದೆ. ಆಗ ಈ ಶಾಸ್ತ್ರದ ಅಧ್ಯಯನದ ಆವಶ್ಯಕತೆಯೇ ಇರುವುದಿಲ್ಲ. ಆದುದರಿಂದಲೇ ಆಪಾತತಃ (ಮೇಲ್ನೋಟಕ್ಕೆ, ಸಾಮಾನ್ಯವಾಗಿ) ಎಂಬ ಪದವನ್ನು ಪ್ರಯೋಗಿಸಿದೆ. ಸಾಮಾನ್ಯವಾಗಿ ಅರಿಯುವುದು ಎಂದರೆ ಸ್ಥೂಲವಾಗಿ, ನಿಶ್ಚಿತಜ್ಞಾನವಿಲ್ಲದೆ ಅರಿಯುವುದು. ಅದರ ಜೊತೆಗೆ ಸಂಶಯಗಳೂ ಇದ್ದೇ ಇರುತ್ತವೆ.

4 ವಿದುರ ಶುಕ ಮೊದಲಾದವರನ್ನಿಲ್ಲಿ ನೆನಪಿಗೆ ತಂದುಕೊಳ್ಳಬಹುದು.

5 ನಿತ್ಯನೈಮಿತ್ತಿಕಾದಿಗಳನ್ನು ಮುಂದಿನ ಖಂಡಗಳಲ್ಲಿ (೬-೧೨) ವಿವರಿಸಿದೆ.

6 ಇವನ್ನೂ ಮುಂದೆ (೧೫-೨೫) ವಿವರಿಸಿದೆ.

7 ಯಥಾರ್ಥಜ್ಞಾನವನ್ನು ಪಡೆಯುವ ಶಕ್ತಿಯಿರುವವನು

## ಕಾಮ್ಯಕರ್ಮ

**ಕಾಮ್ಯಾನಿ-ಸ್ವರ್ಗಾದಿ-ಇಷ್ಟಸಾಧನಾನಿ ಜ್ಯೋತಿಷ್ಟೋಮಾದೀನಿ ॥೭॥**

೭. ಸ್ವರ್ಗವೇ ಮೊದಲಾದ[1] ಇಷ್ಟವಸ್ತುಗಳನ್ನು ಸಾಧಿಸಿಕೊಡಬಲ್ಲ ಜ್ಯೋತಿಷ್ಟೋಮವೇ[2] ಮೊದಲಾದವು[3] ಕಾಮ್ಯ (ಕರ್ಮ)ಗಳು.

1 ಐಶ್ವರ್ಯ, ಪುತ್ರರು ಮೊದಲಾದ.

2 ಅಗ್ನಿಯನ್ನು ಕುರಿತ ಪ್ರಾರ್ಥನೆಗಳುಳ್ಳ ಅಗ್ನಿಷ್ಟೋಮವೆಂಬ ಯಾಗ. ಸ್ವರ್ಗಕಾಮನಾದವನು ಜ್ಯೋತಿಷ್ಟೋಮವನ್ನು ಮಾಡಬೇಕೆಂದು ಶ್ರುತಿವಾಕ್ಯವಿದೆ : ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ.

3 ಕಾರೀರೀಷ್ಟಿ (ಮಳೆಗಾಗಿ ಮಾಡುವ ಯಾಗ), ಪುತ್ರಕಾಮೇಷ್ಟಿ (ಪುತ್ರ ಸಂತಾನಕ್ಕಾಗಿ ಮಾಡುವ ಯಾಗ) ಇತ್ಯಾದಿಗಳು.

### ನಿಷಿದ್ಧಕರ್ಮ

**ನಿಷಿದ್ಧಾನಿ-ನರಕಾದ್ಯನಿಷ್ಟಸಾಧನಾನಿ ಬ್ರಾಹ್ಮಣಹನನಾದೀನಿ ॥ ೮ ॥**

೮. ನರಕವೇ ಮೊದಲಾದ[1] ಅನಿಷ್ಟಫಲಗಳನ್ನು ಸಾಧಿಸಿಕೊಡುವ ಬ್ರಹ್ಮಹತ್ಯೆಯೇ[2] ಮೊದಲಾದುವು[3] ನಿಷಿದ್ಧ[4](ಕರ್ಮ)ಗಳು.

1 ಈ ಲೋಕದಲ್ಲಿ ಅನುಭವಿಸುವ ದುಃಖದಾರಿದ್ರ್ಯಾದಿಗಳು, ನರಜನ್ಮಕ್ಕಿಂತ ಕೀಳಾದ ಪ್ರಾಣಿಗಳ ಕೀಟಗಳ ಜನ್ಮಗಳು.

2 ಬ್ರಾಹ್ಮಣೋ ನ ಹಂತವ್ಯಃ, 'ಬ್ರಾಹ್ಮಣನನ್ನು ಕೊಲ್ಲಬಾರದು'—ಎಂದು ಶ್ರುತಿವಾಕ್ಯವಿದೆ.

3 ಸುರಾಪಾನ, ವ್ಯಭಿಚಾರ, ಸುಳ್ಳು ಹೇಳುವುದು, ಕದಿಯುವುದು ಇತ್ಯಾದಿ.

4 ಮಾಡಬಾರದು ಎಂದು ಹೇಳಿರುವ.

### ನಿತ್ಯಕರ್ಮ

**ನಿತ್ಯಾನಿ-ಅಕರಣೇ ಪ್ರತ್ಯವಾಯಸಾಧನಾನಿ ಸಂಧ್ಯಾವಂದನಾದೀನಿ ॥ ೯ ॥**

೯. ಮಾಡದಿದ್ದರೆ ಪ್ರತ್ಯವಾಯವನ್ನುಂಟುಮಾಡುವ[1] ಸಂಧ್ಯಾವಂದನೆಯೇ[2] ಮೊದಲಾದುವು[3] ನಿತ್ಯ (ಕರ್ಮ)ಗಳು.

1 ಅವಶ್ಯವಾಗಿ ಮಾಡಬೇಕಾದ ಕರ್ಮಗಳು ನಿತ್ಯಕರ್ಮಗಳು. ಇವುಗಳನ್ನು ಮಾಡಿದರೆ ಯಾವ ವಿಶೇಷ ಫಲವೂ ಇಲ್ಲ. ಮಾಡದಿದ್ದರೆ ಮಾತ್ರ ಅನಿಷ್ಟ ಫಲವನ್ನು ಕೊಡುವ 'ಪ್ರತ್ಯವಾಯ' ವೆಂಬ ದೋಷವುಂಟಾಗುತ್ತದೆ. ಇದು ಮೀಮಾಂಸಕರ ಮತ.

ಆದರೆ ವೇದಾಂತಿಗಳು ಈ ಮತವನ್ನು ಒಪ್ಪುವುದಿಲ್ಲ. ಅಸತ್ತಿನಿಂದ ಸತ್ತು, ಅಭಾವದಿಂದ ಭಾವರೂಪವಾದ ವಸ್ತು, ಎಂದಿಗೂ, ಉಂಟಾಗಲು ಸಾಧ್ಯವಿಲ್ಲ. ನಿತ್ಯ

ಕರ್ಮವನ್ನು ಮಾಡದಿರುವುದು ಎಂಬ ಅಭಾವದಿಂದ ಪ್ರತ್ಯವಾಯವೆಂಬ ಭಾವರೂ
ಫಲವು ಉಂಟಾಗಲು ಸಾಧ್ಯವೇ ಇಲ್ಲ. ನಿತ್ಯಕರ್ಮವನ್ನು ಮಾಡುವುದರಿಂದ ಅಶುಭ
ವಾದ ಪ್ರಾರಬ್ಧಕರ್ಮದ ಫಲವು ಕ್ಷಯಿಸುತ್ತದೆ. ಮಾಡದಿದ್ದರೆ ಅಶುಭಫಲವು ಬಂದ
ದುಃಖವನ್ನೀಯುತ್ತದೆ. ಪ್ರತ್ಯವಾಯ ಎಂದರೆ ಇಷ್ಟೇ.

ಈ ವಿಷಯವನ್ನು ಶ್ರೀಶಂಕರ ಭಗವತ್ಪಾದರು ತಮ್ಮ ತೈತ್ತಿರೀಯ ಭಾಷ್ಯ
ಅವತರಣಿಕೆಯಲ್ಲಿ ಚರ್ಚಿಸಿದ್ದಾರೆ.

2 ಪ್ರಾತಃಕಾಲ ಮಧ್ಯಾಹ್ನ ಸಾಯಂಕಾಲಗಳಲ್ಲಿ ಮಾಡಬೇಕಾದ ಸೂರ್ಯ
ಮಂಡಲದಲ್ಲಿ ಅಂತರ್ಗತನಾಗಿರುವ ಪರಮಾತ್ಮನ ಉಪಾಸನೆ. ಗಾಯತ್ರೀ ಮಂತ್ರ
ಜಪ ಈ ಉಪಾಸನೆಯ ಮುಖ್ಯ ಅಂಗ.

3 ಅಗ್ನಿಹೋತ್ರ, ಪಂಚಮಹಾಯಜ್ಞ ಮೊದಲಾದುವು.

## ನೈಮಿತ್ತಿಕ ಕರ್ಮ

**ನೈಮಿತ್ತಿಕಾನಿ–ಪುತ್ರಜನ್ಮಾದ್ಯನುಬಂಧೀನಿ ಜಾತೇಷ್ಟ್ಯಾದೀನಿ ॥೧೦॥**

೧೦. ಪುತ್ರಜನನವೇ ಮೊದಲಾದವುಗಳಿಗೆ ಸಂಬಂಧಪಟ್ಟ ಜಾತೇಷ್ಟಿಯೆ
ಮೊದಲಾದುವು ನೈಮಿತ್ತಿಕ(ಕರ್ಮ)ಗಳು.

ನಿಮಿತ್ತಕ್ಕೆ ಸಂಬಂಧಿಸಿದ್ದು ನೈಮಿತ್ತಿಕ. ಯಾವುದೋ ಒಂದು ವಿಶೇಷ ನಿಮಿತ್ತ
ಅಥವಾ ಕಾರಣ ಇರುವುದರಿಂದ ಮಾಡಬೇಕಾಗುವ ಕರ್ಮವು ನೈಮಿತ್ತಿಕ ಕರ್ಮ
ಪುತ್ರನು ಹುಟ್ಟಿದಾಗ ಮಾಡಬೇಕಾಗುವ ಜಾತೇಷ್ಟಿಯೆಂಬ ಯಾಗ, ಅಮಾವಾಸ್ಯೆ
ಪೌರ್ಣಿಮೆಗಳಲ್ಲಿ ಮಾಡಬೇಕಾಗುವ ದರ್ಶ-ಪೂರ್ಣಮಾಸ ಯಾಗಗಳು, ಶ್ರಾದ್ಧಾ
ಕರ್ಮಗಳು—ಇವೆಲ್ಲ ಈ ಗುಂಪಿಗೆ ಸೇರಿದವು.

## ಪ್ರಾಯಶ್ಚಿತ್ತ ಕರ್ಮ

**ಪ್ರಾಯಶ್ಚಿತ್ತಾನಿ—ಪಾಪಕ್ಷಯಸಾಧನಾನಿ ಚಾಂದ್ರಾಯಣಾ
ದೀನಿ ॥ ೧೧ ॥**

೧೧. ಪಾಪವನ್ನು ನಾಶಮಾಡಲು ಸಾಧನವಾಗಿರುವ ಚಾಂದ್ರಾಯಣವೆ
ಮೊದಲಾದುವು ಪ್ರಾಯಶ್ಚಿತ್ತ (ಕರ್ಮ)ಗಳು.

ಕೆಟ್ಟ ಕೆಲಸದ ಅದೃಷ್ಟರೂಪವಾದ ಫಲವೇ ಪಾಪ. ಇದು ಮುಂದೆ ದೃಷ್ಟ ಫಲವಾದ ದುಃಖ ಸಂತಾಪಗಳನ್ನು ತಂದೊಡ್ಡುತ್ತದೆ. ಪಾಪ ಮಾಡಿದವನು ಅದರ ಫಲದಿಂದ ತಪ್ಪಿಸಿಕೊಳ್ಳಬೇಕಾದರೆ ಪಶ್ಚಾತ್ತಾಪಪಟ್ಟು ಶಾಸ್ತ್ರವಿಹಿತವಾದ ಪಾಪನಾಶಕ ಶಕ್ತಿಯುಳ್ಳ ಪ್ರಾಯಶ್ಚಿತ್ತ ಕರ್ಮಗಳನ್ನು ಮಾಡಬೇಕು.

ಅಂಗಿರಸ ಸ್ಮೃತಿಯಲ್ಲಿ ಪ್ರಾಯಶ್ಚಿತ್ತವನ್ನು ಹೀಗೆ ನಿರ್ವಚನ ಮಾಡಿದೆ: ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ । ತಪೋನಿಶ್ಚಯ-ಸಂಯೋಗಾತ್ ಪ್ರಾಯಶ್ಚಿತ್ತಮಿತಿ ಸ್ಮೃತಮ್ ॥ 'ಪ್ರಾಯ ಎಂದರೆ ತಪಸ್ಸು, ಚಿತ್ತ ಎಂದರೆ ನಿಶ್ಚಯ, (ಪಾಪನಾಶಕ್ಕಾಗಿ ಮಾಡುವ) ತಪಸ್ಸಿನ ನಿಶ್ಚಯದಿಂದ ಇದನ್ನು ಪ್ರಾಯಶ್ಚಿತ್ತವೆಂದು ಹೇಳಿರುತ್ತಾರೆ.'

ಧರ್ಮಶಾಸ್ತ್ರಗ್ರಂಥಗಳಲ್ಲಿ ಅನೇಕ ವಿಧದ ಪಾಪಗಳನ್ನೂ ಪ್ರಾಯಶ್ಚಿತ್ತಗಳನ್ನೂ ವಿವರಿಸಿದೆ. ಉದಾಹರಣೆಗೆ: ಅಘಮರ್ಷಣ, ಅತಿಕೃಚ್ಛ್ರ, ಅರ್ಧಕೃಚ್ಛ್ರ, ಕೃಚ್ಛ್ರಾತಿ ಕೃಚ್ಛ್ರ, ಏಕಭಕ್ತ, ಗೋವ್ರತ, ಪರ್ಣಕೂರ್ಚ, ಚಾಂದ್ರಾಯಣ ಇತ್ಯಾದಿಗಳು.

ಚಾಂದ್ರಾಯಣವನ್ನು ಚಂದ್ರಸ್ಯ ಅಯನಮಿವ ಅಯನಂ ಚರಣಂ ಯಸ್ಮಿನ್ ಕರ್ಮಣಿ ಹ್ರಾಸವೃದ್ಧಿಭ್ಯಾಂ ತತ್ ಚಾಂದ್ರಾಯಣಮ್, 'ಯಾವ ಕರ್ಮದಲ್ಲಿ ಚಂದ್ರನ ಕಲೆಗಳಂತೆ, ಕ್ಷಯವೃದ್ಧಿಗಳಂತೆ, (ಆಹಾರದ) ಕ್ಷಯವೃದ್ಧಿಗಳಿವೆಯೋ ಅದು ಚಾಂದ್ರಾಯಣ' ಎಂದು ಮಿತಾಕ್ಷರರು ನಿರ್ವಚನ ಮಾಡಿರುತ್ತಾರೆ. ಈ ವ್ರತದಲ್ಲಿ ಆಹಾರವನ್ನು ಪೌರ್ಣಿಮೆಯಿಂದ ಅಮಾವಾಸ್ಯೆಯವರೆಗೆ ಕಮ್ಮಿಮಾಡಿ, ಅಮಾವಾಸ್ಯೆ ಯಂದು ಉಪವಾಸಮಾಡಿ, ಮತ್ತೆ ಪಾಡ್ಯಮಿಯಿಂದ ಪೌರ್ಣಮಿಯವರೆಗೆ ಹೆಚ್ಚು ಮಾಡಲಾಗುತ್ತದೆ.

### ಉಪಾಸನೆ

**ಉಪಾಸನಾನಿ–ಸಗುಣಬ್ರಹ್ಮವಿಷಯಮಾನಸವ್ಯಾಪಾರರೂಪಾಣಿ ಶಾಂಡಿಲ್ಯವಿದ್ಯಾದೀನಿ ॥ ೧೨ ॥**

೧೨. ಸಗುಣ–ಬ್ರಹ್ಮವನ್ನು ವಿಷಯವಾಗಿ ಹೊಂದಿರುವ, ಮನಸ್ಸಿನ ಕ್ರಿಯಾರೂಪವಾದ ಶಾಂಡಿಲ್ಯವಿದ್ಯೆಯೇ ಮೊದಲಾದವು ಉಪಾಸನೆಗಳು.

ಉಪಾಸನೆಯೆಂದರೆ ಧ್ಯಾನ ಅಥವಾ ಚಿಂತನೆ. ಇದು ಮನಸ್ಸಿನ ಸಂಕಲ್ಪಶಕ್ತಿ ಯಿಂದ ಉಂಟಾಗತಕ್ಕದ್ದು ಮತ್ತು ಮನಸ್ಸನ್ನು ಉಪಾಸ್ಯವಸ್ತುವಿನ ಕಡೆಗೆ

ಹರಿಯಿಸುವ ಕ್ರಿಯಾರೂಪವಾದದ್ದು. ಆದುದರಿಂದಲೇ ಒಂದು ವಸ್ತುವಿನ ನಿಜ ಸ್ವರೂಪದ ಅರಿವನ್ನು ಉಂಟುಮಾಡುವ 'ಜ್ಞಾನ'ಕ್ಕಿಂತ ಭಿನ್ನವಾದದ್ದು.

ಉಪಾಸನೆಗೆ ವಿಷಯವಾಗಿ ಏನನ್ನು ಬೇಕಾದರೂ ಆರಿಸಿಕೊಳ್ಳಬಹುದು. ಆದರೆ ಆಧ್ಯಾತ್ಮಿಕ ಸಾಧಕರು ಆರಿಸಿಕೊಳ್ಳಬೇಕಾದ ವಿಷಯಗಳನ್ನು ಶಾಸ್ತ್ರಗಳಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಬ್ರಹ್ಮಜ್ಞಾನದಿಂದ ಮೋಕ್ಷವನ್ನು ಪಡೆಯಲಿಚ್ಛಿಸುವವರು ಕೂಡ, ಪ್ರಾರಂಭಿಕ ಹಂತಗಳಲ್ಲಿ, ಶ್ರುತಿಸಮ್ಮತವಾದ ಆದಿತ್ಯ, ನಾಮ, ಬಲ, ಮನಸ್ಸು ಮೊದಲಾದವುಗಳನ್ನಾಗಲಿ, ಯೋಗಶಾಸ್ತ್ರಸಮ್ಮತವಾದ ನಾರಾಯಣಾದಿ ವಿಗ್ರಹಗಳನ್ನಾಗಲೀ ಧ್ಯೇಯವನ್ನಾಗಿಟ್ಟುಕೊಂಡು ಉಪಾಸನೆಯನ್ನು ಅಭ್ಯಸಿಸಬೇಕು. ಇದರಿಂದ ಮನಸ್ಸು ಪರಿಶುದ್ಧಿಯನ್ನೂ ಏಕಾಗ್ರತೆಯನ್ನೂ ಪಡೆದಾಗ ಸಗುಣಬ್ರಹ್ಮವನ್ನೇ ವಿಷಯವಾಗಿ ಆರಿಸಿಕೊಂಡು ಉಪಾಸನೆಯನ್ನು ಮುಂದುವರಿಸಬಹುದು. ಕಾಲ ಕ್ರಮೇಣ ಈ ಉಪಾಸನೆಯು ನಿರ್ಗುಣಬ್ರಹ್ಮದ ಮೇಲೆ ನಿದಿಧ್ಯಾಸನ ಮಾಡಲು ಸಹಾಯಕವಾಗುತ್ತದೆ.

ಜಗತ್ತಿನ ಸತ್ಯತ್ವವನ್ನು ತಾತ್ಕಾಲಿಕವಾಗಿ ಒಪ್ಪಿಕೊಂಡು ಪರಬ್ರಹ್ಮವನ್ನು ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳ ಕರ್ತೃವೆಂಬ ದೃಷ್ಟಿಯಿಂದ ನೋಡಿದಾಗ ಅದು ಸಗುಣಬ್ರಹ್ಮವೆನ್ನಿಸುವುದು. ಹಗ್ಗದಲ್ಲಿ ಹಾವು ಅಜ್ಞಾನದಿಂದ ತೋರುವಂತೆ ಪರಬ್ರಹ್ಮದ ವಿಷಯವಾದ ಅಜ್ಞಾನದ ಫಲವಾಗಿ ಜಗತ್ತು ಅದರಲ್ಲಿ ತೋರುತ್ತಿದೆ. ಹೀಗೆ ತೋರುವ ಜಗತ್ತು ಸ್ವತಃ ಅಸ್ತಿತ್ವವಿಲ್ಲದ ಮಿಥ್ಯೆ, ಪರಬ್ರಹ್ಮವೊಂದೇ ಸತ್ಯ; ಜಗತ್ತಿಗೆ ಅಸ್ತಿತ್ವವೇ ಇಲ್ಲದ ಮೇಲೆ ಸೃಷ್ಟಿ ಸ್ಥಿತಿ ಲಯಗಳ ಮಾತೇ ಬರುವುದಿಲ್ಲ ವಾದುದರಿಂದ ಪರಬಹ್ಮವು ಅವುಗಳ ಕರ್ತೃವಲ್ಲ–ಈ ದೃಷ್ಟಿಕೋಣದಿಂದ ನೋಡಿದಾಗ ಪರಬ್ರಹ್ಮವು ಸಗುಣವಲ್ಲ, ನಿರ್ಗುಣ.

ಉಪಾಸನೆಗೆ ಸಹಾಯಕವಾಗುವ ಅನೇಕ ವಿದ್ಯೆಗಳನ್ನು ಉಪನಿಷತ್ತುಗಳಲ್ಲಿ ವಿವರಿಸಿದೆ. ಇಲ್ಲಿ ಸೂಚಿಸಿರುವ ಶಾಂಡಿಲ್ಯವಿದ್ಯೆಯು ಛಾಂದೋಗ. ೩.೧೪, ೧.೪ರಲ್ಲಿ ಬರುತ್ತದೆ: ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ ........ , 'ಸೃಷ್ಟಿ ಸ್ಥಿತಿ ಪ್ರಲಯಗಳಿಗೆ (ಬ್ರಹ್ಮವೇ) ಆಧಾರವಾಗಿರುವುದರಿಂದ ಇವೆಲ್ಲ ಬ್ರಹ್ಮವೇ. (ಆದುದರಿಂದ) ಶಾಂತನಾಗಿ (ಅದನ್ನು) ಉಪಾಸನೆ ಮಾಡಬೇಕು.' ಮುಂದಿನ ಕಂಡಿಕೆಗಳಲ್ಲಿ ಉಪನಿಷತ್ತು ಈ ಸಗುಣ ಬ್ರಹ್ಮಕ್ಕೆ, ಉಪಾಸನೆಗೆ ಅನುಕೂಲವಾಗುವಂತೆ, ಅನೇಕ ಗುಣಗಳನ್ನು ವಿವರಿಸಿ ಆ ಬ್ರಹ್ಮವೇ ನಮ್ಮ ಅಂತರ್ಯಾಮಿಯಾದ ಆತ್ಮನೆಂದೂ ಅದು ಅಣುವಿಗಿಂತ ಅಣು ಬೃಹತ್ತಿಗಿಂತ ಬೃಹತ್ತು ಎಂದೂ, ಇಂತಹ ಶ್ರದ್ಧೆ ಇರುವವನು ಮರಣಾನಂತರ ಅದನ್ನೇ ಪಡೆಯುವನೆಂದೂ ಹೇಳಿರುತ್ತದೆ.

ಪುರುಷವಿದ್ಯೆ, ಸಂವರ್ಗವಿದ್ಯೆ, ಷೋಡಶಕಲವಿದ್ಯೆ, ಉಪಕೋಸಲವಿದ್ಯೆ, ಅಕ್ಷಿಪುರುಷವಿದ್ಯೆ, ಪಂಚಾಗ್ನಿವಿದ್ಯೆ, ದಹರವಿದ್ಯೆ—ಇವು ಇವೇ ಛಾಂದೋಗ್ಯದಲ್ಲಿ ಬರುವ ಇತರ ವಿದ್ಯೆಗಳು.

### ನಿತ್ಯಾದಿಕರ್ಮಗಳ ಫಲ

**ಏತೇಷಾಂ ನಿತ್ಯಾದೀನಾಂ ಬುದ್ಧಿಶುದ್ಧಿಃ ಪರಂ ಪ್ರಯೋಜನಮ್ ; ಉಪಾಸನಾನಾಂ ತು ಚಿತ್ತೈಕಾಗ್ರ್ಯಮ್ ; 'ತಮೇತಮಾತ್ಮಾನಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ' (ಬೃ. ಉ. ೪.೪.೨೨) ಇತ್ಯಾದಿಶ್ರುತೇಃ, 'ತಪಸಾ ಕಲ್ಮಷಂ ಹಂತಿ' (ಮ. ಸ್ಮೃ. ೧೨.೧೦೪) ಇತ್ಯಾದಿಸ್ಮೃತೇಶ್ಚ ॥ ೧೩ ॥**

೧೩. ಈ ನಿತ್ಯಾದಿಕರ್ಮಗಳಿಗೆ[1] ಮನಸ್ಸನ್ನು ಶುದ್ಧಗೊಳಿಸುವುದು ಎಂಬುದೇ ಪರಮ ಪ್ರಯೋಜನ.[2] ಉಪಾಸನೆಗಳಿಗಾದರೋ ಮನಸ್ಸಿನ ಏಕಾಗ್ರತೆಯೇ (ಫಲ).[3] 'ಆ ಈ ಆತ್ಮನನ್ನು, ಬ್ರಾಹ್ಮಣರು ನಿತ್ಯಸ್ವಾಧ್ಯಾಯದಿಂದಲೂ ಯಜ್ಞದಿಂದಲೂ ಅರಿಯಲು ಇಚ್ಛಿಸುತ್ತಾರೆ[4]' (ಬೃ ಉ. ೪.೪.೨೨) ಎಂಬ ಶ್ರುತಿಯಿಂದಲೂ, 'ತಪಸ್ಸಿನಿಂದ ಪಾಪವನ್ನು ನಾಶಮಾಡಿಕೊಳ್ಳುತ್ತಾರೆ' (ಮ. ಸ್ಮೃ. ೧೨. ೧೦೪) ಎಂಬ ಸ್ಮೃತಿಯಿಂದಲೂ (ಹೀಗೆ ತಿಳಿದುಬರುತ್ತದೆ).

1 ನೈಮಿತ್ತಿಕ ಕರ್ಮ, ಪ್ರಾಯಶ್ಚಿತ್ತ ಕರ್ಮ ಇವನ್ನೂ ಇಲ್ಲಿ ಸೇರಿಸಿಕೊಳ್ಳಬೇಕು.

2 ಪರಮ ಪ್ರಯೋಜನವೆಂದರೆ ಇಲ್ಲಿ ಮುಖ್ಯವಾದ ಪ್ರಯೋಜನವೆಂದರ್ಥ ನಿತ್ಯಕರ್ಮವು ಯಾವ ರೀತಿ ಮೋಕ್ಷವನ್ನು ಕ್ರಮವಾಗಿ ಸಾಧಿಸಿಕೊಡುತ್ತದೆ ಎಂಬುದನ್ನು ಶ್ರೀ ಸುರೇಶ್ವರಾಚಾರ್ಯರು ತಮ್ಮ ನೈಷ್ಕರ್ಮ್ಯಸಿದ್ಧಿ (೧.೫೨) ಯಲ್ಲಿ ಸೊಗಸಾಗಿ ವಿವರಿಸುತ್ತಾರೆ: ನಿತ್ಯಕರ್ಮಾನುಷ್ಠಾನಾತ್ ಧರ್ಮೋತ್ಪತ್ತಿಃ, ಧರ್ಮೋತ್ಪತ್ತೇಃ ಪಾಪಹಾನಿಃ, ತತಃ ಚಿತ್ತಶುದ್ಧಿಃ, ತತಃ ಸಂಸಾರಯಾಥಾತ್ಮ್ಯ-ಅವಬೋಧಃ, ತತಃ ವೈರಾಗ್ಯಮ್, ತತಃ ಮುಮುಕ್ಷುತ್ವಮ್, ತತಃ ತದುಪಾಯಪರ್ಯೇಷಣಮ್, ತತಃ ಸರ್ವಕರ್ಮತತ್ಸಾಧನಸಂನ್ಯಾಸಃ, ತತಃ ಯೋಗಾಭ್ಯಾಸಃ, ತತಃ ಚಿತ್ತಸ್ಯ ಪ್ರತ್ಯಕ್ಪ್ರವಣತಾ, ತತಃ ತತ್ತ್ವಮಸ್ಯಾದಿವಾಕ್ಯಾರ್ಥಪರಿಜ್ಞಾನಮ್, ತತ ಅವಿದ್ಯೋಚ್ಛೇದಃ, ತತಶ್ಚ ಸ್ವಾತ್ಮನಿ ಏವ ಅವಸ್ಥಾನಮ್ ; 'ನಿತ್ಯಕರ್ಮದ ಅನುಷ್ಠಾನದಿಂದ

ಧರ್ಮವೆಂಬ ಅದೃಷ್ಟವು ಹುಟ್ಟುತ್ತದೆ. ಈ ಅದೃಷ್ಟವು ಪಾಪವನ್ನು ನಾಶಮಾಡುತ್ತದೆ. ಅದರಿಂದ ಸಂಸಾರದ ನಿಜಸ್ವರೂಪದ ಅರಿವುಂಟಾಗುತ್ತದೆ. ಅದರಿಂದ ವೈರಾಗ್ಯ, ವೈರಾಗ್ಯದಿಂದ ಮೋಕ್ಷೇಚ್ಛೆ ಉಂಟಾಗುತ್ತದೆ. ಆಗ ಮೋಕ್ಷೋಪಾಯವನ್ನು ಹುಡುಕುತ್ತಾನೆ. ಅದರಿಂದ ಸರ್ವಕರ್ಮಗಳ ಮತ್ತು ಸರ್ವಸಾಧನಗಳ ಸಂನ್ಯಾಸ, ಅನಂತರ ಯೋಗಾಭ್ಯಾಸ ಇವು ಉಂಟಾಗುತ್ತವೆ. ಇದರಿಂದ ಮನಸ್ಸು ಅಂತರ್ಮುಖವಾಗುತ್ತದೆ, 'ತತ್ ತ್ವಮ್ ಅಸಿ' ಮೊದಲಾದ ವೇದಾಂತವಾಕ್ಯಗಳ ಜ್ಞಾನವುಂಟಾಗುತ್ತದೆ; ತನ್ಮೂಲಕ ಅವಿದ್ಯೆಯು ನಾಶವಾಗಿ ತನ್ನ ಆತ್ಮನಲ್ಲಿಯೇ ನೆಲೆ ನಿಲ್ಲುತ್ತಾನೆ.'

3 ಪ್ರತಿಯೊಂದು ಉಪಾಸನೆಗೂ ಶ್ರುತಿಯಲ್ಲಿ ವಿಶೇಷ ಫಲವನ್ನು ಹೇಳಿದ್ದರೂ ಎಲ್ಲ ಉಪಾಸನೆಗಳಿಗೂ ಸಾಮಾನ್ಯವಾಗಿರುವ ಮತ್ತು ಮುಖ್ಯವಾಗಿರುವ ಫಲವನ್ನು ಮಾತ್ರ ಇಲ್ಲಿ ಹೇಳಿದೆ.

ನಿತ್ಯಾದಿ ಕರ್ಮಗಳು ಚಿತ್ತಶುದ್ಧಿಯನ್ನು ಉಂಟುಮಾಡುತ್ತವೆ. ಶುದ್ಧ ಚಿತ್ತದಿಂದಲೇ ಉಪಾಸನೆ ಸಾಧ್ಯ. ಉಪಾಸನೆಯ ಅಭ್ಯಾಸದಿಂದ ಕ್ರಮೇಣ ಏಕಾಗ್ರತೆ, ಮಹಾವಾಕ್ಯಗಳ ಅರ್ಥದ ಗ್ರಹಣಸಾಮರ್ಥ್ಯ ಇವು ಸಿದ್ಧಿಸುತ್ತವೆ.

4 ಇದೇ ಶ್ರುತಿವಾಕ್ಯದಲ್ಲಿ ದಾನೇನ ತಪಸಾ ಅನಾಶಕೇನ ಎಂಬುವು ಮುಂದಿನ ಪದಗಳು. ಇವೆಲ್ಲ ಕರ್ಮರೂಪವಾದವು. ಆದರೂ ಇವುಗಳ ಮೂಲಕ ಆತ್ಮನನ್ನು ಅರಿಯಲು ಇಚ್ಛಿಸುತ್ತಾರೆ (ವಿವಿದಿಷಂತಿ) ಎಂದು ಹೇಳಿರುವುದರಿಂದ ಈ ಕರ್ಮಗಳು ದುರಿತಕ್ಷಯಕ್ಕೂ ಚಿತ್ತಶುದ್ಧಿಗೂ ಕಾರಣವಾಗಿ ತನ್ಮೂಲಕ ಆತ್ಮತತ್ತ್ವವನ್ನರಿಯುವ ಇಚ್ಛೆಯನ್ನು ಅವರಲ್ಲಿ ಉಂಟುಮಾಡುತ್ತವೆ ಎಂದೇ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಹೀಗೆ ಶ್ರುತಿವಾಕ್ಯವು ಕರ್ಮದಿಂದ ಚಿತ್ತಶುದ್ಧಿಯುಂಟಾಗುವುದೆಂಬುವನ್ನು ಪರೋಕ್ಷವಾಗಿ ಸೂಚಿಸಿದೆ.

**ನಿತ್ಯನೈಮಿತ್ತಿಕಯೋಃ ಉಪಾಸನಾನಾಂ ಚ ಅವಾಂತರಫಲಂ ಪಿತೃಲೋಕ-ಸತ್ಯಲೋಕ-ಪ್ರಾಪ್ತಿಃ, 'ಕರ್ಮಣಾ ಪಿತೃಲೋಕಃ, ವಿದ್ಯಯಾ ದೇವಲೋಕಃ' (ಬೃ. ಉ. ೧. ೫. ೧೬) ಇತ್ಯಾದಿಶ್ರುತೇಃ ॥ ೧೪ ॥**

೧೪. ನಿತ್ಯನೈಮಿತ್ತಿಕ ಕರ್ಮಗಳಿಗೂ1 ಉಪಾಸನೆಗಳಿಗೂ ಪ್ರಾಸಂಗಿಕ ಫಲವು2 ಪಿತೃಲೋಕ-ಸತ್ಯಲೋಕ-ಪ್ರಾಪ್ತಿ. 'ಕರ್ಮದಿಂದ ಪಿತೃಲೋಕವೂ3

ವಿದ್ಯೆಯಿಂದ[4] ದೇವಲೋಕವೂ[5] (ಪ್ರಾಪ್ತವಾಗುತ್ತವೆ)' (ಬೃ. ಉ. ೧. ೫. ೧೬) ಎಂಬ ಶ್ರುತಿಯಿಂದ (ಹೀಗೆ ತಿಳಿದುಬರುತ್ತದೆ).

1 ಪ್ರಾಯಶ್ಚಿತ್ತ ಕರ್ಮಗಳು ಪಾಪಕ್ಷಯಕ್ಕೆ ಮಾತ್ರ ಸಹಕಾರಿಗಳು, ಮರಣಾನಂತರ ವಿಶೇಷ ಫಲವನ್ನು ಉಂಟುಮಾಡವು, ಆದುದರಿಂದ ಅವನ್ನಿಲ್ಲಿ ಬಿಟ್ಟುಬಿಟ್ಟಿವೆ.

2 ಪರಮ ಪ್ರಯೋಜನವು ಚಿತ್ತಶುದ್ಧಿ ಎಂಬುದನ್ನು ಹಿಂದೆಯೇ ಹೇಳಿದೆ. ಈ ಪ್ರಾಸಂಗಿಕ ಫಲವು ಬಯಸಿದವರಿಗೆ ಮಾತ್ರ ಸಿಗುತ್ತದೆ.

3 ಅಗ್ನಿಹೋತ್ರಾದಿ ಕರ್ಮಗಳಿಂದ ದೊರಕುವ, ಭೂಲೋಕಕ್ಕೂ ಸ್ವರ್ಗಕ್ಕೂ ನಡುವೆಯಿರುವ ಒಂದು ಲೋಕ.

4 ವಿದ್ಯೆಯೆಂದರೆ ಇಲ್ಲಿ ಉಪಾಸನೆಯೆಂದರ್ಥ, ಜ್ಞಾನವಲ್ಲ.

5 ಸತ್ಯಲೋಕ ಅಥವಾ ಬ್ರಹ್ಮಲೋಕ. ಮೇಲಿನ ಸಪ್ತಲೋಕಗಳಲ್ಲಿ ಇದೇ ಅತ್ಯುನ್ನತವಾದದ್ದು. ಇಲ್ಲಿಗೆ ಹೋದವನು ಮತ್ತೆ ಸಂಸಾರಕ್ಕೆ ಹಿಂದಿರುಗುವುದಿಲ್ಲ.

## ಸಾಧನಚತುಷ್ಟಯ

**ಸಾಧನಾನಿ ನಿತ್ಯಾನಿತ್ಯವಸ್ತುವಿವೇಕ–ಇಹಾಮುತ್ರಾರ್ಥಫಲ–ಭೋಗವಿರಾಗ–ಶಮಾದಿಷಟ್ಕಸಂಪತ್ತಿ–ಮುಮುಕ್ಷುತ್ವಾನಿ ॥ ೧೫ ॥**

೧೫. ನಿತ್ಯ ಮತ್ತು ಅನಿತ್ಯ ವಸ್ತುಗಳನ್ನು ವಿವೇಚಿಸಿ (ಅರಿಯುವುದು), (ಕರ್ಮ)ಫಲವಾಗಿ ಇಹಲೋಕ ಪರಲೋಕಗಳಲ್ಲಿ ದೊರಕುವ ವಸ್ತುಗಳ ಭೋಗದಲ್ಲಿ ವೈರಾಗ್ಯ, ಶಮವೇ ಮೊದಲಾದ ಆರರ ಸಂಪತ್ತು, ಮೋಕ್ಷೇಚ್ಛೆ–(ಇವು) (ಜ್ಞಾನದ ಪರೋಕ್ಷ) ಸಾಧನಗಳು.

ಈ ಸಾಧನಗಳನ್ನು ಇನ್ನುಮುಂದೆ ವಿವರಿಸಲಾಗುತ್ತದೆ.

ಇಲ್ಲಿ ಅವನ್ನು ಕೊಟ್ಟಿರುವ ಕ್ರಮವೂ ಮುಖ್ಯ. ವಿವೇಕವು ವೈರಾಗ್ಯಕ್ಕೂ, ವೈರಾಗ್ಯವು ಶಮಾದಿಗಳ ಸಂಪಾದನೆಗೂ, ಅದು ಮುಮುಕ್ಷುತ್ವಕ್ಕೂ ಕಾರಣವಾಗುತ್ತವೆ. ಹಿಂದಿನ ಸಾಧನವಿಲ್ಲದಿದ್ದಲ್ಲಿ ಮುಂದಿನದು ಉತ್ಪನ್ನವಾಗುವುದಿಲ್ಲ.

**ನಿತ್ಯಾನಿತ್ಯವಸ್ತುವಿವೇಕಃ ತಾವದ್ ಬ್ರಹ್ಮೈವ ನಿತ್ಯಂ ವಸ್ತು, ತತಃ ಅನ್ಯದ್ ಅಖಿಲಮ್ ಅನಿತ್ಯಮಿತಿ ವಿವೇಚನಮ್ ॥ ೧೬ ॥**

೧೬. ಮೊದಲನೆಯದಾಗಿ, ನಿತ್ಯ-ಅನಿತ್ಯ-ವಸ್ತು-ವಿವೇಕವೆಂದರೆ ಬ್ರಹ್ಮವೇ ನಿತ್ಯವಸ್ತು, ಅದಕ್ಕಿಂತ ಬೇರೆಯಾದುದೆಲ್ಲ ಅನಿತ್ಯ ಎಂಬೀ ವಿವೇಚನೆ.

ದೇಶ ಕಾಲ ನಿಮಿತ್ತಗಳಿಂದ ಪರಿಚ್ಛಿನ್ನವಾಗದ, ಶಾಶ್ವತವಾದ ವಸ್ತುವೇ ನಿತ್ಯ. ಹಾಗೆ ಪರಿಚ್ಛಿನ್ನವಾದ, ಆದುದರಿಂದಲೇ ನಶ್ವರವಾದ, ವಸ್ತು ಅನಿತ್ಯ. ಜಗತ್ತು ಅನಿತ್ಯ ಬ್ರಹ್ಮವೊಂದೇ ಸತ್ಯ ಎಂಬ ಜ್ಞಾನವು ಎಲ್ಲಿಯವರೆಗೆ ಉಂಟಾಗುವುದಿಲ್ಲವೊ ಅಲ್ಲಿಯವರೆಗೆ ಆಧ್ಯಾತ್ಮಿಕ ಸಾಧನೆ ಸಾಧ್ಯವೇ ಇಲ್ಲ. ಆದುದರಿಂದಲೇ ವಿವೇಕವನ್ನು ಪ್ರಥಮ ಸಾಧನವಾಗಿ ವಿವರಿಸಿದೆ.

**ಐಹಿಕಾನಾಂ ಸ್ರಕ್-ಚಂದನ-ವನಿತಾದಿ-ವಿಷಯಭೋಗಾನಾಂ ಕರ್ಮಜನ್ಯತಯಾ ಅನಿತ್ಯತ್ವವತ್, ಆಮುಷ್ಮಿಕಾಣಾಮಪಿ ಅಮೃತಾದಿವಿಷಯಭೋಗಾನಾಮ್ ಅನಿತ್ಯತಯಾ ತೇಭ್ಯೋ ನಿತರಾಂ ವಿರತಿಃ—ಇಹಾಮುತ್ರಾರ್ಥಫಲಭೋಗವಿರಾಗಃ ॥ ೧೭ ॥**

೧೭. ಇಹಲೋಕದ ಹೂಮಾಲೆ ಚಂದನ ಸ್ತ್ರೀ ಮೊದಲಾದ ವಿಷಯಭೋಗಗಳು ಕರ್ಮಗಳ ಫಲವಾದ ಉಂಟಾಗಿರುವುದರಿಂದ ಅನಿತ್ಯವಾಗಿರುವಂತೆ, ಪರಲೋಕದ ಅಮೃತಪಾನವೇ ಮೊದಲಾದ ವಿಷಯಭೋಗಗಳೂ ಕೂಡ ಅನಿತ್ಯವಾದುದರಿಂದ ಅವುಗಳಲ್ಲಿ ಸಂಪೂರ್ಣವಾಗಿ ವಿರಕ್ತಿಯನ್ನು ಪಡೆಯುವುದೇ 'ಇಹಲೋಕ-ಪರಲೋಕಗಳಲ್ಲಿ ದೊರಕುವ ವಸ್ತುಗಳ ಭೋಗದಲ್ಲಿ ವೈರಾಗ್ಯ.'

ವಿವೇಕದಿಂದ ವೈರಾಗ್ಯ ಉದಯಿಸುತ್ತದೆ. ಯಾವುದಕ್ಕೆ ಹುಟ್ಟಿದೆಯೋ ಅದಕ್ಕೆ ಸಾವೂ ಉಂಟು, ಉತ್ಪತ್ತಿಯುಳ್ಳ ವಸ್ತುವಿಗೆಲ್ಲ ವಿನಾಶವುಂಟು, ಕೃತಕವೂ ಕರ್ಮಜನ್ಯವೂ ಆದುದೆಲ್ಲ ನಶ್ವರ. ಇದು ನಮಗೆ ವಿವೇಕಬುದ್ಧಿಯಿಂದ ಗೋಚರವಾಗುತ್ತದೆ. ತತ್ಫಲವಾಗಿ ನಶ್ವರವಾದ ಇಹಲೋಕವಸ್ತುಗಳಲ್ಲಿ ವೈರಾಗ್ಯವುಂಟಾಗುತ್ತದೆ.

ಸ್ವರ್ಗಾದಿ ಪರಲೋಕಗಳೂ ಅವುಗಳಲ್ಲಿ ದೊರೆಯುವ ಅಮೃತಪಾನಾದಿ ಸುಖಗಳೂ ಭೂಲೋಕಕ್ಕೆ ಹೋಲಿಸಿದರೆ ಉತ್ತಮವಾಗಿರುವಂತೆ ಕಂಡರೂ ಅವೂ ಕೂಡ

ಅಶಾಶ್ವತ ಮತ್ತು ನಶ್ವರ; ಏಕೆಂದರೆ ಅವು (ಕಾಮ್ಯ) ಕರ್ಮಗಳ ಫಲವಾಗಿ ಲಭಿಸಿರುತ್ತವೆ. ಕರ್ಮಕೃತವಾದುದೆಲ್ಲ ನಶ್ವರವಲ್ಲವೆ? ಆದುದರಿಂದ ಇಹಲೋಕ ಭೋಗಗಳಿಗೆ ಅನ್ವಯಿಸುವ ನಿಯಮವು ಅವುಗಳಿಗೂ ಅನ್ವಯಿಸುತ್ತದೆ. ನಮ್ಮ ವಿವೇಕಬುದ್ಧಿಯು ಸಾಕಷ್ಟು ಚುರುಕಾಗಿದ್ದರೆ ನಾವು ಇದನ್ನೂ ಅರ್ಥಮಾಡಿಕೊಂಡು ಇವುಗಳಲ್ಲೂ ವೈರಾಗ್ಯವನ್ನು ತಾಳುತ್ತೇವೆ, ಕಾಮ್ಯಕರ್ಮಗಳನ್ನು ತ್ಯಜಿಸಿ ಮೋಕ್ಷಕ್ಕಾಗಿ ಪ್ರಯತ್ನಿಸುತ್ತೇವೆ.

ಶ್ರುತಿಸ್ಮೃತಿಗಳಲ್ಲಿ ಸಕಾಮಕರ್ಮಗಳ ಮತ್ತು ಅವುಗಳಿಂದ ದೊರಕುವ ಅನಿತ್ಯ ಫಲಗಳ ಬಗ್ಗೆ ಅನೇಕ ನಿಂದಾವಾಕ್ಯಗಳನ್ನು ಕಾಣುತ್ತೇವೆ: **ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತೇ ಏವಮೇವ ಅಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ,** 'ಈ ಲೋಕದಲ್ಲಿ ಕರ್ಮದಿಂದ ಸಂಪಾದಿಸಿಕೊಂಡ ಭೋಗವಸ್ತುವು ಹೇಗೆ ಕ್ಷಯಿಸಿ ಹೋಗುವುದೋ ಹಾಗೆಯೇ ಪರಲೋಕದಲ್ಲಿ ಪುಣ್ಯಕರ್ಮದಿಂದ ಸಂಪಾದಿಸಿದ ಭೋಗವಸ್ತುವು ಕ್ಷಯಿಸಿ ಹೋಗುತ್ತದೆ'(ಛಾಂ. ಉ.೮.೧.೬); **ಜಾನಾಮ್ಯಹಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್,** 'ಕರ್ಮಫಲವೆಂಬ ನಿಧಿಯು ಅನಿತ್ಯವೆಂದು ನಾನು ಅರಿತಿರುತ್ತೇನೆ; ಏಕೆಂದರೆ ಅನಿತ್ಯವಸ್ತುಗಳಿಂದ ನಿತ್ಯವಸ್ತುವು (ಪರಮಾತ್ಮವಸ್ತುವು) ದೊರೆಯತಕ್ಕದ್ದಲ್ಲ' (ಕ. ಉ. ೨. ೧೦); **ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃ ಕೃತೇನ,** 'ಬ್ರಾಹ್ಮಣನು (ಧರ್ಮಾಧರ್ಮರೂಪದ) ಕರ್ಮಗಳಿಂದಾದ ಲೋಕಗಳನ್ನು ಪರೀಕ್ಷಿಸಿ, "ಕರ್ಮದಿಂದ ನಿತ್ಯವಸ್ತುವನ್ನು ಪಡೆಯುವುದಕ್ಕಾಗುವುದಿಲ್ಲ" ಎಂದು (ಅರಿತು) ವೈರಾಗ್ಯವನ್ನು ಹೊಂದಬೇಕು' (ಮುಂ. ಉ. ೧. ೨. ೧೨); **ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ,** 'ಅವರು ಆ ವಿಶಾಲವಾದ ಸ್ವರ್ಗಲೋಕವನ್ನು ಅನುಭವಿಸಿ, ಪುಣ್ಯವು ಕ್ಷಯಿಸಲು, ಮನುಷ್ಯಲೋಕವನ್ನು ಪ್ರವೇಶಿಸುತ್ತಾರೆ' (ಗೀತಾ ೯.೨೧); **ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ,** 'ಎಲೈ ಅರ್ಜುನ, ಬ್ರಹ್ಮಲೋಕದವರೆಗಿನ (ಎಲ್ಲ) ಲೋಕಗಳಿಂದಲೂ (ಮನುಷ್ಯಲೋಕಕ್ಕೆ) ಹಿಂದಿರುಗಬೇಕಾಗುತ್ತದೆ' (ಗೀತಾ ೮.೧೬).

**ಶಮಾದಯಸ್ತು ಶಮ-ದಮ-ಉಪರತಿ-ತಿತಿಕ್ಷಾ-ಸಮಾಧಾನ-ಶ್ರದ್ಧಾಖ್ಯಾಃ ॥ ೧೮ ॥**

೧೮. ಶಮಾದಿಗಳಾದರೋ ಶಮ, ದಮ, ಉಪರತಿ, ತಿತಿಕ್ಷೆ, ಸಮಾಧಾನ (ಮತ್ತು) ಶ್ರದ್ಧೆ ಎಂಬ ಹೆಸರಿನಿಂದ ಕರೆಯಲ್ಪಡತಕ್ಕವು.

ಕಂಡಿಕೆ ೧೯ ರಿಂದ ೨೪ ರವರೆಗೆ ಇವನ್ನು ವಿವರಿಸಲಾಗುವುದು.

**ಶಮಸ್ತಾವತ್ ಶ್ರವಣಾದಿವ್ಯತಿರಿಕ್ತವಿಷಯೇಭ್ಯೋ ಮನಸೋ ನಿಗ್ರಹಃ ॥ ೧೯ ॥**

೧೯. ಮೊದಲನೆಯದಾಗಿ, ಶಮವೆಂದರೆ ಶ್ರವಣಾದಿಗಳಿಗಿಂತ ಬೇರೆಯಾದ ವಿಷಯಗಳಿಂದ ಮನಸ್ಸನ್ನು ನಿಗ್ರಹಿಸುವುದು.

ಚೆನ್ನಾಗಿ ಹಸಿದಿರುವಾಗ ಭೋಜನವು ಹೊರತು ಮತ್ತಾವುದೂ ರುಚಿಸುವುದಿಲ್ಲ, ಭೋಜನವು ವಿಳಂಬವಾದರೆ ಸಹಿಸಲಾಗುವುದಿಲ್ಲ. ಅಂತೆಯೇ ವಿವೇಕ-ವೈರಾಗ್ಯಗಳ ಫಲವಾಗಿ ತತ್ತ್ವಜ್ಞಾನಕ್ಕಾಗಿ ಮನಸ್ಸು ಹಾರೈಸುತ್ತಿರುವಾಗ ಅದು ಸ್ರಕ್ಚಂದನ ವನಿತಾದಿ ವಿಷಯಗಳಲ್ಲಿ ಅಭಿರುಚಿಯನ್ನು ಕಳೆದುಕೊಂಡು ಶ್ರವಣ ಮನನ ನಿದಿಧ್ಯಾಸನ ಎಂಬ ಸಾಧನಗಳಲ್ಲಿ ಅಭಿರುಚಿ ಪಡೆಯುತ್ತಿರುತ್ತದೆ. ಆದರೂ ಕೆಲವೊಮ್ಮೆ ಹಿಂದಿನ ಸಂಸ್ಕಾರಗಳ ಫಲವಾಗಿ ಶ್ರವಣಾದಿಗಳನ್ನು ಬಿಟ್ಟು ವಿಷಯಭೋಗಗಳ ಕಡೆಗೆ ಹರಿಯಲು ಪ್ರಯತ್ನಿಸುತ್ತದೆ. ಇಂಥ ಸಮಯದಲ್ಲಿ ಅದನ್ನು ತಡೆದಿಡುವ ವಿಶೇಷ ಮನೋವೃತ್ತಿಯೇ ಶಮ.

**ದಮಃ ಬಾಹ್ಯೇಂದ್ರಿಯಾಣಾಂ ತದ್ವ್ಯತಿರಿಕ್ತವಿಷಯೇಭ್ಯೋ ನಿವರ್ತನಮ್ ॥ ೨೦ ॥**

ದಮವೆಂದರೆ ಬಾಹ್ಯೇಂದ್ರಿಯಗಳನ್ನು ಆ (ಶ್ರವಣಾದಿಗಳಿಗಿಂತ) ಭಿನ್ನವಾದ ವಿಷಯಗಳಿಂದ ಹಿಂದಿರುಗಿಸುವುದು.

ಇಂದ್ರಿಯಸಮೂಹವನ್ನು ಅಂತರಿಂದ್ರಿಯ ಮತ್ತು ಬಾಹ್ಯೇಂದ್ರಿಯ ಎಂದು ಎರಡಾಗಿ ವಿಭಾಗಿಸಬಹುದು. ಮನಸ್ಸೇ ಅಂತರಿಂದ್ರಿಯ. ಬಾಹ್ಯೇಂದ್ರಿಯಗಳು ಪುನಃ ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳು ಎಂದು ದ್ವಿವಿಧ. ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ—ಇವು ಜ್ಞಾನೇಂದ್ರಿಯಗಳು; ಏಕೆಂದರೆ ನಮಗೆ ಬಾಹ್ಯಪ್ರಪಂಚದ ಜ್ಞಾನವು ಇವುಗಳ ಮೂಲಕ ದೊರಕುತ್ತದೆ. ಕೈ, ಕಾಲು, ವಾಗಿಂದ್ರಿಯ, ಜನನೇಂದ್ರಿಯ ಮತ್ತು ಗುದ—ಇವು ಕರ್ಮೇಂದ್ರಿಯಗಳು.

ಶ್ರವಣಾದಿಗಳಿಗೆ ಅನುಕೂಲವಾದ ಶಬ್ದಾದಿ ವಿಷಯಗಳನ್ನು ಹೊರತು, ಕೇವಲ ವಿಷಯಸುಖಭೋಗಗಳ ಮೂಲಕ ಸಂಸಾರಕ್ಕೆ ಳೆಯುವ ವಿಷಯಗಳ ಕಡೆಗೆ ಹೋಗುವ ಈ ಇಂದ್ರಿಯಗಳ ಪ್ರವೃತ್ತಿಯನ್ನು ತಡೆದಿಡುವ ಮನೋವೃತ್ತಿಯೇ ದಮ.

**ನಿವರ್ತಿತಾನಾಮ್ ಏತೇಷಾಂ ತದ್ವ್ಯತಿರಿಕ್ತವಿಷಯೇಭ್ಯಃ ಉಪರಮಣಮ್ ಉಪರತಿಃ; ಅಥವಾ ವಿಹಿತಾನಾಂ ಕರ್ಮಣಾಂ ವಿಧಿನಾ ಪರಿತ್ಯಾಗಃ ॥ ೨೧ ॥**

೨೧. (ಬಾಹ್ಯವಿಷಯಗಳಿಂದ) ಹಿಂದಿರುಗಿಸಲ್ಪಟ್ಟ ಈ (ಬಾಹ್ಯೇಂದ್ರಿಯಗಳು) ಆ (ಶ್ರವಣಾದಿಗಳಿಗಿಂತ) ಭಿನ್ನವಾದ ವಿಷಯಗಳಿಂದ ದೂರವಾಗುವುದೇ 'ಉಪರತಿ'; ಅಥವಾ (ಸಂಧ್ಯಾವಂದನಾದಿ) ವಿಹಿತ ಕರ್ಮಗಳನ್ನು ವಿಧ್ಯುಕ್ತವಾಗಿ ಪರಿತ್ಯಾಗಮಾಡುವುದೇ ('ಉಪರತಿ').

ಇಲ್ಲಿ 'ಉಪರತಿ' ಶಬ್ದಕ್ಕೆ ಎರಡರ್ಥಗಳನ್ನು ಕೊಟ್ಟಿದೆ. ಬಾಹ್ಯ ವಿಷಯಗಳಿಂದ ಹಿಂದಿರುಗಿಸಲ್ಪಟ್ಟ ಬಾಹ್ಯೇಂದ್ರಿಯಗಳು ತಮ್ಮ ಸಂಸ್ಕಾರದ ಫಲವಾಗಿ ಮತ್ತೆ ಮತ್ತೆ ಅವುಗಳ ಕಡೆಗೆ ಹೋಗಲು ಪ್ರಯತ್ನಿಸುತ್ತಿರುತ್ತವೆ. ಇವನ್ನು 'ದಮ'ದಿಂದ ಸತತವಾಗಿ ತಡೆದಮೇಲೆ ಅವು ತಮ್ಮ ಪ್ರವೃತ್ತಿಯನ್ನೇ ಕಳೆದುಕೊಂಡು ಕ್ರಮೇಣ ಉಪಶಾಂತವಾಗುತ್ತವೆ. ಇದು 'ಉಪರತಿ'ಯ ಮೊದಲನೆಯ ಅರ್ಥ. ಇದರ ಪ್ರಕಾರ ಉಪರತಿಯು ಶಮ-ದಮಗಳ ಪರಿಪಕ್ವಾವಸ್ಥೆ ಮಾತ್ರ. ಇದನ್ನು ಭಗವತ್ಪಾದರು ತಮ್ಮ 'ವಿವೇಕ ಚೂಡಾಮಣಿ'ಯಲ್ಲಿ **ಬಾಹ್ಯಾನಾಲಂಬನಂ ವೃತ್ತೇರೇಷೋಪರತಿರುತ್ತಮಾ,** '(ಮನಸ್ಸಿನ) ವೃತ್ತಿಯು ಹೊರಗಿನ ಯಾವ ವಸ್ತುವನ್ನೂ ಅವಲಂಬಿಸದಿರುವುದೇ ಉತ್ತಮವಾದ ಉಪರತಿಯು' (೨೩) ಎಂದು ನಿರ್ವಚನ ಮಾಡಿರುತ್ತಾರೆ.

ಆದರೆ **ಶಾಂತೋ ದಾಂತ ಉಪರತಃ** ಎಂಬ ಬೃಹದಾರಣ್ಯಕೋಪನಿಷದ್ವಾಕ್ಯದ ಮೇಲೆ (೪.೪.೨೩) ವ್ಯಾಖ್ಯಾನ ಮಾಡುವಾಗ **ಉಪರತ**-ಶಬ್ದಕ್ಕೆ **ಸರ್ವೈಷಣಾವಿನಿರ್ಮುಕ್ತಃ ಸಂನ್ಯಾಸೀ** ಎಂದು ಹೇಳಿರುತ್ತಾರೆ. ಇದನ್ನು ಆಧಾರವಾಗಿಟ್ಟುಕೊಂಡು ಕೆಲವರು ಉಪರತಿಶಬ್ದಕ್ಕೆ ಸಂನ್ಯಾಸವೆಂದು ಅರ್ಥಮಾಡಿರುತ್ತಾರೆ.

ಜ್ಞಾನದಿಂದಲೇ ಮೋಕ್ಷವೆಂಬುದನ್ನು ಎಲ್ಲ ಅದ್ವೈತಿಗಳೂ ಒಪ್ಪಿದರೂ ಶ್ರವಣಾದಿಸಾಧನವನ್ನು ಕೈಕೊಳ್ಳುವುದಕ್ಕೆ ಮುನ್ನ ಸರ್ವಕರ್ಮಸಂನ್ಯಾಸವನ್ನು ಮಾಡಬೇಕೇ ಬೇಡವೇ ಎಂಬುದರಲ್ಲಿ ಭಿನ್ನಾಭಿಪ್ರಾಯಗಳಿವೆ.

'ಭಾಮತೀ' ಕಾರರಾದ ವಾಚಸ್ಪತಿಮಿಶ್ರರ ಮತವನ್ನು ಧರ್ಮರಾಜ-ಅಧ್ವ ರೀಂದ್ರರ 'ವೇದಾಂತ ಪರಿಭಾಷಾ' ಗ್ರಂಥದಲ್ಲಿ ಹೀಗೆ ಸಂಗ್ರಹಿಸಲಾಗಿದೆ: **ಅಪರೇ ತು ಉಪರಮಶಬ್ದಸ್ಯ ಸಂನ್ಯಾಸವಾಚಕತ್ವ-ಅಭಾವಾತ್ ವಿಕ್ಷೇಪ-ಅಭಾವಮಾತ್ರಸ್ಯ ಗೃಹಸ್ಥೇಷ್ವಪಿ ಸಂಭವಾತ್, ಜನಕಾದೇರಪಿ ಬ್ರಹ್ಮವಿಚಾರಸ್ಯ ಶ್ರೂಯಮಾಣತ್ವಾತ್ ಸರ್ವಾಶ್ರಮಸಾಧಾರಣಂ ಶ್ರವಣಾದಿ ವಿಧಾನಮ್ ಇತ್ಯಾಹುಃ,** 'ಇತರರಾದರೋ ಉಪರಮ-ಶಬ್ದವು ಸಂನ್ಯಾಸವನ್ನೇ ಹೇಳುವುದಿಲ್ಲವಾದುದರಿಂದ, ವಿಕ್ಷೇಪರಾಹಿತ್ಯವು ಗೃಹಸ್ಥರಲ್ಲೂ ಸಂಭವಿಸಬಹುದಾದ್ದರಿಂದ, ಜನಕಾದಿ (ಗೃಹಸ್ಥರ ವಿಷಯದಲ್ಲೂ ಅವರು) ಬ್ರಹ್ಮವಿಚಾರವನ್ನು ಮಾಡಿದರೆಂಬುದನ್ನು ಶ್ರುತಿಯಲ್ಲಿ ಕೇಳಿರುವುದರಿಂ ಶ್ರವಣಾದಿ ವಿಧಿಯು ಎಲ್ಲ ಆಶ್ರಮಗಳವರಿಗೂ ಸಾಮಾನ್ಯವೆಂದು ಹೇಳುತ್ತಾರೆ.' (ಅ

ತದ್ವಿರುದ್ಧವಾಗಿ ಉಪರತಿಯೆಂದರೆ ಸರ್ವಕರ್ಮಸಂನ್ಯಾಸವೇ ಎಂಬುದನ್ನು ಈ 'ವೇದಾಂತಸಾರ'ದ 'ವಿದ್ವನ್ಮನೋರಂಜನೀ' ವ್ಯಾಖ್ಯೆಯಲ್ಲಿ ರಾಮತೀರ್ಥರು ಸಾಧಿಸಿರುತ್ತಾರೆ. ಅವರ ವಾದಸರಣಿಯ ಪ್ರಕಾರ ಶ್ರುತಿ ಸ್ಮೃತಿ ನ್ಯಾಯ ಈ ಮೂರೂ ತಮ್ಮ ಮತವನ್ನೇ ಸಮರ್ಥಿಸುತ್ತವೆ: (೧) ಶ್ರುತಿ: **ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ,** 'ಕರ್ಮದಿಂದಾಗಲಿ ಸಂತಾನದಿಂದಾಗಲಿ ಧನದಿಂದಾಗಲಿ ಅಲ್ಲದೆ (ಕೇವಲ) ತ್ಯಾಗದಿಂದಲೇ ಕೆಲವರು ಅಮೃತತ್ವವನ್ನು ಪಡೆದರು' (ಮ. ನಾ. ಉ. ೧೦.೫); **ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತ ಪ್ರವ್ರಜಂತಿ,** 'ಈ (ಆತ್ಮ) ಲೋಕವನ್ನೇ ಇಚ್ಛಿಸುತ್ತ ಸಂನ್ಯಾಸಿಗಳು ಮನೆಬಿಟ್ಟು ಹೋಗುತ್ತಾರೆ' (ಬೃ. ಉ. ೪ ೪.೨೨).

(೨) ಸ್ಮೃತಿ: **ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ,** 'ಸರ್ವ ಕರ್ಮ ಸಂನ್ಯಾಸದಿಂದ ನಿಷ್ಕ್ರಿಯವಾದ ಆತ್ಮಸ್ವರೂಪದಲ್ಲಿ ನಿಲ್ಲುವುದೆಂಬ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ' (ಗೀತಾ ೧೮.೪೯); **ಪ್ರವೃತ್ತಿಲಕ್ಷಣೋ ಯೋಗೋ ಜ್ಞಾನಂ ಸಂನ್ಯಾಸಲಕ್ಷಣಮ್ । ತಸ್ಮಾಜ್ಜ್ಞಾನಂ ಪುರಸ್ಕೃತ್ಯ ಸಂನ್ಯಸೇದಿಹ ಬುದ್ಧಿಮಾನ್** 'ಯೋಗವು ಪ್ರವೃತ್ತಿಯೆಂಬ ಲಕ್ಷಣವನ್ನೂ ಜ್ಞಾನವು ನಿವೃತ್ತಿಯೆಂಬ ಲಕ್ಷಣವನ್ನೂ ಉಳ್ಳದ್ದು. ಅದ್ದರಿಂದ ಬುದ್ಧಿವಂತನಾದವನು ಜ್ಞಾನವನ್ನು ಪುರಸ್ಕರಿಸಿ ಇಹಲೋಕ ದಲ್ಲಿ ಸಂನ್ಯಾಸವನ್ನು ಮಾಡಬೇಕು' (ಮ. ಭಾ. ಅಶ್ವ. ೪೩-೨೬).

(೩) ನ್ಯಾಯ: ಯಾವ ಮನುಷ್ಯನೇ ಆಗಲಿ ತನ್ನ ಇಷ್ಟಾರ್ಥಸಿದ್ಧಿಗೆ ಯಾವುದು ಸಹಾಯ ಮಾಡುವುದೋ ಮತ್ತು ಯಾವುದು ವಿರುದ್ಧವಲ್ಲವೋ ಅಂಥದನ್ನು ಸ್ವೀಕರಿಸುತ್ತಾನೆ. ಮೋಕ್ಷವನ್ನು ಬಯಸುವವನು ಬ್ರಹ್ಮಜಿಜ್ಞಾಸೆಯನ್ನು ಕೈಕೊಳ್ಳ

ತ್ತಾನೆ. ಬ್ರಹ್ಮ-ಆತ್ಮ-ಜ್ಞಾನಕ್ಕೆ ವೇದಾಂತ ಚಿಂತನೆಯು ಮುಖ್ಯವಾದ ಸಾಧನೆ. ಈ ಸಾಧನೆಯಲ್ಲಿ ಕರ್ಮಗಳಿಗೆ ಸ್ಥಾನವಿಲ್ಲ; ಏಕೆಂದರೆ ಕರ್ಮವನ್ನು ಬಿಟ್ಟರೂ ವೇದಾಂತ ಚಿಂತನೆಯನ್ನು ಮಾಡುವುದರಲ್ಲಿ ಯಾವ ಅಡ್ಡಿಯೂ ಇಲ್ಲ. ಆದರೆ ಕರ್ಮಗಳನ್ನು ಮಾಡುತ್ತಿರುವಾಗ ಮನಸ್ಸು ಅದರಲ್ಲಿಯೇ ವಿಕ್ಷಿಪ್ತವಾಗುವುದರಿಂದ ವೇದಾಂತದ ಅರ್ಥವನ್ನು ಸರಿಯಾಗಿ ಗ್ರಹಿಸುವುದಕ್ಕಾಗಲಿ, (ಆದುದರಿಂದಲೇ) ಚಿಂತಿಸುವುದಕ್ಕಾಗಲಿ ಸಾಧ್ಯವಾಗದು. ಹೀಗಾಗಿ ಆತ್ಮಜ್ಞಾನವನ್ನು ಬಯಸುವವನು ಕರ್ಮತ್ಯಾಗ ಮಾಡಲೇಬೇಕು.

ಕರ್ಮತ್ಯಾಗವನ್ನು ಮಾತ್ರ ಆಲಸ್ಯದಿಂದಾಗಲಿ, ಕರ್ಮ ಮಾಡುವುದು ಕಷ್ಟವೆಂದಾಗಲಿ ಮಾಡಬಾರದು. ಆದುದರಿಂದಲೇ, ಮೂಲದಲ್ಲಿ 'ವಿಧಿನಾ' ಎಂಬ ಶಬ್ದವನ್ನು ಪ್ರಯೋಗಿಸಿದೆ. ಸಂನ್ಯಾಸಗ್ರಹಣದ ವಿಧಿಗಳನ್ನು ಜಾಬಾಲವೇ ಮೊದಲಾದ ಉಪನಿಷತ್ತುಗಳಲ್ಲಿಯೂ ಮನ್ವಾದಿ ಸ್ಮೃತಿಗಳಲ್ಲಿಯೂ ವಿವರಿಸಿದೆ.

**ತಿತಿಕ್ಷಾ ಶೀತೋಷ್ಣಾದಿದ್ವಂದ್ವಸಹಿಷ್ಣುತಾ ॥ ೨೨ ॥**

೨೨. ಶೀತ ಉಷ್ಣ ಮೊದಲಾದ ದ್ವಂದ್ವಗಳನ್ನು ಸಹಿಸಿಕೊಳ್ಳುವುದೇ ತಿತಿಕ್ಷೆ.

'ಮೊದಲಾದ' ಎಂಬ ಪದದಿಂದ ಮಾನ-ಅಪಮಾನ, ಲಾಭ-ನಷ್ಟ, ಶೋಕ-ಹರ್ಷ ಇತ್ಯಾದಿಗಳನ್ನು ಗ್ರಹಿಸಬೇಕು. ಶರೀರವನ್ನು ಧರಿಸಿರುವವರೆಗೂ ಇವು ಅನಿವಾರ್ಯವಾದುದರಿಂದ ಅವುಗಳಿಂದ ಮನಸ್ಸು ಪ್ರಭಾವಿತವಾದರೆ ವೇದಾಂತ ಸಾಧನೆಯು ಅಸಾಧ್ಯವಾಗುವುದರಿಂದ, ಅಸಂಗಚಿದ್ರೂಪನಾದ ಆತ್ಮನೇ ನಾನು ಎಂಬ ಭಾವನೆಯ ಮೂಲಕ ಮನಸ್ಸನ್ನು ಮೇಲೆತ್ತಿ ಇವನ್ನು ಸಹಿಸಿಕೊಳ್ಳಲು ಪ್ರಯತ್ನಿಸಬೇಕು.

ಭಗವತ್ಪಾದಾಚಾರ್ಯರು ತಿತಿಕ್ಷೆಯನ್ನು ತಮ್ಮ 'ವಿವೇಕಚೂಡಾಮಣಿ'ಯಲ್ಲಿ (೨೪) ಅದ್ಭುತವಾಗಿ ಹೀಗೆ ನಿರ್ವಚನ ಮಾಡಿರುತ್ತಾರೆ : **ಸಹನಂ ಸರ್ವದುಃಖಾನಾಮ್ ಅಪ್ರತೀಕಾರಪೂರ್ವಕಮ್ । ಚಿಂತಾವಿಲಾಪರಹಿತಂ ಸಾ ತಿತಿಕ್ಷಾ ನಿಗದ್ಯತೇ ॥** 'ನಾನಾ ಬಗೆಯಾದ ದುಃಖಗಳು ಸಂಭವಿಸಿದಾಗ ಅವುಗಳ ಪರಿಹಾರಕ್ಕೆ ಯಾವುದೊಂದು ಪ್ರತೀಕಾರವನ್ನೂ ಮಾಡದೆ ಮನಸ್ಸಿನಲ್ಲಿ ಕೊರಗದೆ ಮತ್ತು ಶೋಕಿಸದೆ ಸಹಿಸಿಕೊಂಡಿರುವುದನ್ನೇ ತಿತಿಕ್ಷೆ ಎನ್ನುತ್ತಾರೆ.'

**ನಿಗೃಹೀತಸ್ಯ ಮನಸಃ ಶ್ರವಣಾದೌ ತದನುಗುಣವಿಷಯೇ ಚ ಸಮಾಧಿಃ ಸಮಾಧಾನಮ್ ॥ ೨೩ ॥**

೨೩. (ಹೀಗೆ) ನಿಗ್ರಹಿಸಿದ ಮನಸ್ಸನ್ನು ಶ್ರವಣವೇ ಮೊದಲಾದುದರಲ್ಲಿಯೂ, ಅದಕ್ಕೆ ಅನುಗುಣವಾದ (ಇತರ) ವಿಷಯದಲ್ಲಿಯೂ[1] ಏಕಾಗ್ರಗೊಳಿಸುವುದೇ 'ಸಮಾಧಾನ'.

1 ಗೀತಾ ೧೬.೧-೩ ರಲ್ಲಿ ಹೇಳಿರುವ ೨೬ 'ದೈವೀ ಸಂಪತ್' ಗುಣಗಳನ್ನೂ ಗುರುಶುಶ್ರೂಷೆ, ವೇದಾಂತ ಗ್ರಂಥಗಳ ಸಂಗ್ರಹಣ ಅಧ್ಯಯನ ಮೊದಲಾದುವನ್ನೂ ಇಲ್ಲಿ ಗ್ರಹಿಸಬಹುದು.

**ಗುರೂಪದಿಷ್ಟವೇದಾಂತವಾಕ್ಯೇಷು ವಿಶ್ವಾಸಃ ಶ್ರದ್ಧಾ ॥ ೨೪ ॥**

೨೪. ಶ್ರದ್ಧೆಯೆಂದರೆ ಗುರುಗಳು ಉಪದೇಶಮಾಡುವ ವೇದಾಂತವಾಕ್ಯಗಳಲ್ಲಿ[1] ವಿಶ್ವಾಸವನ್ನಿಡುವುದು.[2]

1 ಎಂದರೆ ಅವುಗಳ ಅರ್ಥಗಳಲ್ಲಿ. ಇಲ್ಲಿ ಉಪನಿಷತ್ತುಗಳಿಗೆ ಅನುಗುಣವಾಗಿರುವ ಸ್ಮೃತಿ ಇತಿಹಾಸ ಪುರಾಣಗಳನ್ನೂ ಸೇರಿಸಿಕೊಳ್ಳಬೇಕು.

2 'ಇದು ಹೀಗೆಯೋ, ಹಾಗಲ್ಲ' ಎಂಬ ಸಂಶಯರಹಿತವಾದ, ಅಚಲವಾದ, ನಂಬಿಕೆ. ಶ್ರದ್ಧೆಯ ಅವಶ್ಯಕತೆಯನ್ನು ಎಲ್ಲ ಆಧ್ಯಾತ್ಮಶಾಸ್ತ್ರ-ಗ್ರಂಥಗಳಲ್ಲೂ ಒತ್ತಿ ಹೇಳಿದೆ. ಗೀತೆಯ ೧೭ನೆಯ ಅಧ್ಯಾಯದಲ್ಲಿ ಮೂರು ವಿಧದ ಶ್ರದ್ಧೆಯ ವಿಷಯವನ್ನು ವಿಸ್ತಾರವಾಗಿ ನಿರೂಪಿಸಿದೆ.

**ಮುಮುಕ್ಷುತ್ವಂ ಮೋಕ್ಷೇಚ್ಛಾ ॥ ೨೫ ॥**

೨೫. ಮೋಕ್ಷೇಚ್ಛೆಯೇ ಮುಮುಕ್ಷುತ್ವ.

ದೇಹ ಇಂದ್ರಿಯ ಮನಸ್ಸು ಮೊದಲಾದುವನ್ನೇ ನಾವು ಎಂದು ಭ್ರಮಿಸಿರುವುದರಿಂದ ನಮಗೆ ಜನ್ಮ ರೋಗ ಮುಪ್ಪು ಮರಣ ಮೊದಲಾದ ರೂಪದ ಬಂಧನವುಂಟಾಗಿರುತ್ತದೆ. ಇದಕ್ಕೆ ಮೂಲ ಅವಿದ್ಯೆ. ವಿದ್ಯೆಯಿಂದ ಅವಿದ್ಯೆಯ ನಾಶವಾದಾಗ ನಾವು ಸಚ್ಚಿದಾನಂದ ಆತ್ಮ, ನಾವೇ ಬ್ರಹ್ಮ ಎಂಬ ಅನುಭವದಲ್ಲಿ ನೆಲೆನಿಲ್ಲುತ್ತೇವೆ. ಆಗ ಎಲ್ಲ ಬಂಧನಗಳೂ ಕಳಚಿಹೋಗುತ್ತದೆ. ಇದೇ ಮೋಕ್ಷ. ಮೋಕ್ಷಕ್ಕಾಗಿ ಆಶೆಪಡುವುದು ಆಶೆಯಲ್ಲ; ಏಕೆಂದರೆ ಈ 'ಆಶೆ'ಯು ನಮ್ಮನ್ನು ಆತ್ಮಜ್ಞಾನಕ್ಕೆ ಕರೆದೊಯ್ಯುತ್ತ, ಇತರ ಎಲ್ಲ ಆಶೆಗಳಿಂದಲೂ ಬಿಡುಗಡೆ ಮಾಡುತ್ತದೆ.

**ಏವಂಭೂತಃ ಪ್ರಮಾತಾ ಅಧಿಕಾರೀ, 'ಶಾಂತೋ ದಾಂತಃ....' (ಬೃ. ಉ. ೪.೪.೨೩) ಇತ್ಯಾದಿಶ್ರುತೇಃ । ಉಕ್ತಂ ಚ—**

**'ಪ್ರಶಾಂತಚಿತ್ತಾಯ ಜಿತೇಂದ್ರಿಯಾಯ ಚ**
**ಪ್ರಹೀಣದೋಷಾಯ ಯಥೋಕ್ತಕಾರಿಣೇ ।**
**ಗುಣಾನ್ವಿತಾಯಾನುಗತಾಯ ಸರ್ವದಾ**
**ಪ್ರದೇಯಮೇತತ್ ಸತತಂ ಮುಮುಕ್ಷವೇ ॥ ಇತಿ**

**(ಉ. ಸಾ. ೧೬. ೭೨) ॥ ೨೬ ॥**

೨೬. ಇಂತಹ ಪ್ರಮಾತೃವೇ ಅಧಿಕಾರಿ. 'ಶಾಂತನೂ ದಾಂತನೂ....'[1] (ಬೃ.ಉ. ೪.೪.೪.೨೩) ಮುಂತಾದ ಶ್ರುತಿಯಿಂದ (ಹೀಗೆ ತಿಳಿದುಬರುತ್ತದೆ). ಮತ್ತು (ಹೀಗೂ ಹೇಳಿದೆ) : 'ಪ್ರಶಾಂತಮನಸ್ಸುಳ್ಳವನೂ, ಇಂದ್ರಿಯಗಳನ್ನು ನಿಗ್ರಹಿಸಿರುವವನೂ, ದೋಷಗಳನ್ನು ನಾಶಮಾಡಿಕೊಂಡಿರುವವನೂ,[2] ಹೇಳಿದಂತೆ ಆಚರಿಸುವವನೂ,[3] ಗುಣಸಂಯುಕ್ತನೂ,[4] ಸರ್ವದಾ (ಗುರುವನ್ನು) ಅನುಸರಿಸುವವನೂ ಆದ ಮುಮುಕ್ಷುವಿಗೆ ಇದನ್ನು ಸತತವೂ ಕೊಡತಕ್ಕದ್ದು'[5] (ಉ. ಸಾ. ೧೬.೭೨).

1 ಬೃಹದಾರಣ್ಯಕೋಪನಿಷತ್ತು ಕಾಣ್ವಶಾಖೆ ಮತ್ತು ಮಾಧ್ಯಂದಿನಶಾಖೆ ಎಂದು ಎರಡು ಕವಲಾಗಿ ಒಡೆದಿದೆ. ಕಾಣ್ವಶಾಖೆಯಲ್ಲಿ ಶಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯತಿ, 'ಶಾಂತನೂ ದಾಂತನೂ ಉಪರತನೂ ತಿತಿಕ್ಷುವೂ ಸಮಾಹಿತನೂ ಆಗಿ ಆತ್ಮನಲ್ಲಿ ಆತ್ಮನನ್ನು ಕಾಣಬೇಕು' ಎಂದು ಹೇಳಿದೆ. ಮಾಧ್ಯಂದಿನ ಶಾಖೆಯಲ್ಲಿ ಸಮಾಹಿತಃ ಎಂಬುದರ ಬದಲು ಶ್ರದ್ಧಾವಿತ್ತಃ ಎಂದಿದೆ. 'ಗುಣೋಪಸಂಹಾರನ್ಯಾಯ'ದಿಂದ ಈ ಎರಡೂ ಪಾಠಗಳಿಗೂ ಅನುಗುಣವಾಗಿರುವಂತೆ ಶಮಾದಿ ಆರು ಗುಣಗಳನ್ನು ವಿವರಿಸಿದೆ. ಒಂದೇ ವಿಷಯವನ್ನು ಕುರಿತ ವಿಭಿನ್ನ ಗ್ರಂಥಗಳಲ್ಲಿ ವಿವರಗಳ ಬಗ್ಗೆ ಭೇದವಿದ್ದರೂ ಅದೆಲ್ಲವನ್ನೂ ಗ್ರಹಿಸಬಹುದು, ಒಂದರಲ್ಲಿ ಇಲ್ಲದ್ದನ್ನು ಮತ್ತೊಂದರಿಂದ ಸೇರಿಸಿಕೊಳ್ಳಬಹುದು ಎಂಬುದು 'ಗುಣೋಪಸಹಾರನ್ಯಾಯ'. ಭಗವತ್ಪಾದರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ಒಂದು ಕಡೆ ಗುಣೋಪಸಂಹಾರನ್ಯಾಯವನ್ನು ಸೂಚಿಸಿರುತ್ತಾರೆ: ೩.೩.೩, ೧೯, ೨೦, ೨೬ ಮತ್ತು ೫೮.

2 ರಾಗದ್ವೇಷಾದಿ ದೋಷಗಳನ್ನು ಕಾಮಕ್ರೋಧಲೋಭಾದಿ ಅರಿಷಡ್ವರ್ಗವನ್ನು ನಾಶಮಾಡಿರುವವನು, ಅತ್ಯಂತ ನಿರ್ಮಲವಾದ ಅಂತಃಕರಣವುಳ್ಳವನು.

3 ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಸ್ವಧರ್ಮವನ್ನು ಆಚರಿಸುವವನು.

4 ವಿದ್ಯೆ ವಿನಯ ಸರಳತೆ ಮೊದಲಾದ ಅಥವಾ ವಿವೇಕ ವೈರಾಗ್ಯ ಮೊದಲಾದ ಗುಣಗಳಿಂದ ಕೂಡಿದವನು.

5 ಇಂಥ ಗುಣಗಳುಳ್ಳ ಶಿಷ್ಯನು ಸಿಕ್ಕಿದರೆ ಅವನಿಗೆ ಆತ್ಮಜ್ಞಾನವನ್ನು ಉಪದೇಶಿಸಲೇಬೇಕು ಎಂಬುದು ಗುರುವಿಗೂ ಅನ್ವಯಿಸುವ ನಿಯಮ. ಆಚಾರ್ಯಸ್ಯಾಪಿ ಅಯಂ ನಿಯಮೋ ಯನ್ನ್ಯಾಯಪ್ರಾಪ್ತಸಚ್ಛಿಷ್ಯನಿಸ್ತಾರಣಮ್ ಅವಿದ್ಯಾಮಹೋದಧೇಃ, 'ನಿಯಮಗಳಿಗನುಸಾರವಾಗಿ ತನ್ನ ಬಳಿಗೆ ಬಂದಿರುವ ಸಚ್ಛಿಷ್ಯನನ್ನು ಅವಿದ್ಯಾಸಾಗರದಿಂದ ದಾಟಿಸುವುದೆಂಬುದು ಆಚಾರ್ಯನಿಗೂ ನಿಯಮವಾಗಿರುತ್ತದೆ' ಎಂದು ಶ್ರೀಶಂಕರರು ತಮ್ಮ ಮುಂಡಕಭಾಷ್ಯದಲ್ಲಿ (೧.೨.೧೩) ಹೇಳಿರುತ್ತಾರೆ.

ಮಹಾಭಾರತದ ಮೋಕ್ಷಧರ್ಮಪರ್ವ ೩೧೦.೩೫-೩೬ ರಲ್ಲಿ ಹೇಳಿರುವ ಗುಣಗಳನ್ನೆಲ್ಲ ಆಚಾರ್ಯ ಶಂಕರರು ತಮ್ಮ ಈ ಶ್ಲೋಕದಲ್ಲಿ ಸಂಗ್ರಹಿಸಿರುತ್ತಾರೆ.

## ವಿಷಯ

**ವಿಷಯಃ — ಜೀವಬ್ರಹ್ಮೈಕ್ಯಂ ಶುದ್ಧಚೈತನ್ಯಂ ಪ್ರಮೇಯಂ ತತ್ರ ಏವ ವೇದಾಂತಾನಾಂ ತಾತ್ಪರ್ಯಾತ್ ॥ ೨೭ ॥**

೨೭. ಶುದ್ಧಚೈತನ್ಯವೂ ಪ್ರಮೇಯವೂ ಆದ ಜೀವ-ಬ್ರಹ್ಮರ ಐಕ್ಯವೇ 'ವಿಷಯ'; ಏಕೆಂದರೆ ವೇದಾಂತ (ವಾಕ್ಯ)ಗಳಿಗೆ ಅದರಲ್ಲಿಯೇ ತಾತ್ಪರ್ಯವಿರುತ್ತದೆ.

'ಮಾ' ಎಂದರೆ ಅಳೆಯುವುದು. ಒಂದು ವಸ್ತುವನ್ನು 'ಅಳೆಯುವ' ಎಂದರೆ ಅರಿಯಲು ಸಾಧನವಾಗಿರುವ ಉಪಕರಣಕ್ಕೆ ಮಾನ ಅಥವಾ ಪ್ರಮಾಣ ಎಂದು ಹೆಸರು. ಪ್ರತ್ಯಕ್ಷ, ಅನುಮಾನ ಮತ್ತು ಆಗಮ(ಶ್ರುತಿ) ಇವು ಜ್ಞಾನಸಹಾಯಕವಾದ ಮುಖ್ಯ ಪ್ರಮಾಣಗಳು. ಇವುಗಳಿಂದ ಅರಿಯಲ್ಪಡುವ ವಿಷಯವೇ 'ಪ್ರಮೇಯ'. ಅರಿಯುವವನೇ ಪ್ರಮಾತೃ.

ವೇದಾಂತ ಎಂಬ ಶಬ್ದದಿಂದ ಉಪನಿಷತ್ತುಗಳು, ಭಗವದ್ಗೀತೆ, ಬ್ರಹ್ಮಸೂತ್ರಗಳು ಮತ್ತು ಇವುಗಳನ್ನು ಅನುಸರಿಸುವ ಸ್ಮೃತಿ ಇತಿಹಾಸ ಪುರಾಣಾದಿಗಳು ಇವೆಲ್ಲವನ್ನೂ ಗ್ರಹಿಸಬೇಕು ಎಂದು ಹಿಂದೆಯೇ ಹೇಳಿದೆ. ಇವೇ ವೇದಾಂತಶಾಸ್ತ್ರ. ಈ ಶಾಸ್ತ್ರ

ಮುಖ್ಯವಾಗಿ ನಮ್ಮ ನಿಜಸ್ವರೂಪವಾಗಿರುವ ಆತ್ಮವನ್ನೂ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಆಧಾರವಾಗಿರುವ ಬ್ರಹ್ಮವನ್ನೂ ಅವೆರಡರ ಐಕ್ಯವನ್ನೂ ಪ್ರತಿಪಾದಿಸುತ್ತದೆ. (ಬ್ರ. ಸೂ. ೧-೧-೪ ನೋಡಿ). ಆತ್ಮ ಬ್ರಹ್ಮ ಮತ್ತು ಅವೆರಡರ ಐಕ್ಯ—ಇವೇ ವೇದಾಂತಶಾಸ್ತ್ರದ 'ಪ್ರಮೇಯ'. ಈ ಪ್ರಮೇಯವೇ ವೇದಾಂತದ ವಿಷಯ.

ಸಂಸಾರದಲ್ಲಿ ಬಿದ್ದು ತೊಳಲಾಡುತ್ತಿರುವ ಜೀವನಿಗೂ ಜಗತ್ತಿನ ಸೃಷ್ಟ್ಯಾದಿಕರ್ತೃವಾದ ಮತ್ತು ಅದನ್ನೂ ಮೀರಿರುವ ಪರಬ್ರಹ್ಮಕ್ಕೂ ಐಕ್ಯವನ್ನು ಹೇಳಲು ಹೇಗೆ ಸಾಧ್ಯವಾದೀತು ? ಅವಿದ್ಯೆಯ ಫಲವಾಗಿ ಆತ್ಮನಲ್ಲಿ, ಮಾಯೆಯ ದೆಸೆಯಿಂದ ಬ್ರಹ್ಮದಲ್ಲಿ ಕಲ್ಪಿಸಿರುವ ಉಪಾಧಿಗಳನ್ನು ಕಡೆಗಣಿಸಿ ನೋಡಿದಾಗ ವಸ್ತುತಃ ಅವೆರಡೂ ಶುದ್ಧ ಚೈತನ್ಯವೇ ಎಂಬುದನ್ನು ಅರಿಯುತ್ತೇವೆ. ಚೈತನ್ಯವೆಂಬ ಈ ದೃಷ್ಟಿಕೋಣದಿಂದ ನೋಡಿದಾಗ ಅವೆರಡೂ ಒಂದೇ ವಸ್ತುವೆಂಬ ಜ್ಞಾನವುಂಟಾಗುತ್ತದೆ. ಜೀವ-ಬ್ರಹ್ಮರ ಐಕ್ಯವೆಂದರೆ ಇದೇ ಹೊರತು, ನೀರು ಹಾಲುಗಳನ್ನು ಬೆರೆಸಿದಾಗ ಅವುಗಳಲ್ಲುಂಟಾಗುವ ಐಕ್ಯವಲ್ಲ. ಈ ವಿಷಯವನ್ನು ಮುಂದೆ (೧೪೮ ರಿಂದ ೧೬೯) ವಿಸ್ತಾರವಾಗಿ ವಿಚಾರಿಸಲಾಗುವುದು.

ಶುದ್ಧಚೈತನ್ಯವಾದ ಆತ್ಮ-ಬ್ರಹ್ಮವು ಯಾವ ಪ್ರಮಾಣದಿಂದಲೂ ಅರಿಯಲಾಗದ ಮತ್ತು ಯಾವ ಪ್ರಮಾಣಕ್ಕೂ ನಿಲುಕದ ವಸ್ತುವಾದುದರಿಂದ ಅದನ್ನು 'ಪ್ರಮೇಯ' ಎಂದು ಕರೆಯುವುದೇ ತಪ್ಪು. ಆದರೆ ಈ ಮಾತನ್ನು 'ಹಿಂದೆ ಅರಿಯದಿರುವ, ಸ್ಥೂಲವಾಗಿ ಅರಿತಿರುವ, ಈಗ ಚೆನ್ನಾಗಿ ಅರಿಯಬೇಕಾಗಿರುವ ವಸ್ತು' ಎಂಬ ವ್ಯಾವಹಾರಿಕ ದೃಷ್ಟಿಯಿಂದ ಪ್ರಯೋಗಿಸಿದೆ; ಏಕೆಂದರೆ ಪ್ರಮಾಣದಿಂದ ಸೂಚಿತವಾಗದಿರುವ ವಸ್ತುವನ್ನು ಪಡೆಯಬೇಕೆಂಬ ಪ್ರವೃತ್ತಿಯೇ ಉಂಟಾಗುವುದಿಲ್ಲವಷ್ಟೆ.

### ಸಂಬಂಧ

**ಸಂಬಂಧಸ್ತು—ತದೈಕ್ಯಪ್ರಮೇಯಸ್ಯ ತತ್ಪ್ರತಿಪಾದಕೋಪನಿಷತ್ಪ್ರಮಾಣಸ್ಯ ಚ ಬೋಧ್ಯಬೋಧಕಭಾವಃ ॥ ೨೮ ॥**

೨೮. ಆ (ಜೀವ-ಬ್ರಹ್ಮರ) ಐಕ್ಯರೂಪವಾದ ಪ್ರಮೇಯಕ್ಕೂ ಅದನ್ನು ಪ್ರತಿಪಾದಿಸುವ ಉಪನಿಷತ್ತೆಂಬ ಪ್ರಮಾಣಕ್ಕೂ ಇರುವ ಬೋಧ್ಯ-ಬೋಧಕ-ಭಾವವೇ 'ಸಂಬಂಧ.'

ಅನುಬಂಧ ಚತುಷ್ಟಯದಲ್ಲಿ ಮೂರನೆಯದಾದ 'ಸಂಬಂಧ'ವನ್ನು ಇಲ್ಲಿ ನಿರ್ವಚನಮಾಡಲಾಗಿದೆ. ಸಂಬಂಧವೆಂದಕೂಡಲೇ ಯಾವುದಕ್ಕೂ ಮತ್ತಾವುದಕ್ಕೂ ಇರುವ ಸಂಬಂಧ? ಎಂಥ ಸಂಬಂಧ?—ಎಂಬೀ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ವೇದಾಂತಶಾಸ್ತ್ರಕ್ಕೂ ಅದು ಹೇಳಹೊರಟಿರುವ ವಿಷಯಕ್ಕೂ ಇರುವ ಸಂಬಂಧವೇ ಇಲ್ಲಿ ನಿರ್ವಚನ ಮಾಡಿರುವ 'ಸಂಬಂಧ'. ಇದನ್ನು ಬೋಧ್ಯ-ಬೋಧಕ-ಭಾವ ಎಂದು ಕರೆದಿದೆ. ತಿಳಿಸಿಕೊಡುವಂಥದ್ದು 'ಬೋಧಕ', ತಿಳಿದುಬರತಕ್ಕದ್ದು 'ಬೋಧ್ಯ'. ಉಪನಿಷತ್ತುಗಳ ಮೂಲಕ ಬ್ರಹ್ಮಾತ್ಮೈಕ್ಯವು ತಿಳಿದುಬರುವುದರಿಂದ ಈ ರೀತಿ ಸಂಬಂಧವನ್ನು ಹೇಳಿದೆ.

## ಪ್ರಯೋಜನ

**ಪ್ರಯೋಜನಂ ತು ತದೈಕ್ಯಪ್ರಮೇಯಗತ-ಅಜ್ಞಾನ-ನಿವೃತ್ತಿಃ ಸ್ವಸ್ವರೂಪ-ಆನಂದ-ಅವಾಪ್ತಿಶ್ಚ, 'ತರತಿ ಶೋಕಮ್ ಆತ್ಮವಿತ್' (ಛಾಂ. ಉ. ೭.೧.೩) ಇತ್ಯಾದಿಶ್ರುತೇಃ, 'ಬ್ರಹ್ಮವಿದ್ ಬ್ರಹ್ಮೈವ ಭವತಿ' (ಮುಂ. ಉ. ೩.೨೯) ಇತ್ಯಾದಿಶ್ರುತೇಶ್ಚ ॥೨೯॥**

೨೯. 'ಪ್ರಯೋಜನ'ವೆಂದರೆ ಆ (ಜೀವ-ಬ್ರಹ್ಮರ) ಐಕ್ಯವೆಂಬ ಪ್ರಮೇಯದ ಬಗೆಗಿರುವ ಅಜ್ಞಾನದ ನಾಶ ಮತ್ತು ಸ್ವಸ್ವರೂಪವಾದ ಆನಂದದ ಪ್ರಾಪ್ತಿ. 'ಆತ್ಮಜ್ಞಾನಿಯು ಶೋಕವನ್ನು ದಾಟುತ್ತಾನೆ' (ಛಾಂ. ಉ. ೭.೧.೩) ಇತ್ಯಾದಿ ಶ್ರುತಿಯಿಂದಲೂ ಮತ್ತು 'ಬ್ರಹ್ಮಜ್ಞಾನಿಯು ಬ್ರಹ್ಮವೇ ಆಗುತ್ತಾನೆ' (ಮುಂ. ಉ. ೩.೨.೯) ಎಂಬಿವೇ ಮೊದಲಾದ ಶ್ರುತಿಯಿಂದಲೂ (ಹೀಗೆ ತಿಳಿದುಬರುತ್ತದೆ).

ಸ್ವರೂಪತಃ ಚೈತನ್ಯವೇ ಆಗಿರುವ ಜೀವ-ಬ್ರಹ್ಮರಲ್ಲಿ ಐಕ್ಯವಿದೆ, ಇದೇ ವೇದಾಂತದ 'ಪ್ರಮೇಯ' ಅಥವಾ ವಿಷಯ ಎಂಬುದನ್ನು ಹಿಂದೆಯೇ ಹೇಳಿದೆ. ಈ ಐಕ್ಯದ ಅನುಭವ ನಮಗೆ ಉಂಟಾಗದೆ ಇರುವುದಕ್ಕೆ ಅದರ ಬಗೆಗಿರುವ ಅಜ್ಞಾನವೇ ಕಾರಣ. ವೇದಾಂತದ ಅಧ್ಯಯನದಿಂದ, ಸಾಧನಚತುಷ್ಟಯದ ಮತ್ತು ಶ್ರವಣಾದಿಗಳ ಮೂಲಕ ಈ ಅಜ್ಞಾನವು ನಷ್ಟವಾದಾಗ, ನಮ್ಮ ನಿಜಸ್ವರೂಪವಾಗಿರುವ ಆನಂದವು ತಾನಾಗಿಯೇ ಅಭಿವ್ಯಕ್ತವಾಗುತ್ತದೆ. ಇದು ಹಿಂದೆಯೂ ಇದ್ದುಕೊಂಡಿದ್ದರೂ ಆಗ ಅನುಭವಕ್ಕೆ ನಿಲುಕದೆ ಈಗ ಬರುತ್ತಿರುವುದರಿಂದ ಹೊಸದಾಗಿ ಪಡೆದಂತೆಯೇ ತೋರುತ್ತದೆ. ಆದುದರಿಂದಲೇ 'ಅವಾಪ್ತಿ' ಎಂಬ ಪದವನ್ನು ಮೂಲದಲ್ಲಿ ಪ್ರಯೋಗಿಸಿದೆ.

ಶೋಕವೆಂದರೆ ಶೋಕಮೂಲವಾದ ಸಂಸಾರ. ಆತ್ಮಜ್ಞಾನಿಯೂ ಆ ಆತ್ಮಜ್ಞಾನದ ಮೂಲಕ ತಾನು ಚೈತನ್ಯವೆಂಬ ಅನುಭವವನ್ನು ಪಡೆದ ಕೂಡಲೇ ಶರೀರಾದಿಗಳೊಡನೆ ಇದ್ದ ಐಕ್ಯಭಾವವು ಬಿಟ್ಟುಹೋಗುತ್ತದೆ. ಅದರ ಜೊತೆಯಲ್ಲಿಯೇ ಅವುಗಳಿಂದ ಇದುವರೆಗೂ ಅನುಭವಕ್ಕೆ ಬರುತ್ತಿದ್ದ ಶೋಕವೂ ನಷ್ಟವಾಗುತ್ತದೆ. ಛಾಂದೋಗ್ಯ ವಾಕ್ಯವು ಇದನ್ನೇ ವಿವರಿಸುತ್ತವೆ. ಈ ವಾಕ್ಯವನ್ನು ಶಿಷ್ಯನಾದ ನಾರದನು ಗುರುವಾದ ಸಂಪತ್ಕುಮಾರನನ್ನು ಕುರಿತು ಹೇಳಿರುತ್ತಾನೆ. ಪೂರ್ಣವಾದ ಶ್ರುತಿವಾಕ್ಯ ಹೀಗಿದೆ: ಸೋಽಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿತ್, ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ತರತಿ ಶೋಕಮ್ ಆತ್ಮವಿತ್ ಇತಿ, ಸೋಽಹಂ ಭಗವಃ ಶೋಚಾಮಿ, ತಂ ಮಾ ಭಗವನ್ ಶೋಕಸ್ಯ ಪಾರಂ ತಾರಯತು ಇತಿ; 'ಭಗವಂತನೇ, ನಾನು ಮಂತ್ರವನ್ನು (ಎಂದರೆ ಕರ್ಮವನ್ನು) ಮಾತ್ರ ಅರಿತಿರುವವನೇ ಹೊರತು ಆತ್ಮನನ್ನು ಅರಿತಿಲ್ಲ. ಭಗವಂತನಂಥವರಿಂದ "ಆತ್ಮನನ್ನು ಅರಿತವನು ಶೋಕವನ್ನು ದಾಟುತ್ತಾನೆ" ಎಂದು ನಾನು ಕೇಳಿದ್ದೇನೆ. ಭಗವನ್! ನಾನು ಶೋಕಿಸುತ್ತಿದ್ದೇನೆ! ಅಂಥ ನನ್ನನ್ನು ಭಗವಂತನು ಶೋಕದ ಆಚೆಯ ದಡಕ್ಕೆ ದಾಟಿಸಲಿ!' (೭-೧.೩) ಆತ್ಮಾನುಭವವುಂಟಾಗುವವರೆಗೆ ಶೋಕವಿರುತ್ತದೆ, ಅದು ಉಂಟಾದ ಕೂಡಲೇ ಶೋಕವು ನಷ್ಟವಾಗುತ್ತದೆ ಎಂಬುದು ಇದರಿಂದ ಸ್ಪಷ್ಟವಾಗಿದೆ.

ಆತ್ಮಜ್ಞಾನಿಯು ಶೋಕಾತೀತವಾದ ಯಾವುದೋ ಒಂದು ಹೊಸ ಸ್ಥಿತಿಯನ್ನು ಪಡೆಯುತ್ತಾನೆ ಎಂಬ ಭ್ರಮೆಯುಂಟಾಗದಿರಲಿ ಎಂದು ಮುಂಡಕಶ್ರುತಿಯನ್ನು ಉದಾಹರಿಸಿದೆ. ಬ್ರಹ್ಮವನ್ನು ಅರಿಯುವವನು ಬ್ರಹ್ಮವೇ ಆಗುತ್ತಾನೆ, ಹೊಸದಾದ ಮತ್ತಾವ ಅವಸ್ಥೆಯನ್ನೂ ಪಡೆಯುವುದಿಲ್ಲ. ಒಂದೇ ವಿಷಯವನ್ನು ಸಮರ್ಥಿಸುವುದಕ್ಕೆ ಈ ಎರಡು ಶ್ರುತಿವಾಕ್ಯಗಳನ್ನು ಆರಿಸಿರುವುದರಲ್ಲಿಯೂ ಒಂದು ಔಚಿತ್ಯವಿದೆ. ಒಂದರಲ್ಲಿ ಆತ್ಮಶಬ್ದದ, ಮತ್ತೊಂದರಲ್ಲಿ ಬ್ರಹ್ಮಶಬ್ದದ ಪ್ರಯೋಗವಿದೆ. ಅವೆರಡೂ ಒಂದೇ ಎಂಬುದನ್ನು ಹೀಗೆ ಸೂಚಿಸಿದೆ.

## ಗುರೂಪಸದನ

**ಅಯಮಧಿಕಾರೀ ಜನನಮರಣಾದಿಸಂಸಾರಾನಲಸಂತಪ್ತೋ ದೀಪ್ತಶಿರಾ ಜಲರಾಶಿಮಿವ ಉಪಹಾರಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ಗುರುಮುಪಸೃತ್ಯ ತಮನುಸರತಿ, 'ತದ್ವಿಜ್ಞಾನಾರ್ಥಂ ಸ ಗುರು**

**ಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್' (ಮುಂ. ಉ. ೧.೨.೧೨) ಇತ್ಯಾದಿಶ್ರುತೇಃ ॥ ೩೦ ॥**

೩೦. ಇಂಥ[1] ಅಧಿಕಾರಿಯು ಹುಟ್ಟು ಸಾವು ಮೊದಲಾದ[2] (ರೂಪದ) ಸಂಸಾರವೆಂಬ ಬೆಂಕಿಯಿಂದ ಸುಡಲ್ಪಟ್ಟು–ತಲೆ ಸುಡುತ್ತಿರುವವನು ಸರೋವರವನ್ನು ಹೇಗೋ ಹಾಗೆ–ಕಾಣಿಕೆಯನ್ನು[3] ಕಯ್ಯಲ್ಲಿ ಹಿಡಿದು, ಶ್ರೋತ್ರಿಯನೂ[4] ಬ್ರಹ್ಮನಿಷ್ಠನೂ[5] ಆದ ಗುರುವನ್ನು ಬಳಿಸಾರಿ[6] ಅವನನ್ನು ಸೇವಿಸುತ್ತಾನೆ.[7] 'ಅದನ್ನು ತಿಳಿದುಕೊಳ್ಳಲು ಅವನು ಸಮಿತ್ತನ್ನು[8] ಕಯ್ಯಲ್ಲಿ ಹಿಡಿದು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವನ್ನು ಬಳಿಸಾರಬೇಕು' (ಮುಂ. ಉ.೧.೨.೧೨) ಎಂಬಿವೇ ಮೊದಲಾದ ಶ್ರುತಿಯಿಂದ[9] (ಹೀಗೆ ತಿಳಿದುಬರುತ್ತದೆ).

1 ಸಾಧನಚತುಷ್ಟಯಸಂಪನ್ನನಾದ.

2 ರೋಗರುಜನಗಳು, ರಾಗದ್ವೇಷಾದಿಗಳು.

3 ರಾಜನನ್ನು ದೇವರನ್ನು ಮತ್ತು ಗುರುವನ್ನು ನೋಡಬಯಸುವವನು ಬರಿಗೈಯಲ್ಲಿ ಹೋಗಬಾರದು, ರಿಕ್ತಪಾಣಿರ್ನ ಸೇವೇತ ರಾಜಾನಂ ದೇವತಾಂ ಗುರುಮ್ ಎಂದು ಹೇಳುತ್ತಾರೆ.

4 ವೇದ ವೇದಾಂಗ ವೇದಾಂತಗಳಲ್ಲಿ ಪಂಡಿತನಾದವನು; ಅಥವಾ ಅವುಗಳ ಸಾರವನ್ನರಿತಿರುವವನು. ಇದರ ಜೊತೆಗೆ ಅಕಾಮಹತತ್ವ (ಆಶೆಯಿಲ್ಲದಿರುವಿಕೆ), ಅವೃಜಿನತ್ವ (ಪಾಪವಿಲ್ಲದಿರುವಿಕೆ) ಎಂಬ ಮತ್ತೆರಡು ಗುಣಗಳನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ (೪-೩-೩೩) ಹೇಳಿವೆ: ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ.

5 ಬ್ರಹ್ಮಾನುಭವದಲ್ಲಿ ನೆಲೆನಿಂತಿರುವವನು.

6 ಆತ್ಮಜ್ಞಾನವನ್ನು ಗುರುಮುಖವಾಗಿಯೇ ಪಡೆಯಬೇಕು ಎಂಬುದನ್ನು ಸೂಚಿಸುವುದಕ್ಕಾಗಿ ಹೀಗೆ ಹೇಳಿದೆ. ಈ ಮುಂಡಕವಾಕ್ಯವನ್ನು ವಿವರಿಸುವಾಗ ಭಗವತ್ಪಾದರು ಶಾಸ್ತ್ರಜ್ಞೋಽಪಿ ಸ್ವಾತಂತ್ರ್ಯೇಣ ಬ್ರಹ್ಮಜ್ಞಾನಾನ್ವೇಷಣಂ ನ ಕುರ್ಯಾತ್, 'ಶಾಸ್ತ್ರವನ್ನರಿತವನೂ ಸಹ ಸ್ವತಂತ್ರನಾಗಿ ಬ್ರಹ್ಮಜ್ಞಾನವನ್ನು ಹುಡುಕಬಾರದು' ಎಂದು ಹೇಳಿರುತ್ತಾರೆ.

7 ಶಿಷ್ಯನಾಗಿ ಪರಿಚರ್ಯೆ ಮಾಡುತ್ತಾನೆ. ಗೀತೆ ೪-೩೪ನ್ನು ನೋಡಿ.

8 ಉಪನಿಷತ್ತುಗಳ ಕಾಲದಲ್ಲಿ ಜ್ಞಾನವನ್ನುಪದೇಶಿಸುತ್ತಿದ್ದ ಋಷಿಗಳೆಲ್ಲ ಸಾಮಾನ್ಯವಾಗಿ ವಾನಪ್ರಸ್ಥರು. ವಾನಪ್ರಸ್ಥರಿಗೂ ಅಗ್ನಿಕಾರ್ಯಗಳು ವಿಹಿತವಾದುದರಿಂದ ಅವಕ್ಕೆ ಉಪಯುಕ್ತವಾಗುವ ಸಮಿತ್ತನ್ನು ತೆಗೆದುಕೊಂಡು ಹೋಗುವಂತೆ ಆದೇಶವನ್ನೀಯಲಾಗಿದೆ. ಹೀಗೆ ಸಮಿತ್ಪಾಣಿಯಾಗಿ ಬರುವವನು ಜ್ಞಾನಾರ್ಥಿಯೆಂಬುದು ಸಂಪ್ರದಾಯವಿದರಿಗೆ ಗೊತ್ತಾಗುತ್ತಿತ್ತು.

9 ಉದಾಹರಣೆಗೆ: ಆಚಾರ್ಯವಾನ್ ಪುರುಷೋ ವೇದ, 'ಗುರುವನ್ನು ಹೊಂದಿರುವ ಪುರುಷನೇ (ತತ್ತ್ವವನ್ನು) ಅರಿಯುತ್ತಾನೆ' (ಛಾಂ.ಉ. ೬. ೧೪. ೨).

**ಸ ಗುರುಃ ಪರಮಕೃಪಯಾ ಅಧ್ಯಾರೋಪ-ಅಪವಾದ-ನ್ಯಾಯೇನ ಏನಮುಪದಿಶತಿ,**

**'ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್**
**ಪ್ರಶಾಂತಚಿತ್ತಾಯ ಶಮಾನ್ವಿತಾಯ ।**
**ಯೇನಾಕ್ಷರಂ ಪುರುಷಂ ವೇದ ಸತ್ಯಂ**
**ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್ ।**
**(ಮುಂ. ಉ. ೧. ೨. ೧೩) ಇತ್ಯಾದಿಶ್ರುತೇಃ ॥ ೩೧ ॥**

೩೧. ಆ ಗುರುವು ಅತ್ಯಂತ ಕೃಪೆಯಿಂದ[1] ಅಧ್ಯಾರೋಪ–ಅಪವಾದ–ನ್ಯಾಯ'[2] ದ ಮೂಲಕ ಈ ಶಿಷ್ಯನಿಗೆ ಉಪದೇಶ ಮಾಡುತ್ತಾನೆ. '(ಹೀಗೆ) ಸರಿಯಾಗಿ ಬಂದಿರುವ ಪ್ರಶಾಂತ ಮನಸ್ಸುಳ್ಳ ಶಮವನ್ನು ಹೊಂದಿರುವ ಅವನಿಗೆ ಆ ಜ್ಞಾನಿಯು ಯಾವುದರಿಂದ ಪರಮಾರ್ಥಸ್ವರೂಪವುಳ್ಳ ಅಕ್ಷಯನಾದ ಪುರುಷನನ್ನು ತಿಳಿಯುವನೊ ಆ ಬ್ರಹ್ಮವಿದ್ಯೆಯನ್ನು ಯಥಾರ್ಥವಾಗಿ ಉಪದೇಶಿಸಬೇಕು' ಎಂಬಿವೇ ಮೊದಲಾದ ಶ್ರುತಿಯಿಂದ[3] (ಮುಂ. ಉ. ೧.೨.೧೩) (ಹೀಗೆ ತಿಳಿದುಬರುತ್ತದೆ).

1 ಗುರುವು ಕೃಪೆಮಾಡದಿದ್ದರೆ ವಿದ್ಯೆಯು ಉಪದೇಶವಾಗಲಿ ಆ ಉಪದೇಶವು ಸಾರ್ಥಕವಾಗುವುದಾಗಲಿ ಸಾಧ್ಯವಿಲ್ಲ. ಕೃಪಾಲುವಾದ ಗುರುವಿನ ಲಕ್ಷಣವನ್ನು ಸರ್ವಜ್ಞಾತ್ಮ ಮುನಿಗಳು ತಮ್ಮ 'ಸಂಕ್ಷೇಪ ಶಾರೀರಕ' ಗ್ರಂಥದಲ್ಲಿ (೪.೩) ಹೀಗೆ

ಹೇಳಿರುತ್ತಾರೆ: ಏತದೇವ ಹಿ ದಯಾಲುಲಕ್ಷಣಂ ಯದ್ವಿನೇಯಜನಬುದ್ಧಿವರ್ಧನಮ್, 'ಮಾರ್ಗದರ್ಶನಕ್ಕೆ ಯೋಗ್ಯರಾದ ಜನರ ಜ್ಞಾನವನ್ನು ಹೆಚ್ಚಿಸುವುದೇ ದಯಾಲುವಾದ (ಗುರುವಿನ) ಲಕ್ಷಣ.'

2 ಶಾಸ್ತ್ರಗಳಿಂದ ಅಥವಾ ಅನುಭವದಿಂದ ಪಡೆದ ಸಾರ್ವತ್ರಿಕ ತತ್ತ್ವವೊಂದನ್ನು ಸೂತ್ರ ರೂಪದಲ್ಲಿ ತಿಳಿಸುವ ಹೇಳಿಕೆಗೆ 'ನ್ಯಾಯ'ವೆಂದು ಹೆಸರು. ಅಧ್ಯಾರೋಪ ಮತ್ತು ಅಪವಾದ ಎಂಬ ಶಬ್ದಗಳನ್ನು ೩೨ ರಲ್ಲಿ ಮತ್ತು ೧೩೭ರಲ್ಲಿ ವಿವರಿಸಲಾಗುತ್ತದೆ. ಒಂದು ವಸ್ತುವಿನಲ್ಲಿ ಇಲ್ಲದ ಗುಣವನ್ನು ಅದರಲ್ಲಿರುವಂತೆ ಕಲ್ಪಿಸುವುದು ಅಧ್ಯಾರೋಪ. ಅನಂತರ ಅದನ್ನು ಅಲ್ಲಗಳೆದು ಅದರ ನಿಜಸ್ವರೂಪವನ್ನು ತಿಳಿಸುವುದು ಅಪವಾದ. ಬುದ್ಧಿಗೆ ನಿಲುಕದ ನಿರ್ಗುಣ ನಿರಾಕಾರ ಬ್ರಹ್ಮವನ್ನು ತಿಳಿಸುವುದಕ್ಕಾಗಿ ವೇದಾಂತಶಾಸ್ತ್ರದಲ್ಲಿ ಈ ಕ್ರಮವನ್ನು ಅನುಸರಿಸಲಾಗಿದೆ. ಈ ವಿಷಯದಲ್ಲಿ ಪ್ರಸಿದ್ಧವಾದ ಶ್ಲೋಕವೊಂದಿದೆ: ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ । ಶಿಷ್ಯಾಣಾಂ ಬೋಧಸಿದ್ಧ್ಯರ್ಥಂ ತತ್ತ್ವಜ್ಞೈಃ ಕಲ್ಪಿತಃ ಕ್ರಮಃ ॥ 'ಪ್ರಪಂಚವನ್ನು ಮೀರುವ ತತ್ತ್ವವಾದ (ಬ್ರಹ್ಮವು) ಅಧ್ಯಾರೋಪ-ಅಪವಾದಗಳ ಮೂಲಕ ವಿವರಿಸಲ್ಪಡುತ್ತದೆ. ಇದು ಶಿಷ್ಯರಿಗೆ ಬೋಧಿಸುವ ಸಲುವಾಗಿ ತತ್ತ್ವಜ್ಞಾನಿಗಳಿಂದ ಕಲ್ಪಿಸಲ್ಪಟ್ಟಿರುವ ಕ್ರಮ.'

3 ಉದಾಹರಣೆಗೆ: ಅಧೀಹಿ ಭಗವ ಇತಿ ಹೋಪಸಸಾದ ಸನತ್ಕುಮಾರಂ ನಾರದಃ ತಂ ಹೋವಾಚ ಯದ್ವೇತ್ಥ ತೇನ ಮೋಪಸೀದ ತತಸ್ತ ಊರ್ಧ್ವಂ ವಕ್ಷ್ಯಾಮಿ ಇತಿ ಸ ಹೋವಾಚ, 'ನಾರದನು ಸನತ್ಕುಮಾರನನ್ನು ಬಳಿಸಾರಿ, "ಭಗವಂತನೆ, ನನಗೆ ಉಪದೇಶಿಸಬೇಕು" ಎಂದನು. ಸನತ್ಕುಮಾರನೆಂದನು, "ನೀನು ಯಾವುದನ್ನು (ಮೊದಲೇ) ಅರಿತುಕೊಂಡಿರುವೆಯೊ ಅದನ್ನು ಹೇಳುವುದರ ಮೂಲಕ ನನ್ನ ಬಳಿಗೆ ಬಾ. ಅದಕ್ಕಿಂತ ಮುಂದಿರುವುದನ್ನು ಉಪದೇಶಿಸುತ್ತೇವೆ."' (ಛಾಂ. ಉ. ೭.೧.೧.)

## ಅಧ್ಯಾರೋಪ

**ಅಸರ್ಪಭೂತಾಯಾಂ ರಜ್ಜೌ ಸರ್ಪಾರೋಪವತ್ ವಸ್ತುನಿ ಅವಸ್ತ್ವಾರೋಪಃ ಅಧ್ಯಾರೋಪಃ ॥ ೩೨ ॥**

೩೨. ಹಾವಲ್ಲದ ಹಗ್ಗದಲ್ಲಿ ಹಾವನ್ನು[1] ಆರೋಪಿಸುವಂತೆ ವಸ್ತುವಿನಲ್ಲಿ[2] ಅವಸ್ತುವನ್ನು ಆರೋಪಿಸುವುದೇ ಅಧ್ಯಾರೋಪ.

ಅದ್ವೈತವೇದಾಂತದಲ್ಲಿ 'ಅಧ್ಯಾರೋಪ'ವು ಬಹು ಮುಖ್ಯವಾದ ಸ್ಥಾನವನ್ನು ಹೊಂದಿದೆ. ಇದನ್ನು 'ಅಧ್ಯಾಸ' ವೆಂದೂ ಕರೆಯುವುದುಂಟು. ಶ್ರೀಶಂಕರರು ಇದನ್ನು ತಮ್ಮ ಬ್ರಹ್ಮಸೂತ್ರ ಭಾಷ್ಯದ ಅವತರಣಿಕೆಯಲ್ಲಿ ವಿಸ್ತಾರವಾಗಿಯೇ ಚರ್ಚಿಸಿರುತ್ತಾರೆ. ಅಲ್ಲಿ ಅಧ್ಯಾಸವನ್ನು ಸ್ಮೃತಿರೂಪಃ ಪರತ್ರ ಪೂರ್ವದೃಷ್ಟಾವಭಾಸಃ, 'ಮತ್ತೊಂದುಕಡೆ ಹಿಂದೆ ನೋಡಿದುದರ ತೋರ್ಕೆಯು ಸ್ಮೃತಿರೂಪವುಳ್ಳದ್ದು' ಎಂದು ನಿರ್ವಚನ ಮಾಡಿರುತ್ತಾರೆ. ಉದಾಹರಣೆಗೆ ಬೆಳ್ಳಿಯೆಂಬ ಮತ್ತೊಂದು ವಸ್ತುವಿನಲ್ಲಿ (ಪರತ್ರ), ಹಿಂದೆ ಕಂಡಿದ್ದ (ಪೂರ್ವದೃಷ್ಟ), ಬಿಳುಪು ಪ್ರಕಾಶಮಾನತ್ವ ಎಂಬ ಗುಣಗಳ ನೆನಪು (ಸ್ಮೃತಿ) ಮನಸ್ಸಿನಲ್ಲಿದ್ದು ಅದು ಈಗ ಕಪ್ಪೆಯ ಚಿಪ್ಪಿನಲ್ಲಿ ತೋರಿಕೊಂಡರೆ (ಅವಭಾಸಃ), ಆಗ ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯ ಅಧ್ಯಾಸವಾಗುತ್ತದೆ.

'ವಿವೇಕಚೂಡಾಮಣಿ' ಯಲ್ಲಿ (೧೩೮) ಅತಸ್ಮಿನ್ ತದ್ಬುದ್ಧಿಃ, 'ಅದಲ್ಲದುದರಲ್ಲಿ ಅದು ಎಂಬ ಜ್ಞಾನ' ಎಂದು ಅಧ್ಯಾಸವನ್ನು ವಿವರಿಸಿರುತ್ತಾರೆ.

1 ಹಾವಿನ ರೂಪ ಗುಣ ಮೊದಲಾದುವನ್ನು.

2 ಮೂರು ಕಾಲಗಳಲ್ಲೂ ಒಂದೇ ರೀತಿ ಇರತಕ್ಕದ್ದು 'ವಸ್ತು', ಹಾಗಲ್ಲದೆ ಪರಿಣಾಮ ಹೊಂದತಕ್ಕದ್ದು 'ಅವಸ್ತು'. ಇವೆರಡನ್ನೂ ಮುಂದಿನ ವಿಭಾಗದಲ್ಲಿ ವೇದಾಂತದ ದೃಷ್ಟಿಯಿಂದ ವಿವರಿಸಲಾಗುವುದು.

**ವಸ್ತು ಸಚ್ಚಿದಾನಂದ-ಅದ್ವಯಂ ಬ್ರಹ್ಮ; ಅಜ್ಞಾನಾದಿಸಕಲ-ಜಡಸಮೂಹಃ ಅವಸ್ತು ‖ ೩೩ ‖**

೩೩. ಸಚ್ಚಿದಾನಂದವೂ ಅದ್ವಯವೂ ಆದ ಬ್ರಹ್ಮವೇ ವಸ್ತು; ಅಜ್ಞಾನವೇ ಮೊದಲಾದ ಎಲ್ಲ ಜಡಪದಾರ್ಥಗಳ ಸಮೂಹವೇ ಅವಸ್ತು.

ಬ್ರಹ್ಮವನ್ನು ಶ್ರುತಿಗಳಲ್ಲಿ ಸತ್ (ಸತ್ಯವಾದ, ಸದಾ ಏಕರೂಪವಾಗಿ ಇರತಕ್ಕ ವಸ್ತು), ಚಿತ್ (ಚೈತನ್ಯಾತ್ಮಕವಾದದ್ದು) ಮತ್ತು ಆನಂದ (ಆನಂದಸ್ವರೂಪವುಳ್ಳದ್ದು) ಎಂದು ವಿವರಿಸಿರುತ್ತದೆ. ಉದಾಹರಣೆಗೆ: ಸದೇವ ಸೋಮ್ಯೇದಮಗ್ರ ಆಸೀತ್, 'ಸೋಮ್ಯನೆ, ಈ ಪ್ರಪಂಚವು (ಸೃಷ್ಟಿಗೆ) ಮೊದಲು ಸದ್ವಸ್ತುವೇ ಆಗಿತ್ತು' (ಛಾಂ. ಉ. ೬.೨.೧); ಸತ್ಯಂ ಜ್ಞಾನಮನಂತಂ ಬ್ರಹ್ಮ, 'ಬ್ರಹ್ಮವು ಸತ್ಯವೂ ಜ್ಞಾನಸ್ವರೂಪವೂ ಅನಂತವೂ ಆದದ್ದು (ತೈ. ಉ. ೨.೧); ವಿಜ್ಞಾನಮಾನಂದಂ ಬ್ರಹ್ಮ,

'ಬ್ರಹ್ಮವು ಜ್ಞಾನಸ್ವರೂಪ, ಆನಂದ ಸ್ವರೂಪ' (ಬೃ. ಉ. ೩.೬.೨೮). ಬ್ರಹ್ಮವು ಆನಂದ-ಸ್ವರೂಪವಾದುದರಿಂದಲೇ, ಹಿರಣ್ಯಗರ್ಭಲೋಕದಲ್ಲೂ ವೈರಾಗ್ಯವನ್ನು ಹೊಂದಿದಂಥ ಋಷಿಗಳು ಇದನ್ನು ಬಯಸಿದರು !

ತನ್ನಂತಹ, ತನಗೆ ಎರಡನೆಯ ವಸ್ತುವೇ ಇಲ್ಲದ ಬ್ರಹ್ಮವು ಅದ್ವಯವೂ ಹೌದು : ಏಕಮೇವಾದ್ವಿತೀಯಂ ಬ್ರಹ್ಮ, 'ಬ್ರಹ್ಮವು ಒಂದೇ, ತನಗೆ ಎರಡನೆಯ ವಸ್ತು ಇಲ್ಲದ್ದು' (ಛಾ. ಉ. ೬.೨.೧). ಏಕವೆಂಬುದು ಒಂದು ಎಂಬ ಸಂಖ್ಯೆಯನ್ನು ಸೂಚಿಸುವುದಿಲ್ಲ ಎಂಬುದನ್ನು ತೋರಿಸಲು ಅದ್ವಿತೀಯವೆಂಬ ಶಬ್ದವನ್ನುಪಯೋಗಿಸಿದೆ.

'ಅಜ್ಞಾನ'ವನ್ನು ಮುಂದಿನ ಖಂಡದಲ್ಲಿ ವಿವರಿಸಿದೆ. ಅಜ್ಞಾನದಿಂದಲೇ, ಅವಿದ್ಯೆಯಿಂದಲೇ ಸೃಷ್ಟಿಯು ಪ್ರಾರಂಭವಾಗುತ್ತದೆ. ಅಜ್ಞಾನದಿಂದ ಉತ್ಪನ್ನವಾಗಿರುವ, ಆಕಾಶದಿಂದ ಪ್ರಾರಂಭಿಸಿ ಭೂಮಿಯವರೆಗಿನ ಸಮಸ್ತ ಜಡವಸ್ತುಗಳೂ 'ಅವಸ್ತು'ವೇ. ಯಾವಯಾವುದು ಇಂದ್ರಿಯಗೋಚರವೋ ಅವಯವವುಳ್ಳದ್ದೋ ಪರಿಣಾಮ ಹೊಂದುತ್ತಿರುವುದೋ ಅದೆಲ್ಲವೂ ನಶ್ವರವಾಗತಕ್ಕದ್ದು, ಆದುದರಿಂದಲೇ 'ಅವಸ್ತು'. ಬ್ರಹ್ಮವನ್ನು ಬಿಟ್ಟು ಉಳಿದೆಲ್ಲವೂ–ಇದರಲ್ಲಿ ಬ್ರಹ್ಮಲೋಕದವರೆಗಿನ ಎಲ್ಲ ಲೋಕಗಳೂ ಸೇರಿದೆ–ಇಂಥ ಸ್ವಭಾವವುಳ್ಳದ್ದಾದ್ದರಿಂದ 'ಅವಸ್ತು'ವೇ.

### ಅಜ್ಞಾನದ ಸ್ವರೂಪ

**ಅಜ್ಞಾನಂ ತು ಸದಸದ್ಭ್ಯಾಮ್ ಅನಿರ್ವಚನೀಯಂ ತ್ರಿಗುಣಾತ್ಮಕಂ ಜ್ಞಾನವಿರೋಧಿ ಭಾವರೂಪಂ ಯತ್ಕಿಂಚಿದಿತಿ ವದಂತಿ ; 'ಅಹಮಜ್ಞಃ' ಇತ್ಯಾದ್ಯನುಭವಾತ್', 'ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್' (ಶ್ವೇ. ಉ. ೧.೩) ಇತ್ಯಾದಿಶ್ರುತೇಶ್ಚ ॥ ೩೪ ॥**

೩೪. ಅಜ್ಞಾನವೆಂದರೆ (ಇದು) ಸತ್ (ಅಥವಾ) ಅಸತ್ ಎಂದು ನಿರ್ವಚನ ಮಾಡಲಾಗದಂಥ, ತ್ರಿಗುಣಾತ್ಮಕವೂ ಜ್ಞಾನಕ್ಕೆ ವಿರುದ್ಧವೂ ಭಾವರೂಪವೂ ಆದ ಯಾವುದೋ ಒಂದು (ಪದಾರ್ಥ) ಎಂದು (ಬಲ್ಲವರು) ಹೇಳುತ್ತಾರೆ. 'ನಾನು ಅಜ್ಞನು' ಎಂಬಿದೇ ಮೊದಲಾದ ಅನುಭವದಿಂದಲೂ, 'ತನ್ನ ಗುಣಗಳಿಂದ ಮುಚ್ಚಲ್ಪಟ್ಟಿರುವ ದೇವಾತ್ಮಶಕ್ತಿಯನ್ನು' (ಶ್ವೇ. ಉ. ೧.೩) ಎಂಬುದೇ ಮೊದಲಾದ ಶ್ರುತಿಯಿಂದಲೂ (ಹೀಗೆ ತಿಳಿದುಬರುತ್ತದೆ).

ಅದ್ವೈತವೇದಾಂತದ ಪ್ರಕ್ರಿಯೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕಾದರೆ ಅಜ್ಞಾನದ ಸ್ವರೂಪವನ್ನು ಮೊದಲು ತಿಳಿದುಕೊಳ್ಳಬೇಕು. ಅದನ್ನೀಗ ವಿವರಿಸಲಾಗುತ್ತಿದೆ.

ಸತ್ ಎಂದರೆ ದೇವತಾದಿಗಳ ಪ್ರಭಾವಕ್ಕೆ ಒಳಗಾಗದೆ ಸದಾ ಏಕರೂಪವಾಗಿರುವ ವಸ್ತು. ಅಸತ್ ಎಂದರೆ ಮೊಲದ ಕೊಂಬಿನಂತೆ ಅಥವಾ ಬಂಜೆಯ ಮಗನಂತೆ ಅತ್ಯಂತವಾಗಿ ಇಲ್ಲದಿರುವ ವಸ್ತು. ಅಜ್ಞಾನವು ಇವೆರಡಕ್ಕೂ ವ್ಯತಿರಿಕ್ತವಾಗಿರುವುದರಿಂದ ಅದನ್ನು ಸತ್ ಎಂದಾಗಲಿ ಅಸತ್ ಎಂದಾಗಲಿ ನಿರ್ವಚನ ಮಾಡಲು ಸಾಧ್ಯವಿಲ್ಲ. ನಪುಂಸಕಲಿಂಗವು ಪುಲ್ಲಿಂಗ ಸ್ತ್ರೀಲಿಂಗಗಳೆರಡಕ್ಕಿಂತಲೂ ಹೇಗೆ ವ್ಯತಿರಿಕ್ತವಾಗಿದೆಯೋ ಹಾಗೆ. ಜ್ಞಾನವುಂಟಾದಾಗ ಅಜ್ಞಾನವು ಹೋಗಿಬಿಡುತ್ತದೆ. ಆದುದರಿಂದ ಅದು 'ಸತ್' ಅಲ್ಲ. ಅನುಭವಕ್ಕೆ ಗೋಚರವಾಗುತ್ತಿರುವುದರಿಂದ 'ಅಸತ್' ಅಲ್ಲ.

ಉಪನಿಷತ್ತುಗಳು ಗೀತೆ ಮೊದಲಾದ ಗ್ರಂಥಗಳಲ್ಲಿ ಯಾವುದನ್ನು ಪ್ರಕೃತಿ ಅಥವಾ ಮಾಯೆ ಎಂದು ಕರೆದಿದೆಯೋ ಅದನ್ನೇ ಇಲ್ಲಿ ಅಜ್ಞಾನವೆಂದು ನಿರ್ದೇಶಿಸಿದೆ. ಇದಕ್ಕೆ ಸತ್ತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳುಂಟು. ಈ ಮೂರು ಗುಣಗಳ ಸಮ್ಮಿಳಿತರೂಪವೇ ಅಜ್ಞಾನ. ಆತ್ಮಜ್ಞಾನವುದಯಿಸಿದಾದ ಇದು ನಾಶವಾಗುವುದರಿಂದ ಇದರಿಂದ ಜ್ಞಾನವಿರೋಧಿ ಎಂದು ಕರೆದಿದೆ.

ನೈಯಾಯಿಕರು ಅಜ್ಞಾನವನ್ನು ಜ್ಞಾನದ ಅಭಾವವೆಂದು ಹೇಳಿರುತ್ತಾರೆ. ಈ ನಿರ್ವಚನವನ್ನು ಅದ್ವೈತವೇದಾಂತಿಗಳು ಒಪ್ಪುವುದಿಲ್ಲವಾದುದರಿಂದ ಅಜ್ಞಾನವು 'ಭಾವರೂಪ' ಎಂದು ಹೇಳಿದೆ ಇಲ್ಲಿ. ಭಾವರೂಪವೆಂದರೆ ಸತ್ ಎಂದರ್ಥವಲ್ಲ; ಏಕೆಂದರೆ ಅಗ ಅದು ಸದಾ ಇರುವ ವಸ್ತುವಾಗಿಬಿಡುತ್ತದೆ ಮತ್ತು ಮೋಕ್ಷದ ಆಶೆಯೇ ಹೋಗಿಬಿಡುತ್ತದೆ! ಅಭಾವವಲ್ಲ ಎಂದು ಸೂಚಿಸುವುದಕ್ಕೆ ಮಾತ್ರ ಭಾವರೂಪ ಶಬ್ದದ ಪ್ರಯೋಗ. 'ನಾನು ಅಜ್ಞಾನಿ, ನನಗೇನೂ ತಿಳಿದಿಲ್ಲ' ಎಂದು ನಾವು ಹೇಳುವಾಗ ನಮಗೆ ಅಜ್ಞಾನದ ಸಾಮಾನ್ಯ ಅನುಭವವುಂಟಾಗುತ್ತಲೇ ಇರುತ್ತದೆ. ಆದರೆ ಈ ಅಜ್ಞಾನವು ಜಡ, ಜ್ಞಾನದಿಂದ ಅದು ಪ್ರಕಾಶಿತವಾಗಬೇಕು. ಸಾಕ್ಷಿಸ್ವರೂಪನಾದ ಆತ್ಮನೇ ಚೈತನ್ಯವೇ ಈ ಜ್ಞಾನ. ಹೀಗೆ ಸಾಕ್ಷಿಚೈತನ್ಯಕ್ಕೆ ವಿಷಯವಾಗಿರುವುದರಿಂದ, ಅನುಭವವೇದ್ಯವಾಗಿರುವುದರಿಂದ, ಭಾವರೂಪ.

ಶ್ರೀಭಗವತ್ಪಾದರು ತಮ್ಮ ಗ್ರಂಥಗಳಲ್ಲಿ ಇದಕ್ಕೆ ಮಾಯಾ ಅವಿದ್ಯಾ ಎಂಬ ಶಬ್ದಗಳನ್ನೇ ಪ್ರಧಾನವಾಗಿ ಬಳಸಿರುತ್ತಾರೆ.

ಬೃಹದಾರಣ್ಯಕವಾರ್ತಿಕದಲ್ಲಿ (೧.೪೧) ಅವಿದ್ಯೆಯನ್ನು ಸಪ್ರಮಾಣವಾಗಿ ಸಾಧಿಸಲಾಗುವುದಿಲ್ಲವೆಂಬುದನ್ನು ಹೀಗೆ ಸ್ವಾರಸ್ಯವಾಗಿ ವಿವರಿಸಿದೆ: ಅವಿದ್ಯಾಯಾ

ಅವಿದ್ಯಾತ್ವಮಿದಮೇವ ತು ಲಕ್ಷಣಮ್ । ಯತ್ಪ್ರಮಾಣಾಸಹಿಷ್ಣುತ್ವಮನ್ಯಥಾ ವಸ್ತು ಸಾ ಭವೇತ್ ॥ 'ಯಾವ ಪ್ರಮಾಣವನ್ನೂ ಅದು ಸಹಿಸುವುದಿಲ್ಲ ಎಂಬಿದೇ ಅವಿದ್ಯೆಯ ಅವಿದ್ಯಾತ್ವಕ್ಕೆ ಲಕ್ಷಣ ; ಇಲ್ಲದಿದ್ದರೆ ಅದು (ಇರುವ) ವಸ್ತುವಾಗಿಬಿಡುತ್ತದೆ.'

ಇದನ್ನೇ ನೈಷ್ಕರ್ಮ್ಯಸಿದ್ಧಿಯಲ್ಲಿ (೩.೬೬) ಹೀಗೆ ಹೇಳಿದೆ : ಸೇಯಂ ಭ್ರಾಂತಿ-ರ್ನಿರಾಲಂಬಾ ಸರ್ವನ್ಯಾಯವಿರೋಧಿನೀ । ಸಹತೇ ನ ವಿಚಾರಂ ಸಾ ತಮೋ ಯದ್ವ-ದ್ದಿವಾಕರಮ್ ॥, 'ಆ ಈ ಭ್ರಾಂತಿಗೆ (ಅಜ್ಞಾನಕ್ಕೆ) ಆಧಾರವಾವುದೂ ಇಲ್ಲ. ಅದು ಎಲ್ಲ (ರೀತಿಯ) ತರ್ಕಕ್ಕೂ ವಿರುದ್ಧವಾದದ್ದು ; ಕತ್ತಲೆಯು ಹೇಗೆ ಸೂರ್ಯನನ್ನು ಸಹಿಸಲಾರದೋ ಹಾಗೆ ಅದು ವಿಚಾರವನ್ನು ಸಹಿಸಲಾರದು'

ಅಜ್ಞಾನವು ಭಾವರೂಪವೆಂಬುದನ್ನು ಸಮರ್ಥಿಸಲು ಈ ಗೀತಾವಾಕ್ಯಗಳನ್ನು (೫.೧೫ ; ೭.೨೫) ಉದಾಹರಿಸಬಹುದು : 'ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ,' ಜ್ಞಾನವು ಅಜ್ಞಾನದಿಂದ ಮುಚ್ಚಲ್ಪಟ್ಟಿದೆ ; ಅದರಿಂದ ಪ್ರಾಣಿಗಳು ಮೋಹಗೊಳ್ಳುತ್ತವೆ' ; ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾ-ವೃತಃ, 'ಯೋಗಮಾಯೆಯಿಂದ ಆವೃತನಾದ ನಾನು ಎಲ್ಲರಿಗೂ ಪ್ರತ್ಯಕ್ಷನಲ್ಲ'

**ಇದಮಜ್ಞಾನಂ ಸಮಷ್ಟಿ-ವ್ಯಷ್ಟಿ-ಅಭಿಪ್ರಾಯೇಣ ಏಕಮ್ ಅನೇಕಮ್ ಇತಿ ಚ ವ್ಯವಹ್ರಿಯತೇ ॥ ೩೫ ॥**

೩೫. ಈ ಅಜ್ಞಾನವು ಸಮಷ್ಟಿಯ ದೃಷ್ಟಿಯಿಂದ ಒಂದು ಎಂತಲೂ ವ್ಯಷ್ಟಿಯ ದೃಷ್ಟಿಯಿಂದ ಅನೇಕ ಎಂತಲೂ ವ್ಯವಹರಿಸಲ್ಪಡುತ್ತದೆ.

ಶ್ರುತಿಸ್ಮೃತಿಗಳಲ್ಲಿ ಈ ಅಜ್ಞಾನವನ್ನು ಸೂಚಿಸುವ ಪದಗಳನ್ನು ಕೆಲವು ಸಲ ಬಹುವಚನದಲ್ಲಿಯೂ ಪ್ರಯೋಗಿಸಿದೆ. ಉದಾಹರಣೆಗೆ : ಅಜಾಮೇಕಾಂ ಲೋಹಿತ-ಶುಕ್ಲಕೃಷ್ಣಾಮ್, 'ಕೆಂಪು ಬಿಳಿ ಕಪ್ಪು ಬಣ್ಣಗಳನ್ನುಳ್ಳ ಆಡೊಂದನ್ನು' (ಶ್ವೇ. ಉ. ೬·೫) ; ಇಂದ್ರೋ ಮಾಯಾಭಿಃ ಪುರುರೂಪ ಈಯತೇ, 'ಇಂದ್ರನು ಮಾಯೆಗಳಿಂದ ಬಹುರೂಪನಾಗಿ ತೋರಿಕೊಳ್ಳುತ್ತಾನೆ' (ಋ. ಸಂ ೬-೪೭-೧೮). ಆದುದರಿಂದ ಈ ಅಜ್ಞಾನವು ಏಕವೇ ಅಥವಾ ಅನೇಕವೇ ಎಂಬ ಸಂಶಯ ಸಹಜವಾಗಿಯೇ ಬರುತ್ತದೆ. ಅಜ್ಞಾನವು ಒಂದೇ ಆದರೂ ವ್ಯವಹಾರದಲ್ಲಿ ಸಾಮಾನ್ಯ ಮತ್ತು ವಿಶೇಷ ಎಂಬೀ ಎರಡು ದೃಷ್ಟಿಕೋಣಗಳಿಂದ ನೋಡಿದಾಗ ಅದು ಏಕವಾಗಿ ಅಥವಾ ಅನೇಕವಾಗಿ ಕಂಡುಬರುತ್ತದೆ.

ಸಮಷ್ಟಿಯೆಂದರೆ ಅನೇಕ ಅವಯವಗಳಿಂದ ಕೂಡಿದ ಒಂದು ಸಮೂಹ. ಅವಯವಗಳನ್ನುಳಿದು ಅದಕ್ಕೆ ಬೇರೆ ಅಸ್ತಿತ್ವವಿಲ್ಲ. ಬಿಡಿ ಅವಯವವೇ ವ್ಯಷ್ಟಿ.

### ಸಮಷ್ಟಿ ಅಜ್ಞಾನ

**ತಥಾಹಿ—ಯಥಾ ವೃಕ್ಷಾಣಾಂ ಸಮಷ್ಟಿ-ಅಭಿಪ್ರಾಯೇಣ ವನಮ್ ಇತಿ ಏಕತ್ವವ್ಯಪದೇಶಃ, ಯಥಾ ವಾ ಜಲಾನಾಂ ಸಮಷ್ಟಿ-ಅಭಿಪ್ರಾಯೇಣ ಜಲಾಶಯ ಇತಿ, ತಥಾ ನಾನಾತ್ವೇನ ಪ್ರತಿಭಾಸಮಾನಾನಾಂ ಜೀವಗತ-ಅಜ್ಞಾನಾನಾಂ ಸಮಷ್ಟಿ-ಅಭಿಪ್ರಾಯೇಣ ತದೇಕತ್ವವ್ಯಪದೇಶಃ, 'ಅಜಾಮೇಕಾಮ್' (ಶ್ವೇ. ಉ. ೪.೫) ಇತ್ಯಾದಿಶ್ರುತೇಃ ॥ ೩೯ ॥**

೩೯. ಉದಾಹರಣೆಗೆ: ಮರಗಳನ್ನು ಸಮೂಹದ ದೃಷ್ಟಿಯಿಂದ ಕಾಡು ಎಂದು ಒಂದಾಗಿ ಸೂಚಿಸುವಂತೆ, ಅಥವಾ ನೀರಿನ ಕಣಗಳನ್ನು ಸಮೂಹದ ದೃಷ್ಟಿಯಿಂದ ಜಲಾಶಯ ಎಂದು (ಒಂದಾಗಿ ಕರೆಯುವಂತೆ), ಜೀವರಲ್ಲಿರುವ (ಮತ್ತು) ಅನೇಕವಾಗಿ ತೋರುತ್ತಿರುವ ಅಜ್ಞಾನಗಳನ್ನು ಸಮೂಹದ ದೃಷ್ಟಿಯಿಂದ ಅದು ಒಂದು ಎಂದು ಕರೆದಿದೆ. 'ಹೆಣ್ಣಾಡೊಂದನ್ನು' (ಶ್ವೇ.ಉ.೪.೫) ಇತ್ಯಾದಿ ಶ್ರುತಿಯಿಂದ (ಹೀಗೆ ತಿಳಿದುಬರುತ್ತದೆ).

ಅಜ್ಞಾನಕ್ಕೆ ಆಶ್ರಯವಾವುದು? ಜೀವವೇ ಬ್ರಹ್ಮವೇ? ಈ ಅಜ್ಞಾನವು ಒಂದೇ, ಅನೇಕವೇ? ಈ ಪ್ರಶ್ನೆಗಳಿಗೆ ಭಗವತ್ಪಾದರ ಬರಹಗಳಲ್ಲಿ ಸ್ಪಷ್ಟವಾದ ಉತ್ತರವನ್ನು ಕಾಣುವುದಿಲ್ಲ. ಅವರ ನಂತರ ಬಂದ ಅದ್ವೈತಿಗಳು ಇದರ ಬಗ್ಗೆ ಸಾಕಷ್ಟು ಚರ್ಚೆ ನಡೆಸಿದ್ದರೂ ಅವರಲ್ಲಿ ಒಮ್ಮತವಿಲ್ಲ. ಅಜ್ಞಾನಕ್ಕೆ ಬ್ರಹ್ಮವು ಆಶ್ರಯವೆಂದು ಸರ್ವಜ್ಞಾತ್ಮರು ಭಾವಿಸಿದರೆ ಅದಕ್ಕೆ ಜೀವವು ಆಶ್ರಯ ಮತ್ತು ಬ್ರಹ್ಮವು ವಿಷಯ ಎಂದು ವಾಚಸ್ಪತಿಗಳು ವಾದಿಸುತ್ತಾನೆ.

ಅಜ್ಞಾನವು ನಿಜವಾಗಿ ಒಂದೇ ಆದರೂ ವ್ಯವಹಾರ ದೃಷ್ಟಿಯಿಂದ ಅನೇಕ ಜೀವರು ಕಂಡುಬರುತ್ತಿರುವ ಕಾರಣ ಅವರಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಅಜ್ಞಾನವನ್ನು ಒಪ್ಪಬೇಕು. ಹೀಗೆ ಒಪ್ಪಿದರೆ ಮಾತ್ರ ಬದ್ಧಜೀವರು ಮುಕ್ತಜೀವರು

ಎಂಬ ವಿಭಾಗವು ಸರಿಹೊಂದುತ್ತದೆ. ಹಾಗೆಯೇ ಕ್ರಮಮುಕ್ತಿ ಸದ್ಯೋಮುಕ್ತಿ ಎಂಬ ವಿಭಾಗವೂ ಕೂಡ. ಇಲ್ಲದಿದ್ದರೆ ಒಬ್ಬರು ಮುಕ್ತಿ ಹೊಂದಿದರೆ ಎಲ್ಲರೂ ಸಮ ಕಾಲದಲ್ಲಿಯೇ ಮುಕ್ತಿ ಹೊಂದಬೇಕಾಗುತ್ತದೆ. ಅಥವಾ ಒಬ್ಬರು ಜ್ಞಾನವನ್ನು ಪಡೆದರೂ ಇತರರಲ್ಲಿ ಅಜ್ಞಾನವಿನ್ನೂ ಇರುವುದರಿಂದ ಯಾರಿಗೂ ಮುಕ್ತಿಯಿಲ್ಲದ ಪ್ರಸಂಗವೊದಗುತ್ತದೆ! ಆದುದರಿಂದಲೇ 'ಜೀವರಲ್ಲಿರುವ' ಮತ್ತು 'ಅನೇಕವಾಗಿ ತೋರುತ್ತಿರುವ' ಎಂದು ಹೇಳಿದೆ.

ಅಜಾ-ಶಬ್ದವು ಜನ್ಮರಹಿತ ಅಥವಾ ಅನಾದಿ ಎಂಬರ್ಥವನ್ನು ಹೊಂದಿರುವುದರಿಂದ ಅಜ್ಞಾನವು ಅನಾದಿ ಎಂಬುದನ್ನು ಸೂಚಿಸಿದಂತಾಯಿತು.

**ಇಯಂ ಸಮಷ್ಟಿಃ ಉತ್ಕೃಷ್ಟ-ಉಪಾಧಿತಯಾ ವಿಶುದ್ಧಸತ್ತ್ವ-ಪ್ರಧಾನಾ ॥ ೩೭ ॥**

೩೭. ಈ ಸಮಷ್ಟಿ (ಅಜ್ಞಾನವು) ಉತ್ಕೃಷ್ಟವಾದುದಕ್ಕೆ[1] ಉಪಾಧಿಯಾಗಿರುವುದರಿಂದ[2] ಅತ್ಯಂತ ಶುದ್ಧವಾದ[3] ಸತ್ತ್ವ(ಗುಣ)ವನ್ನು ಮುಖ್ಯವಾಗಿ (ಹೊಂದಿರುತ್ತದೆ).

1 ಎಂದರೆ ಪರಬ್ರಹ್ಮಕ್ಕೆ.

2 ಒಂದು ವಸ್ತುವಿನ ಭಾಗವಲ್ಲದ ಮತ್ತು ಆ ವಸ್ತುವಿನ ನಿಜಸ್ವರೂಪವನ್ನು ಮರೆಮಾಚಿ ಅದರಲ್ಲಿ ತನ್ನ ಧರ್ಮಗಳನ್ನು ಆರೋಪಿಸುವ ಎರಡನೆಯ ವಸ್ತುವು ಆ ಮೊದಲನೆಯ ವಸ್ತುವಿಗೆ ಉಪಾಧಿಯೆಂದು ಹೇಳುತ್ತಾರೆ. ಉದಾಹರಣೆಗೆ: ಸ್ಫಟಿಕದ ಹರಳಿನ ಬಳಿಯಿರುವ ಕೆಂಪು ದಾಸವಾಳವು ಸ್ಫಟಿಕವೂ ಕೆಂಪಾಗಿ ತೋರುವಂತೆ ಮಾಡುತ್ತದೆ. ವಿಭುವಾದ ಆಕಾಶವನ್ನು ಮಡಕೆಯು ತನ್ನ ಪರಿಧಿಗೊಳಪಡಿಸುವಂತೆ ತೋರುತ್ತದೆ. ದಾಸವಾಳವು ಸ್ಫಟಿಕಕ್ಕೆ ಉಪಾಧಿ. ಮಡಕೆಯು ಆಕಾಶಕ್ಕೆ ಉಪಾಧಿ. ಹಾಗೆಯೇ ಅಜ್ಞಾನವು ಬ್ರಹ್ಮಕ್ಕೆ ಉಪಾಧಿ.

3 ರಜಸ್ಸು ತಮಸ್ಸುಗಳಿಲ್ಲ ಎಂದರ್ಥವಲ್ಲ, ಅವು ಅತ್ಯಲ್ಪವಾಗಿವೆ ಎಂದರ್ಥ.

4 ಆದುದರಿಂದ ಈ ಸಮಷ್ಟಿ ಅಜ್ಞಾನವು ಪರಬ್ರಹ್ಮವನ್ನು ಮೋಹಗೊಳಿಸಲಾರದು. ಅಂತೆಯೇ ಬಂಧನಕ್ಕೂ ಒಳಪಡಿಸಲಾರದು. ಮುಂದೆ ೫೧ ರಲ್ಲಿ ಹೇಳುವ ಪರಿಭಾಷೆಯನ್ನು ಬಳಸಿ ಹೇಳುವುದಾದರೆ, ಇದಕ್ಕೆ ಆವರಣಶಕ್ತಿಯಿಲ್ಲ, ವಿಕ್ಷೇಪ ಮಾತ್ರ ಉಂಟು.

**ಏತದುಪಹಿತಂ ಚೈತನ್ಯಂ ಸರ್ವಜ್ಞತ್ವ–ಸರ್ವೇಶ್ವರತ್ವ–ಸರ್ವನಿಯಂತೃತ್ವಾದಿ–ಗುಣಕಮ್, 'ಅವ್ಯಕ್ತಮ್' 'ಅಂತರ್ಯಾಮೀ' 'ಜಗತ್ಕಾರಣಮ್' 'ಈಶ್ವರಃ' ಇತಿ ಚ ವ್ಯಪದಿಶ್ಯತೇ ಸಕಲ–ಅಜ್ಞಾನ–ಅವಭಾಸಕತ್ವಾತ್ । 'ಯಃ ಸರ್ವಜ್ಞಃ ಸರ್ವವಿತ್' (ಮುಂ.ಉ.೧.೧.೯) ಇತಿ ಶ್ರುತೇಃ ॥೩೮॥**

೩೮. ಇದನ್ನು[1] ಉಪಾಧಿಯಾಗಿ ಹೊಂದಿರುವ ಚೈತನ್ಯವು[2] ಸರ್ವಜ್ಞತ್ವ,[3] ಸರ್ವೇಶ್ವರತ್ವ[4], ಸರ್ವನಿಯಂತೃತ್ವ[5] ಮೊದಲಾದ ಗುಣಗಳಿಂದ[6] ಕೂಡಿರುತ್ತದೆ; ಮತ್ತು 'ಅವ್ಯಕ್ತ'[7], 'ಅಂತರ್ಯಾಮಿ'[8], 'ಜಗತ್ಕಾರಣ'[9], 'ಈಶ್ವರ'[10] ಎಂದು ಹೇಳಲ್ಪಡುತ್ತದೆ; ಏಕೆಂದರೆ ಇದು ಎಲ್ಲ ಅಜ್ಞಾನಗಳನ್ನೂ ಬೆಳಗುತ್ತದೆ.[11] 'ಯಾವನು ಸರ್ವಜ್ಞನೊ ಸರ್ವವಿದನೊ'[12] ಎಂಬ (ಮುಂ.ಉ.೧ ೧.೯) ಶ್ರುತಿಯಿಂದ (ಹೀಗೆ ತಿಳಿದುಬರುತ್ತದೆ).

1 ಸಮಷ್ಟಿ ಅಜ್ಞಾನವನ್ನು.

2 ಬ್ರಹ್ಮವಸ್ತುವು.

3 ಚರಾಚರಾತ್ಮಕಪ್ರಪಂಚಕ್ಕೆ ಸಾಕ್ಷಿಯಾಗಿರುವುದರಿಂದ ಸರ್ವಜ್ಞತ್ವ.

4 ಕರ್ಮಾನುಸಾರವಾಗಿ ಫಲಗಳನ್ನು ಕೊಡುವುದರಿಂದ ಸರ್ವೇಶ್ವರತ್ವ.

5 ಸಕಲ ಜೀವಿಗಳನ್ನೂ ತಮ್ಮ ತಮ್ಮ ಕಾರ್ಯದಲ್ಲಿ ನಿಯಮಿಸುವುದರಿಂದ, ಪ್ರೇರಿಸುವುದರಿಂದ ಸರ್ವನಿಯಂತೃತ್ವ.

6 ಶುದ್ಧಚೈತನ್ಯವಾದ ಬ್ರಹ್ಮವಸ್ತುವಿಗೆ ಈ ಗುಣಗಳು ಉಪಾಧಿಯ ಸೆಯಿಂದ ಬಂದಿವೆಯೆ ಹೊರತು ಸ್ವತಃ ಅಲ್ಲ ಎಂಬುದನ್ನು ಮರೆಯಬಾರದು.

7 ಜಗತ್ತಿನ ನಾಮ-ರೂಪಗಳು ವ್ಯಕ್ತವಾಗುವುದಕ್ಕೆ ಮುಂಚೆ ಇದ್ದ ಸೂಕ್ಷ್ಮಾವಸ್ಥೆ.

8 ಜೀವಿಗಳ ಹೃದಯದಲ್ಲಿದ್ದುಕೊಂಡು ಬುದ್ಧಿಯನ್ನು ಪ್ರಚೋದಿಸುವವನು.

9 ಈ ಜಗತ್ತಿಗೆ–ಮಡಕೆಗೆ ಮಣ್ಣಿನಂತೆ–ಉಪಾದಾನಕಾರಣವೂ, (ಅದೇ ಮಡಕೆಗೆ) ಕುಂಬಾರನಂತೆ ನಿಮಿತ್ತಕಾರಣವೂ ಆಗಿರುವುದರಿಂದ 'ಜಗತ್ಕಾರಣ'; ಅಥವಾ ಜಗತ್ತೆಂಬ ತೋರ್ಕೆಗೆ–ಹಾವಿಗೆ ಹಗ್ಗದಂತೆ–ಅಧಿಷ್ಠಾನವಾಗಿರುವುದರಿಂದ 'ಜಗತ್ಕಾರಣ'.

10 ಎಲ್ಲವನ್ನೂ ಆಳುವುದರಿಂದ ಈಶ್ವರ.

11 ವ್ಯಷ್ಟಿಯು ಅಜ್ಞಾನವು ಜೀವಚೈತನ್ಯದಿಂದ ಬೆಳಗಲ್ಪಡುವಂತೆ ಸಮಷ್ಟಿ ಅಜ್ಞಾನವು ಈಶ್ವರಚೈತನ್ಯದಿಂದ ಬೆಳಗಲ್ಪಡುತ್ತದೆ.

12 ಎಲ್ಲವನ್ನೂ ಸಾಮಾನ್ಯವಾಗಿ ಅರಿತಿರುವುದರಿಂದ 'ಸರ್ವಜ್ಞ'; ವಿಶೇ ವಾಗಿಯೂ ಅರಿತಿರುವುದರಿಂದ 'ಸರ್ವವಿತ್'.

ಇನ್ನೂ ಕೆಲವು ಶ್ರುತಿವಾಕ್ಯಗಳನ್ನು ಇಲ್ಲಿ ಉದಾಹರಿಸಬಹುದು: ಏಷ ಸೇತ ರ್ವಿಧರಣಃ, 'ಇವನು (ಲೋಕಗಳು ಪರಸ್ಪರ ಮಿಶ್ರವಾಗದಿರುವಂತೆ) ಹಿಡಿದಿಟ್ಟಿರು ಸೇತು' (ಬೃ. ಉ. ೪.೪.೨೨); ಏಷ ತ ಆತ್ಮಾ ಅಂತರ್ಯಾಮ್ಯಮೃತಃ, 'ಇವನೆ ಅಂತರ್ಯಾಮಿಯೂ ಅಮೃತನೂ ಆದ ನಿನ್ನ ಆತ್ಮನು' (ಬೃ.ಉ. ೩. ೭. ೩) ಮಹತಃ ಪರಮ್ ಅವ್ಯಕ್ತಮ್, 'ಮಹತ್ತಿಗಿಂತಲೂ ಶ್ರೇಷ್ಠವಾದ ಅವ್ಯಕ್ತವು (ಕ.ಉ. ೩. ೧೧); ಯಃ ಪರಃ ಸ ಮಹೇಶ್ವರಃ, 'ಯಾವನು ಸರ್ವೋತ್ಕೃಷ್ಟನೊ ಅವನೇ ಪರಮೇಶ್ವರನು' (ಮ. ನಾ. ಉ. ೧೨.೧೭).

**ಈಶ್ವರಸ್ಯ ಇಯಂ ಸಮಷ್ಟಿಃ ಅಖಿಲಕಾರಣತ್ವಾತ ಕಾರಣಶರೀರಮ್, ಆನಂದಪ್ರಚುರತ್ವಾತ್ ಕೋಶವತ್ ಆಚ್ಛಾ ದಕತ್ವಾಚ್ಚ ಆನಂದಮಯಕೋಶಃ, ಸರ್ವೋಪರಮತ್ವಾತ ಸುಷುಪ್ತಿಃ, ಅತ ಏವ ಸ್ಥೂಲಸೂಕ್ಷ್ಮಪ್ರಪಂಚಲಯಸ್ಥಾನಮಿ ಚ ಉಚ್ಯತೇ ||೩೯||**

೩೯. ಈಶ್ವರ(ನಿಗೆ ಉಪಾಧಿಯಾಗಿರುವ) ಈ ಸಮಷ್ಟಿ (ಅಜ್ಞಾನವು ಎಲ್ಲಕ್ಕೂ ಕಾರಣವಾಗಿರುವುದರಿಂದ 'ಕಾರಣಶರೀರ'[1] ಎಂದೂ, ಆನಂ ಬಾಹುಳ್ಯದಿಂದ ಮತ್ತು ಚೀಲದಂತೆ (ಅಥವಾ ಒರೆಯಂತೆ) (ಬ್ರಹ್ಮಚೈತನ ವನ್ನು) ಮುಚ್ಚುವುದರಿಂದ 'ಆನಂದಮಯಕೋಶ'[2] ಎಂದೂ, ಎಲ್ಲವೂ (ಇ ರಲ್ಲಿ) ವಿಶ್ರಾಂತಿಯನ್ನು ಹೊಂದುವುದರಿಂದ 'ಸುಷುಪ್ತಿ'[3] ಎಂದೂ, ಅದು ರಿಂದಲೇ ಸ್ಥೂಲ-ಸೂಕ್ಷ್ಮ-ಪ್ರಪಂಚಗಳ ಲಯಸ್ಥಾನ[4] ಎಂದೂ ಹೇಳಲ್ಪಡುತ್ತ

ಉಪಾಧಿಸಂಬಂಧವನ್ನು ಹೊಂದಿರುವ ಚೈತನ್ಯಕ್ಕೆ, ಎಂದರೆ ಈಶ್ವರನಿಗೆ, ಶಾ ಪ್ರಸಿದ್ಧವಾದ ಹೆಸರುಗಳನ್ನು ಹೇಳಿದ್ದಾಯಿತು. ಈಗ ಆ ಸಮಷ್ಟಿ ಉಪಾಧಿಗೇ ಇರು ಹೆಸರುಗಳನ್ನು ವಿವರಿಸುತ್ತಿದ್ದಾರೆ.

1 ಅದ್ವೈತದಲ್ಲಿ ಆತ್ಮಚೈತನ್ಯಕ್ಕೆ ಉಪಾಧಿಸಂಬಂಧವಾದ ಮೂರು ಶರೀರ ಗಳನ್ನು ಒಪ್ಪಿಕೊಂಡಿದೆ; ಸ್ಥೂಲಶರೀರ, ಸೂಕ್ಷ್ಮಶರೀರ, ಕಾರಣಶರೀರ.

ಪೂರ್ವಕರ್ಮಕ್ಕೆ ಅನುಸಾರವಾಗಿ ಸಂಪಾದಿಸಲ್ಪಟ್ಟ, ಪಂಚಮಹಾಭೂತಗಳಿಂದ ಉಂಟಾದ, ತಾಯ್ತಂದೆಯರಿಂದ ಕೊಡಲ್ಪಟ್ಟ, ಸುಖದುಃಖಗಳ ಅನುಭವಕ್ಕೆ ಆಶ್ರಯ ವಾದ ಈ ಶರೀರವೇ 'ಸ್ಥೂಲಶರೀರ'. ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಪ್ರಾಣಗಳು, ಮನಸ್ಸು ಮತ್ತು ಬುದ್ಧಿ-ಈ ಹದಿನೇಳರ ಗುಂಪೇ'ಸೂಕ್ಷ್ಮಶರೀರ' ಅಥವಾ 'ಲಿಂಗಶರೀರ'. ಇದು ಸೂಕ್ಷ್ಮಭೂತಗಳಿಂದಾದುದು ಮತ್ತು ಸುಖದುಃಖಾದಿ ಅನುಭವಕ್ಕೆ ಸಾಧನ. ಅಜ್ಞಾನವೇ ಅವಿದ್ಯೆಯೇ 'ಕಾರಣ ಶರೀರ', ಎನ್ನಿಸಿದೆ.

2 ದೇಹ ಮನಸ್ಸು ಮೊದಲಾದ ಅನಾತ್ಮವಸ್ತುಗಳು ಆತ್ಮನನ್ನು ಕೋಶದಂತೆ, ರೆಯಂತೆ ಅಥವಾ ಚೀಲದಂತೆ ಮುಚ್ಚಿ ಮರೆಮಾಡುವುದರಿಂದ—ಅರ್ಥಾತ್ ಆತ್ಮ ಜ್ಞಾನಕ್ಕೆ ಅಡ್ಡಿಯಾದುದರಿಂದ-ಕೋಶಗಳೆನಿಸಿವೆ. ಇಂತಹ ಕೋಶಗಳು ಐದು; ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದ ಮಯ. ಎಲುಬು ರಕ್ತ ಮಾಂಸ ಮುಂತಾದುವುಗಳಿಂದ ಮಾಡಲ್ಪಟ್ಟು ಅನ್ನದಿಂದ ಪೋಷಿಸಲ್ಪಡುವ ಶರೀರವೇ ಅನ್ನಮಯಕೋಶ. ಪ್ರಾಣಾಪಾನಾದಿ ಪಂಚವಾಯುಗಳೇ ಪ್ರಾಣಮಯಕೋಶ. ಸಂಕಲ್ಪ-ವಿಕಲ್ಪ-ರೂಪವಾದ ಮನಸ್ಸೇ ಮನೋಮಯ ಕೋಶ. ನಿಶ್ಚಯಾತ್ಮಕವಾದ ಬುದ್ಧಿಯೇ ವಿಜ್ಞಾನಮಯಕೋಶ. ಜಾಗ್ರದವಸ್ಥೆಯಲ್ಲಿ ಇಷ್ಟವಸ್ತುಗಳ ಸಂಯೋಗದಿಂದಲೂ ಸ್ವಪ್ನಾವಸ್ಥೆಯಲ್ಲಿ ಒಳ್ಳೆಯ ಕನಸುಗಳಿಂದಲೂ ಗಾಢನಿದ್ರಾವಸ್ಥೆಯಲ್ಲಿಯೂ ದೊರಕುವ ಆನಂದವೇ ಸುಖವೇ ಆನಂದಮಯಕೋಶ.

ಸ್ಥೂಲಶರೀರವು ಅನ್ನಮಯಕೋಶವನ್ನೂ, ಸೂಕ್ಷ್ಮಶರೀರವು ಪ್ರಾಣಮಯ-ಮನೋಮಯ-ವಿಜ್ಞಾನಮಯ-ಕೋಶಗಳನ್ನೂ ಕಾರಣಶರೀರವು ಆನಂದಮಯ ಕೋಶವನ್ನೂ ಒಳಕೊಂಡಿವೆ. ಈ ವಿವರಣೆಯನ್ನೆಲ್ಲ ಜೀವಚೈತನ್ಯದ ಉಪಾಧಿ ಎಂಬ ದೃಷ್ಟಿಯಿಂದ ಕೊಡಲಾಗಿದೆ. ಇದನ್ನು ಸಮಷ್ಟಿ ಉಪಾಧಿಯ ಸಂಬಂಧದಿಂದ ಈಶ್ವರ ಚೈತನ್ಯಕ್ಕೂ ಅನ್ವಯಿಸಬಹುದು.

3 ನಮ್ಮ ಸುಷುಪ್ತಿಗೆ ಸಮನಾದ ಈಶ್ವರಸುಷುಪ್ತಿ. ನಿಜವಾಗಿ ಇದು ಮಹಾ ಪ್ರಳಯ.

4 ಆಕಾಶಾದಿ ಸೂಕ್ಷ್ಮಭೂತಗಳೂ ಅವುಗಳಿಂದ ಅನಿತವಾದ ಸ್ಥೂಲ ಪ್ರಪಂಚವೂ ಇದರಲ್ಲಿ ಲಯವಾಗುವುದರಿಂದ 'ಲಯಸ್ಥಾನ'.

## ವ್ಯಷ್ಟಿ ಅಜ್ಞಾನ

**ಯಥಾ ವನಸ್ಯ ವ್ಯಷ್ಟಿ-ಅಭಿಪ್ರಾಯೇಣ 'ವೃಕ್ಷಾಃ' ಇತಿ ಅನೇಕತ್ವವ್ಯಪದೇಶಃ, ಯಥಾ ವಾ ಜಲಾಶಯಸ್ಯ ವ್ಯಷ್ಟಿ-ಅಭಿಪ್ರಾಯೇಣ 'ಜಲಾನಿ' ಇತಿ, ತಥಾ ಅಜ್ಞಾನಸ್ಯ ವ್ಯಷ್ಟಿ-ಅಭಿಪ್ರಾಯೇಣ ತದನೇಕತ್ವ-ವ್ಯಪದೇಶಃ, 'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' (ಋ.ಸಂ. ೯.೪೭.೧೮) ಇತ್ಯಾದಿ ಶ್ರುತೇಃ ॥೪೦॥**

೪೦. ಹೇಗೆ ಕಾಡಿಗೆ ವ್ಯಷ್ಟಿಯ (ಬಿಡಿಬಿಡಿಯಾಗಿರುವುದು ಎಂಬ) ದೃಷ್ಟಿಯಿಂದ (ನೋಡಿದಾಗ) 'ಮರಗಳು' ಎಂದು ಬಹುವಚನ ಪ್ರಯೋಗವಿದೆಯೋ, ಅಥವಾ, ಸರೋವರಕ್ಕೆ (ನೀರಿನ ಹನಿಗಳು ಎಂಬ) ವ್ಯಷ್ಟಿಯ ದೃಷ್ಟಿಯಿಂದ (ನೋಡಿದಾಗ) 'ನೀರುಗಳು' ಎಂದು ಬಹುವಚನ ಪ್ರಯೋಗವಿದೆಯೋ ಹಾಗೆಯೇ, ಅಜ್ಞಾನಕ್ಕೂ (ವಿವಿಧ ವ್ಯಕ್ತಿಗಳಲ್ಲಿರುವುದು ಎಂಬ) ವ್ಯಷ್ಟಿಯ ದೃಷ್ಟಿಯಿಂದ (ನೋಡಿದಾಗ) ಅದು ಅನೇಕ ಎಂಬ (ಬಹುವಚನ) ಪ್ರಯೋಗವಿರುತ್ತದೆ. 'ಇಂದ್ರನು ಮಾಯೆಯಿಂದ ಬಹುರೂಪವಾಗಿ ತೋರಿ ಕೊಳ್ಳುತ್ತಾನೆ' ಎಂಬಿವೇ ಮೊದಲಾದ ಶ್ರುತಿಯಿಂದ (ಹೀಗೆ ತಿಳಿದುಬರುತ್ತದೆ).

ಇಂದ್ರನೆಂದರೆ ಪರಮಾತ್ಮ. ಮಾಯೆ ಎಂದರೆ ವಿಕ್ಷೇಪಶಕ್ತಿ. ಇದರಮೂಲ ಅವನು ಬಹುರೂಪವಾಗಿ ತೋರಿಕೊಳ್ಳುತ್ತಾನೆ. ಇವು ತೋರ್ಕೆಯ ರೂಪಗಳೇ ವಿನ ನಿಜವಲ್ಲ.

ಇದೇ ಅಭಿಪ್ರಾಯವನ್ನು ಕೊಡುವ ಮತ್ತೊಂದು ಶ್ರುತಿ: ಯ ಏಕೋ ಜಾಲ ವಾನ್ ಈಶತ ಈಶನೀಭಿಃ, 'ಯಾವ ಅದ್ವಿತೀಯನಾದ ಮಾಯಾವಿಯು ತನ್ನ ಶಕ್ತಿ ಗಳಿಂದ ಆಳುತ್ತಾನೆಯೋ' (ಶ್ವೇ.ಉ. ೩.೧).

**ಅತ್ರ ವ್ಯಸ್ತ-ಸಮಸ್ತ-ವ್ಯಾಪಿತ್ವೇನ ವ್ಯಷ್ಟಿ-ಸಮಷ್ಟಿ ವ್ಯಪದೇಶಃ ॥೪೧॥**

೪೧. ಇಲ್ಲಿ (ಎಂದರೆ, ಈ ಅಜ್ಞಾನದ ವಿಷಯದಲ್ಲಿ) ವ್ಯಷ್ಟಿ (ಅಥವಾ) ಸಮಷ್ಟಿ ಎಂಬ ವ್ಯವಹಾರವು (ಆ ಅಜ್ಞಾನವು) ಬಿಡಿಬಿಡಿಯಾಗಿರುವ (ವಸ್ತು ವನ್ನು) (ಅಥವಾ) ಸಮುದಾಯವನ್ನು ವ್ಯಾಪಿಸಿರುವುದು ಎಂಬ ಕಾರಣದಿಂದ

ಮರಗಳಂತೆ ಬಿಡಿಬಿಡಿಯಾದುದಕ್ಕೆ ಸಂಬಂಧಿಸಿದಾಗ ವ್ಯಷ್ಟಿ ಎಂತಲೂ, ಕಾಡಿನಂತೆ ಸಮೂಹಕ್ಕೆ ಸಂಬಂಧಿಸಿದಾಗ ಸಮಷ್ಟಿ ಎಂತಲೂ ವ್ಯವಹರಿಸಲಾಗಿದೆ ಎಂದು ಅಭಿಪ್ರಾಯ.

**ಇಯಂ ವ್ಯಷ್ಟಿಃ ನಿಕೃಷ್ಟ-ಉಪಾಧಿತಯಾ ಮಲಿನಸತ್ತ್ವ-ಪ್ರಧಾನಾ ||೪೨||**

೪೨. ನಿಕೃಷ್ಟವಾದುದಕ್ಕೆ[1] ಉಪಾಧಿಯಾಗಿರುವುದರಿಂದ ಈ ವ್ಯಷ್ಟಿ (ಅಜ್ಞಾನವು) ಮಲಿನಸತ್ತ್ವವನ್ನು[2] ಮುಖ್ಯವಾಗಿ (ಹೊಂದಿರುತ್ತದೆ).

1 ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನಿಗೆ ಹೋಲಿಸಿದರೆ ಜೀವನು-ಅಲ್ಪಜ್ಞನೂ ಅಲ್ಪಶಕ್ತನೂ ಆದುದರಿಂದ-ನಿಕೃಷ್ಟನು. ವ್ಯಷ್ಟಿ-ಅಜ್ಞಾನವು ಅವನಿಗೆ ಉಪಾಧಿ.

2 ಜೀವನಲ್ಲಿ ಚೈತನ್ಯಸ್ವರೂಪವು ಆವೃತವಾಗಿರುವುದರಿಂದ ಅಜ್ಞಾನದ ಆವರಣ ಶಕ್ತಿಯು ಹೆಚ್ಚಾಗಿ ತೋರಿಕೊಳ್ಳುತ್ತದೆ. ಆದ್ದರಿಂದ ಸತ್ತ್ವಗುಣವು ರಜಸ್ಸು ತಮಸ್ಸುಗಳಿಂದ ಮಲಿನವಾಗಿರುವುದೆಂದು ಅರಿಯಬೇಕು.

**ಏತದುಪಹಿತಂ ಚೈತನ್ಯಮ್ ಅಲ್ಪಜ್ಞತ್ವ-ಅನೀಶ್ವರತ್ವಾದಿ-ಗುಣಕಂ 'ಪ್ರಾಜ್ಞಃ' ಇತಿ ಉಚ್ಯತೇ ಏಕ-ಅಜ್ಞಾನ-ಅವಭಾಸ-ಕತ್ವಾತ್ ||೪೩||**

೪೩. ಈ ವ್ಯಷ್ಟಿ-ಅಜ್ಞಾನವನ್ನು ಉಪಾಧಿಯಾಗಿ ಹೊಂದಿರುವ (ಮತ್ತು) ಅಲ್ಪಜ್ಞತ್ವ ಅನೀಶ್ವರತ್ವ ಮೊದಲಾದ ಗುಣಗಳನ್ನುಳ್ಳ ಚೈತನ್ಯವು 'ಪ್ರಾಜ್ಞ' ಎಂದು ಕರೆಯಲ್ಪಟ್ಟಿದೆ ; ಏಕೆಂದರೆ (ಇದು) ಒಂದು ಅಜ್ಞಾನವನ್ನು ಮಾತ್ರ ಬೆಳಗುತ್ತದೆ.

ಜೀವಚೈತನ್ಯದ ಜೀವತ್ವಕ್ಕೆ ವ್ಯಷ್ಟಿ-ಅಜ್ಞಾನವೇ ಕಾರಣ. ಅದು ಈ ಒಂದು ಅಜ್ಞಾನವನ್ನು ಮಾತ್ರ ಬೆಳಗುತ್ತದೆ; ಎಂದರೆ, ತನ್ನ ಅಜ್ಞಾನಕ್ಕೆ ಮಾತ್ರ ಸಾಕ್ಷಿಯಾಗಿರುತ್ತದೆ. ಆದುದರಿಂದಲೇ ಅದರ ಜ್ಞಾನ ಅಲ್ಪ ('ಅಲ್ಪಜ್ಞತ್ವ') ಮತ್ತು ಶಕ್ತಿಯೂ ಅಲ್ಪ ('ಅನೀಶ್ವರತ್ವ'). ಈ ಚೈತನ್ಯವನ್ನು ಇಲ್ಲಿ 'ಪ್ರಾಜ್ಞ' ಎಂದು ಕರೆದಿದೆ.

ಮಾಂಡೂಕ್ಯೋಪನಿಷತ್ತಿನಲ್ಲಿ (೩, ೪ ಮತ್ತು ೫) ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ಸಂಬಂಧಿಸಿದ ಜೀವನನ್ನು ಕ್ರಮವಾಗಿ ವಿಶ್ವ, ತೈಜಸ ಮತ್ತು ಪ್ರಾಜ್ಞ ಎಂದು ಕರೆದಿದೆ. ಅಲ್ಲಿ ಉತ್ಕೃಷ್ಟಾವಸ್ಥೆಯನ್ನು ಸೂಚಿಸುವುದಕ್ಕಾಗಿ ಪ್ರಾಜ್ಞಶಬ್ಧವನ್ನು ಬಳಸಿದೆ. ಪ್ರಾಜ್ಞ-ಶಬ್ದವನ್ನು ಸಾಮಾನ್ಯವಾಗಿ, **ಪ್ರಕರ್ಷೇಣ ಜಾನಾತಿ ಇತಿ ಪ್ರಜ್ಞಃ, ಪ್ರಜ್ಞಃ ಏವ ಪ್ರಾಜ್ಞಃ,** 'ಚೆನ್ನಾಗಿ ಅರಿಯುತ್ತಾನಾದ್ದರಿಂದ ಪ್ರಜ್ಞನು, ಪ್ರಜ್ಞನೇ ಪ್ರಾಜ್ಞನು' ಎಂದು ನಿರ್ವಚನ ಮಾಡುವುದುಂಟು. ಶ್ರೀಶಂಕರ ಭಗವತ್ಪಾದರು ಮಾಂಡೂಕ್ಯಭಾಷ್ಯದಲ್ಲಿ (೫) **ಪ್ರಜ್ಞಪ್ತಿಮಾತ್ರಮ್ ಅಸ್ಯ ಏವ ಅಸಾಧಾರಣಂ ರೂಪಮ್** ಇತಿ ಪ್ರಾಜ್ಞ- 'ಕೇವಲ ಪ್ರಜ್ಞಪ್ತಿಯು ಇವನ ಅಸಾಧಾರಣ ರೂಪವಾದುದರಿಂದ ಪ್ರಾಜ್ಞನು' ಎಂದಿರುತ್ತಾರೆ.

ಆದರೆ ಇಲ್ಲಿ ಈ ನಿರ್ವಚನವು ಹೊಂದುವುದಿಲ್ಲ. ಆದುದರಿಂದಲೇ ವಿದ್ವನ್ಮನೋರಂಜಿನೀ ವ್ಯಾಖ್ಯಾನದಲ್ಲಿ ಈ ಶಬ್ದವನ್ನು ಪ್ರಾಯೇಣ ಅಜ್ಞಃ 'ಬಹುಮಟ್ಟಿಗೆ ಅಜ್ಞನು' ಎಂದು ವಿವರಿಸಿದೆ.

**ಅಸ್ಯ ಪ್ರಾಜ್ಞತ್ವಮ್ ಅಸ್ಪಷ್ಟ-ಉಪಾಧಿತಯಾ ಅನತಿ-ಪ್ರಕಾಶಕತ್ವಾತ್ ॥೪೪॥**

೪೪. ಮಲಿನೋಪಾಧಿಯು ಕಾರಣ ಹೆಚ್ಚು ಪ್ರಕಾಶವನ್ನು ಬೀರದ್ದರಿಂದ ಈ (ಚೈತನ್ಯಕ್ಕೆ) 'ಪ್ರಾಜ್ಞ' (ಎಂದು ಕರೆದಿದೆ).

ಪ್ರಾಜ್ಞನ ಉಪಾಧಿಯಾದ ಅಜ್ಞಾನದಲ್ಲಿ ರಜಸ್ಸು ತಮಸ್ಸುಗಳು ಹೆಚ್ಚಾಗಿರುವುದರಿಂದ ಚೈತನ್ಯದ ಅನುಭವವು ಸ್ಪಷ್ಟವಾಗಿರುವುದಿಲ್ಲ. ಆದುದರಿಂದಲೇ ಜ್ಞಾನ ಪ್ರಕಾಶವೂ ಕಮ್ಮಿ.

**ಅಸ್ಯಾಪಿ ಇಯಮ್ ಅಹಂಕಾರಾದಿಕಾರಣತ್ವಾತ್ ಕಾರಣ-ಶರೀರಮ್, ಆನಂದಪ್ರಚುರತ್ವಾತ್ ಕೋಶವದ್ ಆಚ್ಛಾದಕತ್ವಾಚ್ಚ ಆನಂದಮಯಕೋಶಃ, ಸರ್ವೋಪರಮತ್ವಾತ್ ಸುಷುಪ್ತಿಃ, ಅತ ಏವ ಸ್ಥೂಲಸೂಕ್ಷ್ಮಶರೀರಲಯಸ್ಥಾನಮ್ ಇತಿ ಚ ಉಚ್ಯತೇ ॥೪೫॥**

೪೫. ಇವನ ಈ (ಅಜ್ಞಾನವೂ) ಕೂಡ ಅಹಂಕಾರಾದಿಗಳಿಗೆ 1ಕಾರಣವಾಗಿರುವುದರಿಂದ ಕಾರಣಶರೀರವೆಂದೂ, ಆನಂದವನ್ನು ಅಧಿಕವಾಗಿ ಹೊಂದಿರು

ವುದರಿಂದ ಮತ್ತು ಒರೆಯಂತೆ (ಚೈತನ್ಯಸ್ವರೂಪವನ್ನು) ಮುಚ್ಚುವುದರಿಂದ ಆನಂದಮಯಕೋಶವೆಂದೂ, ಎಲ್ಲವೂ ಇದರಲ್ಲಿ ಲಯವಾಗುವುದರಿಂದ ಸುಷುಪ್ತಿಯೆಂತಲೂ[2], ಆದುದರಿಂದಲೇ ಸ್ಥೂಲ ಸೂಕ್ಷ್ಮಶರೀರಗಳ ಲಯಸ್ಥಾನವೆಂತಲೂ[3] ಕರೆಯಲ್ಪಟ್ಟಿದೆ.

ಹಿಂದೆ ೩೯ ರಲ್ಲಿ ಈಶ್ವರೋಪಾಧಿಯಾದ ಅಜ್ಞಾನದ ಲಕ್ಷಣಗಳನ್ನೂ ಹೆಸರುಗಳನ್ನೂ ತಿಳಿಸಲಾಯಿತು. ಈಗ ಅದೇ ಅಜ್ಞಾನವು ವ್ಯಷ್ಟಿಯ ದೃಷ್ಟಿಯಿಂದ ಜೀವನಿಗೆ ಸಂಬಂಧಿಸಿದಾಗ ಅದರ ಲಕ್ಷಣಗಳೇನು ಹೆಸರುಗಳೇನು ಎಂಬುದನ್ನು ವಿವರಿಸಲಾಗುತ್ತಿದೆ.

1 ಇಲ್ಲಿ ಅಹಂಕಾರ-ಅಂತಃಕರಣವನ್ನು ಸೂಚಿಸಿದೆ.

2 ಜಾಗ್ರದವಸ್ಥೆಯ ಮತ್ತು ಸ್ವಪ್ನಾವಸ್ಥೆಯ ಅನುಭವಗಳೆಲ್ಲ ಸುಷುಪ್ತಿಯಲ್ಲಿ ಲಯಹೊಂದುತ್ತವೆ.

3 ಜಾಗ್ರದವಸ್ಥೆಯ ಸ್ಥೂಲ ಶರೀರದ ಪರಿವೆ ಸ್ವಪ್ನಾವಸ್ಥೆಯಲ್ಲಿಲ್ಲದಿರುವುದರಿಂದ ಸ್ಥೂಲಶರೀರವು ಸೂಕ್ಷ್ಮಶರೀರದಲ್ಲಿ ಲಯವಾಗುತ್ತದೆ ಎನ್ನಬಹುದು. ಹಾಗೆಯೇ ಸುಷುಪ್ತಿಯಲ್ಲಿ ಮನೋಮಯ ಪ್ರಪಂಚವಿಲ್ಲದಿರುವುದರಿಂದ ಸೂಕ್ಷ್ಮಶರೀರವೂ ಲಯವಾಗಿರುತ್ತದೆ ಎನ್ನಬಹುದು. ಇದರ ಲಯಸ್ಥಾನ ಸುಷುಪ್ತಿಗೆ ಕಾರಣವಾದ ಅಜ್ಞಾನ ಮಾತ್ರವೇ.

ಇತರ ವಿವರಗಳಿಗೆ ೩೯ ನ್ನು ನೋಡಿ.

**ತದಾನೀಮ್ ಏತೌ ಈಶ್ವರಪ್ರಾಜ್ಞೌ ಚೈತನ್ಯಪ್ರದೀಪ್ತಾಭಿಃ ಅತಿಸೂಕ್ಷ್ಮಾಭಿಃ ಅಜ್ಞಾನವೃತ್ತಿಭಿಃ ಆನಂದಮ್ ಅನುಭವತಃ; 'ಆನಂದಭುಕ್ ಚೇತೋಮುಖಃ ಪ್ರಾಜ್ಞಃ' (ಮಾಂ.ಉ.೫) ಇತಿ ಶ್ರುತೇಃ, 'ಸುಖಮಹಮ್ ಅಸ್ವಾಪ್ಸಮ್, ನ ಕಿಂಚಿದವೇದಿಷಮ್' ಇತ್ಯುತ್ಥಿತಸ್ಯ ಪರಾಮರ್ಶೋಪಪತ್ತೇಶ್ಚ ॥೪೬॥**

೪೬. ಆಗ ಈ ಈಶ್ವರ-ಪ್ರಾಜ್ಞರಿಬ್ಬರೂ ಚೈತನ್ಯದಿಂದ ಬೆಳಗಲ್ಪಟ್ಟ ಅತ್ಯಂತ ಸೂಕ್ಷ್ಮವಾದ ಅಜ್ಞಾನವೃತ್ತಿಗಳ ಮೂಲಕ ಆನಂದವನ್ನು ಅನುಭವಿಸುತ್ತಾರೆ. 'ಆನಂದಭೋಗಿಯೂ ಚೇತೋಮುಖನೂ ಆದ ಪ್ರಾಜ್ಞನು' (ಮಾಂ.ಉ.೫) ಎಂಬ ಶ್ರುತಿಯಿಂದಲೂ, (ಗಾಢನಿದ್ರೆಯಿಂದ) ಎದ್ದವನು

'ನಾನು ಸುಖವಾಗಿ ನಿದ್ರಿಸಿದೆನು! ಏನನ್ನೂ ಅರಿಯಲಿಲ್ಲ!' ಎಂದ
ಜ್ಞಾಪಿಸಿಕೊಳ್ಳುವುದು (ಹೀಗೆ ಅಜ್ಞಾನವೃತ್ತಿಗಳನ್ನೊಪ್ಪಿಕೊಂಡರೆ ಮಾತ್ರ
ಹೊಂದುವುದರಿಂದಲೂ (ಹೀಗೆ ತಿಳಿದುಬರುತ್ತದೆ).

ಸುಷುಪ್ತಿಕಾಲದಲ್ಲಿ ಅಂತಃಕರಣವು ಲಯವಾಗಿರುವುದರಿಂದ, ಅದರ ಮೂಲ
ಆಗಬೇಕಾದ ಜ್ಞಾನಕ್ಕೆ ಅಥವಾ ಆನಂದದ ಅನುಭವಕ್ಕೆ ಅವಕಾಶವಿಲ್ಲದಿರುವುದರಿಂದ
ಪ್ರಾಜ್ಞನಿಗೆ ಆನಂದಮಯ ಕೋಶವನ್ನೂ ಪ್ರಾಜ್ಞನೆಂಬ ಹೆಸರನ್ನೂ ಹೇಗೆ ಕೊಡಲ
ದೀತು ?—ಎಂಬ ಆಕ್ಷೇಪಣೆಗೆ ಇಲ್ಲಿ ಪರಿಹಾರವನ್ನು ಸೂಚಿಸಿದೆ.

ಆ ಅವಸ್ಥೆಯಲ್ಲಿ (ಪ್ರಳಯದಲ್ಲಿ ಅಥವಾ ಸುಷುಪ್ತಿಯಲ್ಲಿ) ಅಂತಃಕರಣವಿ
ದಿದ್ದರೂ ಅದರ ಮೂಲವಾದ ಅಜ್ಞಾನವಿರುತ್ತದೆ. ಈ ಅಜ್ಞಾನವು ಸೂಕ್ಷ್ಮವಾ
ಅಸ್ಪಷ್ಟವಾದ ವೃತ್ತಿಗಳ ಮೂಲಕ ಎದ್ದುಕೊಳ್ಳುತ್ತಲೇ ಇರುತ್ತದೆ. ಅದರಲ್ಲಿ ಈಶ್ವರ
ಅಥವಾ ಜೀವನ ಚೈತನ್ಯವು ಪ್ರತಿಬಿಂಬಿತವಾಗುತ್ತಲೇ ಇರುತ್ತದೆ. ಆನಂದಸ್ವರೂಪ
ಪ್ರತಿಬಿಂಬಿತವಾಗುವುದರಿಂದ ಆನಂದಾನುಭವವೂ, ಅರಿಯುವುದಕ್ಕೆ ಎರಡನೆಯ ವಸ್
ವಿಲ್ಲದಿರುವುದರಿಂದ ಅಜ್ಞಾನದ ಅನುಭವವೂ ಉಂಟಾಗುತ್ತವೆ.

ಇದನ್ನು ಸಾಧಿಸುವುದಕ್ಕಾಗಿ ಶ್ರುತಿವಾಕ್ಯವೊಂದನ್ನೂ ದೈನಂದಿನ ಜೀವನ
ಅನುಭವವನ್ನೂ ಪ್ರಮಾಣವಾಗಿ ಕೊಟ್ಟಿದೆ.

ಸುಷುಪ್ತಿಯಲ್ಲಿ ಯಾವ ರೀತಿಯ ಆಯಾಸವೂ ಇಲ್ಲದೆ ಜೀವನು ಹಾಯಾಗಿರ
ವುದರಿಂದ ಅವನನ್ನು 'ಆನಂದಭುಕ್' ಎಂದು ಕರೆದಿದೆ. ಜಾಗ್ರದಾದಿ ಅವಸ್ಥೆಗ
ಲ್ಲಾಗುವ ಅನುಭವಗಳ ಅರಿವಿಗೆ (ಚೇತಸ್) ದ್ವಾರದಂತಿರುವುದರಿಂದ (ಮುಖ)—
ಪ್ರಜ್ಞೆಯಿಲ್ಲದಿದ್ದರೆ ಆ ಅರಿವು ಸಾಧ್ಯವಿಲ್ಲದ್ದರಿಂದ, ಅವನು ಪ್ರಜ್ಞಾರೂಪನೇ ಆದು
ರಿಂದ—ಚೇತೋಮುಖನು.

ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಃ ಸುಖರೂಪಮೇತಿ
'ಸುಷುಪ್ತಿಕಾಲದಲ್ಲಿ ಎಲ್ಲವೂ ಲಯವಾಗಿರಲಾಗಿ, ತಮಸ್ಸಿನಿಂದ ಆವೃತನಾ
(ಜೀವನು) ಸುಖರೂಪವಾದ ಅನುಭವವನ್ನು ಪಡೆಯುತ್ತಾನೆ' ಎಂಬ ಮತ್ತೊಂದ
ಶ್ರುತಿವಾಕ್ಯವನ್ನು (ಕೈವಲ್ಯೋಪನಿಷತ್ ೧೩) ಇಲ್ಲಿ ಸ್ಮರಿಸಿಕೊಳ್ಳಬಹುದು. ಹಾಗೆಯೆ
ಬೃಹದಾರಣ್ಯಕೋಪನಿಷತ್ತಿನ ೪.೩.೨೩—೩೨ ನ್ನೂ ಇಲ್ಲಿ ಉದಾಹರಣೆಯಾ
ಕೊಡಬಹುದು.

ಈಶ್ವರನ ವಿಷಯದಲ್ಲಿ, ಅಜ್ಞಾನವಿಲ್ಲದಿರುವುದರಿಂದ. ಆನಂದವನ್ನು ಮಾ
ಒಪ್ಪಿಕೊಳ್ಳಲಾಗಿದೆ.

**ಅನಯೋಃ ಸಮಷ್ಟಿ-ವ್ಯಷ್ಟ್ಯೋಃ ವನವೃಕ್ಷಯೋರಿವ ಜಲಾ-ಶಯಜಲಯೋರಿವ ವಾ ಅಭೇದಃ ॥೪೭॥**

೪೭. ಕಾಡು ಮತ್ತು ಮರಗಳು—ಇವುಗಳ ನಡುವೆ, ಅಥವಾ ಜಲಾಶಯ ಮತ್ತು ನೀರಿನ ಕಣಗಳು–ಇವುಗಳ ನಡುವೆ (ಅಭೇದವಿರುವಂತೆ), ಈ ಸಮಷ್ಟಿ ಮತ್ತು ವ್ಯಷ್ಟಿ (ಅಜ್ಞಾನಗಳ) ನಡುವೆ ಸಹ ಅಭೇದವಿರುತ್ತದೆ.

**ಏತದುಪಹಿತಯೋಃ ಈಶ್ವರಪ್ರಾಜ್ಞಯೋರಪಿ ವನ-ವೃಕ್ಷ-ಅವಚ್ಛಿನ್ನ-ಆಕಾಶಯೋರಿವ ಜಲಾಶಯ-ಜಲಗತ-ಪ್ರತಿಬಿಂಬ-ಆಕಾಶಯೋರಿವ ವಾ ಅಭೇದಃ, 'ಏಷ ಸರ್ವೇಶ್ವರಃ' (ಮಾಂ.ಉ.೬) ಇತ್ಯಾದಿಶ್ರುತೇಃ ॥೪೮॥**

೪೮. ಕಾಡಿನಿಂದ ಬೇರ್ಪಡಿಸಲ್ಪಟ್ಟ ಆಕಾಶಕ್ಕೂ ಮರಗಳಿಂದ ಬೇರ್ಪಡಿಸಲ್ಪಟ್ಟ ಆಕಾಶಕ್ಕೂ (ಅಭೇದವಿರುವಂತೆ), ಜಲಾಶಯದಲ್ಲಿ ಪ್ರತಿಬಿಂಬಿಸಲ್ಪಟ್ಟ ಆಕಾಶಕ್ಕೂ ನೀರಿನ ಕಣಗಳಲ್ಲಿ ಪ್ರತಿಬಿಂಬಿಸಲ್ಪಟ್ಟ ಆಕಾಶಕ್ಕೂ (ಅಭೇದವಿರುವಂತೆ), ಈ (ಸಮಷ್ಟಿ ವ್ಯಷ್ಟಿ ಅಜ್ಞಾನಗಳನ್ನು) ಉಪಾಧಿಯಾಗಿ ಹೊಂದಿರುವ ಈಶ್ವರ–ಪ್ರಾಜ್ಞರಿಗೂ ಸಹ ಅಭೇದವಿರುತ್ತದೆ.[1] 'ಇವನು ಸರ್ವೇಶ್ವರನು' (ಮಾಂ ಉ.೬) ಇತ್ಯಾದಿ ಶ್ರುತಿವಾಕ್ಯದಿಂದ[2] (ಹೀಗೆ ತಿಳಿದುಬರುತ್ತದೆ.).

1 ಭೇದವು ಉಪಾಧಿಯಿಂದ ಉಂಟಾಗಿರುತ್ತದೆ. ಉಪಾಧಿಯನ್ನು ಕಡೆಗಣಿಸಿದಾಗ ಮೂಲವಸ್ತುವು ತತ್ತ್ವತಃ ಒಂದೇ. ಈಶ್ವರ–ಪ್ರಾಜ್ಞರಿಬ್ಬರಿಗೂ ಚೈತನ್ಯಾಂಶದಿಂದ ಅಭೇದವಿರುತ್ತದೆ. ವ್ಯವಹಾರ ದೃಷ್ಟಿಯಿಂದ ಅಭೇದವು ಸಾಧ್ಯವಿಲ್ಲ ಎಂಬುದು ಅನುಭವವೇದ್ಯ.

ಅದ್ವೈತ ವೇದಾಂತ ಪ್ರಕ್ರಿಯೆಯಲ್ಲಿ ಜೀವೇಶ್ವರ ಭೇದವನ್ನು ಅನಾದಿಯೆಂದು ಒಪ್ಪಲಾಗಿದೆ; **ಜೀವ ಈಶೋ ವಿಶುದ್ಧಾ ಚಿತ್ ತಥಾ ಜೀವೇಶಯೋರ್ಭಿದಾ । ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಮನಾದಯಃ ॥** 'ನಮ್ಮ ಮತದಲ್ಲಿ ಜೀವ, ಈಶ್ವರ, ಶುದ್ಧವಾದ ಚಿತ್, ಜೀವೇಶ್ವರರ ಭೇದ, ಅವಿದ್ಯೆ, ಅವಿದ್ಯೆಗೂ ಚಿತ್ತಿಗೂ ಇರುವ ಸಂಬಂಧ–ಇವೆಲ್ಲ ಅನಾದಿಗಳು.' ಈ ಶ್ಲೋಕವು ಎಲ್ಲಿಯದೆಂದು ತಿಳಿಯದು.

2 ಕೆಲವು ಪಾಠದಲ್ಲಿ ಉಪನಿಷತ್ತಿನ ವಾಕ್ಯವನ್ನು ಪೂರ್ಣವಾಗಿ ಉದ್ಧರಿಸಿದೆ.

**ವನ-ವೃಕ್ಷ-ತದವಚ್ಛಿನ್ನ-ಆಕಾಶಯೋಃ ಜಲಾಶಯ-ಜಲ-ತದ್ಗತ-ಪ್ರತಿಬಿಂಬ-ಆಕಾಶಯೋರ್ವಾ ಆಧಾರಭೂತ-ಅನುಪಹಿತ-ಆಕಾಶವತ್ ಅನಯೋಃ ಅಜ್ಞಾನ-ತದುಪಹಿತಂ ಚೈತನ್ಯಯೋಃ ಆಧಾರ-ಭೂತಂ ಯತ್ ಅನುಪಹಿತಂ ಚೈತನ್ಯಂ ತತ್ ತುರೀಯಮಿತ್ಯುಚ್ಯತೇ, '(ಶಾಂತಂ) ಶಿವಮದ್ವೈತಂ ಚತುರ್ಥಂ ಮನ್ಯಂತೇ (ಸ ಆತ್ಮಾ ಸ ವಿಜ್ಞೇಯಃ)' (ಮಾಂ.ಉ.೭) ಇತ್ಯಾದಿಶ್ರುತೇಃ ॥೪೯॥**

೪೯. ಕಾಡು ಮತ್ತು ಮರಗಳು—ಇವುಗಳಿಂದ ಬೇರ್ಪಡಿಸಲ್ಪಟ್ಟ ಎರಡೂ ಆಕಾಶಗಳಿಗೆ, ಅಥವಾ. ಜಲಾಶಯ ಮತ್ತು ನೀರಿನ ಕಣಗಳು—ಇವುಗಳಲ್ಲಿ ಪ್ರತಿಬಿಂಬಿತವಾದ ಎರಡೂ ಆಕಾಶಗಳಿಗೆ, ಆಧಾರವಾಗಿರುವ, ಉಪಾಧಿಸಂಬಂಧವಿಲ್ಲದ ಆಕಾಶದಂತೆ, ಈ ಎರಡು ವಿಧದ ಅಜ್ಞಾನಗಳಿಗೂ ಅವುಗಳನ್ನು ಉಪಾಧಿಯಾಗಿ ಹೊಂದಿರುವ ಚೈತನ್ಯಗಳಿಗೂ (ಎಂದರೆ ಈಶ್ವರ-ಪ್ರಾಜ್ಞರಿಗೂ) ಆಧಾರವಾಗಿರುವ ಯಾವ ಉಪಾಧಿರಹಿತ ಚೈತನ್ಯವಿದೆಯೋ ಅದನ್ನು 'ತುರೀಯ'ವೆಂದು ಕರೆಯಲಾಗುತ್ತದೆ. 'ಶಾಂತನೂ ಶಿವಸ್ವರೂಪನೂ ಅದ್ವಯನೂ ಆದ (ಅವನನ್ನು) ತುರೀಯನೆಂದು ಭಾವಿಸುತ್ತಾರೆ. ಅವನು ಆತ್ಮನು, ಅವನನ್ನು ಅರಿತುಕೊಳ್ಳಬೇಕು' (ಮಾಂ. ಉ. ೭) ಇತ್ಯಾದಿ ಶ್ರುತಿಯಿಂದ (ಹೀಗೆ ತಿಳಿದುಬರುತ್ತದೆ).

ಇದುವರೆಗೆ ಉಪಾಧಿಸಂಬಂಧವನ್ನು ಹೊಂದಿದ ಚೈತನ್ಯದ ವಿಷಯವನ್ನು ಹೇಳಿದ್ದಾಯಿತು. ಈಗ ಉಪಾಧಿಗಳನ್ನು ಮೀರಿರುವ ಶುದ್ಧಚೈತನ್ಯವನ್ನು ವಿವರಿಸುತ್ತಿದ್ದಾರೆ.

ಅನಂತವಾದ ಆಕಾಶವನ್ನು ಮಹಾಕಾಶವೆಂದು ಕರೆಯುತ್ತಾರೆ. ಉಪಾಧಿಗಳಿಂದ ಪರಿಚ್ಛಿನ್ನವಾದಂತೆ ತೋರುವ ಆಕಾಶಗಳನ್ನು ಆಯಾ ಉಪಾಧಿಯ ಹೆಸರಿನಿಂದಲೇ ಕರೆಯುತ್ತಾರೆ. ಉದಾಹರಣೆಗೆ: ವೃಕ್ಷಾಕಾಶ, ವನಾಕಾಶ, ಜಲಾಕಾಶ, ಘಟಾಕಾಶ ಇತ್ಯಾದಿ. ಈ ಎಲ್ಲ ಆಕಾಶಗಳಿಗೂ ಮಹಾಕಾಶವೇ ಆಧಾರ, ಅಧಿಷ್ಠಾನ. ಅದಿಲ್ಲದಿದ್ದರೆ ಇವೂ ಇರಲಾರವು. ಹಾಗೆಯೇ, ಮರಗಳಿಗೆ ಕಾಡಿಗೆ ಜಲಾಶಯಕ್ಕೆ ಇರಲು ಅವಕಾಶವನ್ನು ಕೊಡುವುದರಿಂದ ಮಹಾಕಾಶವೂ-ಒಂದು ದೃಷ್ಟಿಯಿಂದ ಅವುಗಳಿಗೆ ಅಧಾರ.

ಇದರಂತೆಯೇ ವ್ಯಷ್ಟಿ-ಸಮಷ್ಟಿ-ಅಜ್ಞಾನಗಳಿಗೂ ಅವುಗಳ ಸಂಬಂಧವನ್ನು ಹೊಂದಿರುವ ಪ್ರಾಜ್ಞ-ಈಶ್ವರರೆಂಬ ಚೈತನ್ಯಗಳಿಗೂ ಆಧಾರವಾಗಿರುವ ಯಾವುದಾದರೂ ವಸ್ತುವಿದೆಯೇ? ಇದೆ, ಅದೇ ಪರಬ್ರಹ್ಮವಸ್ತು, ಆತ್ಮವಸ್ತು, ಈ ಚೈತನ್ಯವನ್ನೇ ಇಲ್ಲಿ 'ತುರೀಯ' ಎಂದು ಕರೆದಿರುವುದು. ಪಾಣಿನೀಯ ಸೂತ್ರಗಳ (೫.೨ ೫.) ವಾರ್ತ್ತಿಕದ ಪ್ರಕಾರ 'ಚತುರೀಯ' ಎಂಬ ಪದವೇ ಆದ್ಯಕ್ಷರಲೋಪದಿಂದ 'ತುರೀಯ' ಎಂದಾಗಿರುವುದರಿಂದ ಅದಕ್ಕೆ 'ನಾಲ್ಕನೆಯದು' ಎಂದರ್ಥ.

ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ಸಂಬಂಧಿಸಿರುವಾಗ ಜೀವಚೈತನ್ಯವನ್ನು ಕ್ರಮವಾಗಿ ವಿಶ್ವ (ಅಥವಾ ವೈಶ್ವಾನರ), ತೈಜಸ ಮತ್ತು ಪ್ರಾಜ್ಞ ಎಂದು ಕರೆಯಲಾಗಿದೆ ಎಂಬುದನ್ನು ಹಿಂದೆಯೇ (೪೩) ಹೇಳಿದೆ. ಹಾಗೆಯೇ ಸಮಷ್ಟಿ-ಉಪಾಧಿಯಿಂದ ಕೂಡಿರುವಾಗ ಬ್ರಹ್ಮಚೈತನ್ಯಕ್ಕೂ ಮೂರು ಅವಸ್ಥೆಗಳನ್ನೂ ಮೂರು ಹೆಸರುಗಳನ್ನೂ ಕಲ್ಪಿಸಲಾಗಿದೆ (ನೋಡಿ ೯೧, ೧೧೧): ಸ್ಥೂಲಪ್ರಪಂಚದ ದೃಷ್ಟಿಯಿಂದ ನೋಡಿದಾಗ, ಸ್ಥೂಲ ಪ್ರಪಂಚದ ಸಮಷ್ಟಿಯೆಂದು ಕಲ್ಪಿಸಿದಾಗ ಅದು 'ವಿರಾಟ್' ಎನಿಸುತ್ತದೆ. ಸೂಕ್ಷ್ಮಪ್ರಪಂಚದ ದೃಷ್ಟಿಯಿಂದ ನೋಡಿದಾಗ, ಪ್ರಪಂಚದ ಅಂತರಾತ್ಮನೆಂದು ಕಲ್ಪಿಸಿದಾಗ ಅದು 'ಸೂತ್ರಾತ್ಮ' ಅಥವಾ 'ಹಿರಣ್ಯಗರ್ಭ'. ಕಾರಣ ಪ್ರಪಂಚದ ದೃಷ್ಟಿಯಿಂದ ನೋಡಿದಾಗ, ಸೃಷ್ಟಿಸ್ಥಿತಿಪ್ರಲಯಗಳ ಕರ್ತೃವಾಗಿ ಪರಿಗಣಿಸಿದಾಗ ಅದು 'ಈಶ್ವರ'.

ಶುದ್ಧಚೈತನ್ಯವು ಈ ಮೂರಕ್ಕೂ ಆಚೆಯಿದ್ದು ಮೂರಕ್ಕೂ ಆಧಾರವಾಗಿರುವುದರಿಂದ 'ತುರೀಯ' ಅಥವಾ 'ನಾಲ್ಕನೆಯದು'.

ಇಲ್ಲಿ ಕೊಟ್ಟಿರುವ ಮಾಂಡೂಕ್ಯಶ್ರುತಿಯ ಜೊತೆಗೆ ಕೈವಲ್ಯೋಪನಿಷತ್ತನ್ನೂ (೧೮) ಉದಾಹರಿಸಬಹುದು; ತ್ರಿಪುಧಾಮಸು ಯದ್ಭೋಗ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್। ತೇಭ್ಯೋವಿಲಕ್ಷಣಃ ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ॥, 'ಮೂರು ಅವಸ್ಥೆಗಳಲ್ಲಿಯೂ ಯಾವುದು ಭೋಗ್ಯವಸ್ತು, ಭೋಕ್ತೃ, ಭೋಗದ ಅನುಭವ ಎಂದೆನಿಸಿಕೊಳ್ಳುತ್ತದೆಯೋ ಅದಕ್ಕಿಂತ ವಿಲಕ್ಷಣವಾದ ಸಾಕ್ಷಿಯೂ ಕೇವಲ ಚಿದ್ರೂಪನೂ ಆದ ಸದಾಶಿವನೇ ನಾನು.'

**ಇದಮೇವ ತುರೀಯಂ ಶುದ್ಧಚೈತನ್ಯಮ್ ಅಜ್ಞಾನಾದಿ-ತದುಪಹಿತ-ಚೈತನ್ಯಾಭ್ಯಾಮ್ ತಪ್ತ-ಅಯಃಪಿಂಡವದ್ ಅವಿವಿಕ್ತಂ**

ಸನ್ ಮಹಾವಾಕ್ಯಸ್ಯ ವಾಚ್ಯಂ ವಿವಿಕ್ತಂ ಸತ್ ಲಕ್ಷ್ಯಮಿತಿ ಚ ಉಚ್ಯತೇ ॥ ೫೦ ॥

೫೦. ನಾಲ್ಕನೆಯದಾದ ಈ ಶುದ್ಧಚೈತನ್ಯವೇ ಅಜ್ಞಾನವೇ ಮೊದಲಾದವು ಮತ್ತು ಅವುಗಳಿಗೆ ಸಂಬಂಧಿಸಿದ ಎರಡು ಚೈತನ್ಯಗಳು, ಇವುಗಳಿಂದ ಬೇರ್ಪಡಿಸಲ್ಪಡದೆ ಇದ್ದಾಗ—ಕಾದ ಕಬ್ಬಿಣದ ಗುಂಡಿನಂತೆ—ಮಹಾವಾಕ್ಯದ ವಾಚ್ಯಾರ್ಥವೆಂದೂ ಬೇರ್ಪಡಿಸಲ್ಪಟ್ಟಾಗ ಲಕ್ಷ್ಯಾರ್ಥವೆಂದೂ ಹೇಳಲ್ಪಡುತ್ತದೆ.

ಒಂದು ಪದಕ್ಕೆ ಅರ್ಥವು ಮೂರು ಬಗೆಯಾಗಿರಬಹುದು: ವಾಚ್ಯಾರ್ಥ, ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥ. ಇದನ್ನು ವಿಶ್ವನಾಥಕವಿರಾಜನ 'ಸಾಹಿತ್ಯದರ್ಪಣದಲ್ಲಿ' ಹೀಗೆ ವಿವರಿಸಿದೆ: ವಾಚ್ಯೋಽರ್ಥೋಽಭಿಧಯಾ ಬೋಧ್ಯೋ ಲಕ್ಷ್ಯೋ ಲಕ್ಷಣಯಾ ಮತಃ । ವ್ಯಂಗ್ಯೋ ವ್ಯಂಜನಯಾ ತಾಃ ಸ್ಯುಸ್ತಿಸ್ರಃ ಶಬ್ದಸ್ಯ ಶಕ್ತಯಃ॥ (೨.೩) ಪದಕ್ಕೆ ನೇರವಾಗಿ ತೋರಿಬರುತ್ತಿರುವ ಅರ್ಥವೇ ವಾಚ್ಯಾರ್ಥ. ಉದಾಹರಣೆಗೆ: 'ಗಾಮ್ ಆನಯ' (ಹಸುವನ್ನು ಕರೆದುಕೊಂಡು ಬಾ). ನೇರವಾದ ಅರ್ಥವು ಅಸಾಧ್ಯವಾದಾಗ ರೂಢಿಯಿಂದಲೋ ಉದ್ದಿಷ್ಟವಾದ ಪ್ರಯೋಜನವನ್ನು ಊಹಿಸಿಯೋ ಮಾಡುವ ಅರ್ಥವು ಲಕ್ಷ್ಯಾರ್ಥ. ಉದಾಹರಣೆಗೆ: "ಕಲಿಂಗಃ ಸಾಹಸಿಕಃ". ಕಲಿಂಗಶಬ್ದವು ದೇಶವನ್ನು ಸೂಚಿಸಿದರೂ ಇಲ್ಲಿ ಆ ಅರ್ಥವು ಹೊಂದುವುದಿಲ್ಲವಾದುದರಿಂದ 'ಕಲಿಂಗದೇಶದವನು ಸಾಹಸಿಗನು' ಎಂದೇ ಅರ್ಥಮಾಡಬೇಕು. ಒಂದು ಪದಕ್ಕೆ ಅನೇಕ ಅರ್ಥಗಳು ಸಾಧ್ಯವಿರುವಾಗ ಅವುಗಳಲ್ಲಿ ಒಂದನ್ನು ಮಾತ್ರ ಸ್ಪಷ್ಟಪಡಿಸಲು ಉಚಿತ ಶಬ್ದಪ್ರಯೋಗ ಮಾಡಿದಾಗ ವ್ಯಂಗ್ಯಾರ್ಥವು ಹೊರಹೊಮ್ಮುತ್ತದೆ. ಉದಾಹರಣೆಗೆ: 'ಸಶಂಖಚಕ್ರೋ ಹರಿಃ' ಎಂಬಲ್ಲಿ 'ಹರಿ' ಶಬ್ದಕ್ಕೆ ವಿಷ್ಣು, ಯಮ, ವಾಯು, ಇಂದ್ರ, ಚಂದ್ರ, ಸಿಂಹ, ಕಪಿ ಮೊದಲಾದ ಅನೇಕ ಅರ್ಥಗಳಿರಲು, ವಿಷ್ಣು ಎಂಬರ್ಥವನ್ನು ಸ್ಪಷ್ಟಪಡಿಸಲು ಸಶಂಖಚಕ್ರಃ ಎಂದು ಹೇಳಿರುವುದರಿಂದ, ಇಲ್ಲಿ ಹರಿ-ಶಬ್ದದ ವ್ಯಂಗ್ಯಾರ್ಥವು ವಿಷ್ಣುವೆಂದೇ. 'ವ್ಯಂಗ್ಯಾರ್ಥ' ವೆಂಬ ಶಬ್ದವು ಪಾರಿಭಾಷಿಕವಾದುದರಿಂದ ಕನ್ನಡದ ಕೊಂಕುನುಡಿಯಲ್ಲವೆಂಬುದನ್ನು ಗಮನಿಸಬೇಕು.

ಶ್ರುತಿಗಳ ತಾತ್ಪರ್ಯವಾದ ಆತ್ಮಸ್ವರೂಪ, ಬ್ರಹ್ಮಸ್ವರೂಪ, ಆತ್ಮ-ಬ್ರಹ್ಮರ ಐಕ್ಯ ಇವನ್ನು ತಿಳಿಸುವ ವಾಕ್ಯಗಳಿಗೆ ಮಹಾವಾಕ್ಯಗಳೆಂದು ಹೆಸರು. ಅದ್ವೈತ ವೇದಾಂತ ಸಂಪ್ರದಾಯದಲ್ಲಿ ಇವು ನಾಲ್ಕೆಂದು ಪ್ರಸಿದ್ಧವಾಗಿವೆ: ಪ್ರಜ್ಞಾನಂ ಬ್ರಹ್ಮ, 'ಪ್ರಜ್ಞಾನವೇ

ಬ್ರಹ್ಮ' (ಐ.ಉ. ೫.೩-ಋಗ್ವೇದ) ; ಅಹಂ ಬ್ರಹ್ಮಾಸ್ಮಿ, 'ನಾನು ಬ್ರಹ್ಮವಾಗಿದ್ದೇನೆ' (ಬೃ.ಉ. ೧.೪.೧೦-ಯಜುರ್ವೇದ) ; ತತ್ ತ್ವಮ್ ಅಸಿ, 'ಅದು ನೀನಾಗಿದ್ದೀಯೆ' (ಛಾಂ.ಉ. ೬.೮.೭-ಸಾಮವೇದ) ; ಅಯಮಾತ್ಮಾ ಬ್ರಹ್ಮ, 'ಈ ಆತ್ಮನುಬ್ರಹ್ಮವು' (ಮಾಂ.ಉ. ೨-ಅಥರ್ವಣವೇದ).

ಈ ಮಹಾವಾಕ್ಯಗಳಿಗೆ ವಾಚ್ಯಾರ್ಥ ಲಕ್ಷ್ಯಾರ್ಥ ಎರಡೂ ಸಾಧ್ಯ. ಎರಡೂ ಚೈತನ್ಯವನ್ನೇ ಸೂಚಿಸುತ್ತವೆ. ಆದರೆ ವಾಚ್ಯಾರ್ಥವು ಉಪಾಧಿಸಹಿತವಾದ ಚೈತನ್ಯವನ್ನೂ ಲಕ್ಷ್ಯಾರ್ಥವು ನಿರುಪಾಧಿಕ ಚೈತನ್ಯವನ್ನೂ ಸೂಚಿಸುತ್ತದೆ. ಇದನ್ನು ಸ್ಪಷ್ಟಪಡಿಸಲು ಉದಾಹರಣೆಯೊಂದನ್ನೂ ಕೊಟ್ಟಿದೆ. ಕಾದ ಕಬ್ಬಿಣದ ಗುಂಡನ್ನು ಮುಟ್ಟಿದಾಗ ಕೈ ಸುಡುತ್ತದೆ. ಕಬ್ಬಿಣದ ಗುಂಡು ಕೈ ಸುಟ್ಟಿತು ಎಂದು ಹೇಳಿದಾಗಲಾಗಲೀ ಅಥವಾ ಕಾದ ಕಬ್ಬಿಣದ ಗುಂಡಿನಲ್ಲಿರುವ ಶಾಖವು ಕೈಯನ್ನು ಸುಟ್ಟಿತು ಎಂದು ಹೇಳಿದಾಗಲಾಗಲೀ ಸುಡುವುದು ಬೆಂಕಿಯ ಅಂಶವೇ ವಿನಾ ಕಬ್ಬಿಣದ ಅಂಶವಲ್ಲ. ಮೊದಲನೆಯದು ವ್ಯಾವಹಾರಿಕ ಭಾಷೆ. ಇದರಲ್ಲಿ ಬೆಂಕಿಯ ಅಂಶವನ್ನೂ ಕಬ್ಬಿಣದ ಅಂಶವನ್ನೂ ಬೆರಸಿದೆ. ಎರಡನೆಯದು ತರ್ಕಬದ್ಧವಾದ ಭಾಷೆ. ಇದರಲ್ಲಿ ವಸ್ತುವನ್ನೂ ಉಪಾಧಿಯನ್ನೂ ಬೆರಸಿಲ್ಲ.

ಹಾಗೆಯೇ 'ಅದು ನೀನಾಗಿರುವೆ' (ತತ್ ತ್ವಮ್ ಅಸಿ) ಎಂಬ ಮಹಾವಾಕ್ಯದಲ್ಲಿ 'ಅದು' ಎಂಬ ಶಬ್ದವು ಬ್ರಹ್ಮವನ್ನೂ 'ನೀನು' ಎಂಬ ಶಬ್ದವು ಜೀವಾತ್ಮನನ್ನೂ ಸೂಚಿಸುತ್ತವೆ. 'ಜೀವಾತ್ಮನೇ ಬ್ರಹ್ಮವು' ಎಂಬುದು ವಾಚ್ಯಾರ್ಥ. ಇದು ಆತ್ಮಚೈತನ್ಯವನ್ನೂ ಅದಕ್ಕೆ ಜೀವತ್ವವನ್ನುಂಟುಮಾಡಿರುವ ಶರೀರ ಇಂದ್ರಿಯ ಮನಸ್ಸು ಮೊದಲಾದ ಉಪಾಧಿಗಳನ್ನೂ ಬೇರ್ಪಡಿಸದೆ ಹೇಳಿದ ಮಾತು. 'ಜೀವಾತ್ಮನಲ್ಲಿರುವ ಚೈತನ್ಯಾಂಶವೇ—ಕಬ್ಬಿಣದ ಗುಂಡನ್ನೂ ಬೆಂಕಿಯನ್ನೂ ಬೇರ್ಪಡಿಸಿದಂತೆ—(ಜಗತ್ಕರ್ತೃವಾದ)ಬ್ರಹ್ಮನ ಚೈತನ್ಯಾಂಶವು' ಎಂಬುದು ಲಕ್ಷ್ಯಾರ್ಥ. ಇಲ್ಲಿ ಉಪಾಧಿಯಿಂದ ವಸ್ತುವನ್ನು ಬೇರ್ಪಡಿಸಿದೆ. ಎರಡು ಅರ್ಥಗಳೂ ಮೊತ್ತದಲ್ಲಿ ಚೈತನ್ಯವನ್ನೇ ಹೇಳುತ್ತವೆ.

### ಅಜ್ಞಾನದ ಎರಡು ಶಕ್ತಿಗಳು ಮತ್ತು ಅವುಗಳ ಕಾರ್ಯಗಳು

**ಅಸ್ಯ ಅಜ್ಞಾನಸ್ಯ ಆವರಣ–ವಿಕ್ಷೇಪ–ನಾಮಕಮ್ ಅಸ್ತಿ ಶಕ್ತಿದ್ವಯಮ್ ॥ ೫೧ ॥**

೫೧. ಈ ಅಜ್ಞಾನಕ್ಕೆ ಆವರಣ ಮತ್ತು ವಿಕ್ಷೇಪ ಎಂಬ ಹೆಸರಿನ ಎರಡು ಶಕ್ತಿಗಳಿವೆ.

ಸ್ವಪ್ರಕಾಶನೂ ಚಿದ್ರೂಪನೂ ಆದ ಆತ್ಮನಿಗೆ ತನ್ನ ಸ್ವರೂಪದ ಮರೆವು ಮತ್ತು ದೇಹಾದಿ ಪ್ರಾಕೃತವಸ್ತುಗಳೊಡನೆ ತಾದಾತ್ಮ್ಯ ಇವು ಹೇಗೆ ಉಂಟಾದವು? ಅಸಂಗನೂ ಉದಾಸೀನನೂ ಆದ ಆತ್ಮನಿಂದ ಆಕಾಶಾದಿ ಜಗತ್ತು ಹೇಗೆ ಉದ್ಭವಿಸಿತು? ಈ ವಿರೋಧವನ್ನು ಪರಿಹರಿಸಲು ಈ ಪ್ರಕರಣವನ್ನು ಪ್ರಾರಂಭಿಸಿದೆ.

ಯಾವುದು ಆತ್ಮನ ಸಚ್ಚಿದಾನಂದಸ್ವರೂಪವನ್ನು ಆವರಿಸುವುದೋ, ಮುಚ್ಚು ವುದೋ ಅದು 'ಆವರಣಶಕ್ತಿ'. ಯಾವುದು ಜಗತ್ತನ್ನು ಆತ್ಮನಿಂದ ಹೊರಕ್ಕೆ ಎಸೆಯು ವುದೋ (ವಿಕ್ಷಿಪತಿ), ಎಂದರೆ ಆತ್ಮನಿಂದ ಜಗತ್ತು ಹೊರಬರುವಂತೆ ಅಥವಾ ಸ್ಪಷ್ಟ ವಾಗುವಂತೆ ತೋರ್ಪಡಿಸುವುದೋ ಅದು 'ವಿಕ್ಷೇಪಶಕ್ತಿ'. ಇವೆರಡೂ ಒಂದೇ ಅಜ್ಞಾನದ ಎರಡು ಮುಖಗಳೇ ವಿನಾ ಸ್ವತಂತ್ರಶಕ್ತಿಗಳಲ್ಲ.

**ಆವರಣಶಕ್ತಿಃ ತಾವದ್, ಅಲ್ಪಃ ಅಪಿ ಮೇಘಃ ಅನೇಕ-ಯೋಜನಾಯತಮ್ ಆದಿತ್ಯಮಂಡಲಮ್ ಅವಲೋಕಯಿತೃ-ನಯನಪಥ-ಪಿಧಾಯಕತಯಾ ಯಥಾ ಆಚ್ಛಾದಯತಿ ಇವ ತಥಾ ಅಜ್ಞಾನಂ ಪರಿಚ್ಛಿನ್ನಮಪಿ ಆತ್ಮಾನಮ್ ಅಪರಿಚ್ಛಿನ್ನಮ್ ಅಸಂಸಾರಿ-ಣಮ್ ಅವಲೋಕಯಿತೃ-ಬುದ್ಧಿಪಿಧಾಯಕತಯಾ ಆಚ್ಛಾದಯತಿ ಇವ ತಾದೃಶಂ ಸಾಮರ್ಥ್ಯಮ್ । ತದುಕ್ತಮ್—**

**'ಘನಚ್ಛನ್ನದೃಷ್ಟಿರ್ಘನಚ್ಛನ್ನಮರ್ಕಂ**
**ಯಥಾ ಮನ್ಯತೇ ನಿಷ್ಪ್ರಭಂ ಚಾತಿಮೂಢಃ ।**
**ತಥಾ ಬದ್ಧವದ್ಭಾತಿ ಯೋ ಮೂಢದೃಷ್ಟೇಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥' ಇತಿ**
**(ಹಸ್ತಾಮಲಕಮ್ ೧೦) ॥ ೫೨ ॥**

ಮೊದಲನೆಯದಾಗಿ ಆವರಣಶಕ್ತಿ : ಮೋಡವು ಚಿಕ್ಕದಾಗಿದ್ದರೂ ಅನೇಕ ಯೋಜನಗಳಷ್ಟು ವಿಸ್ತಾರವುಳ್ಳ ಸೂರ್ಯಮಂಡಲವನ್ನು, ನೋಡುತ್ತಿ ರುವವನ ದೃಷ್ಟಿಪಥವನ್ನು ಮುಚ್ಚುವುದರ ಮೂಲಕ ಹೇಗೆ ಮುಚ್ಚಿಬಿಡುವಂತೆ ಕಾಣುವುದೋ, ಹಾಗೆಯೇ, ಪರಿಮಿತವಾಗಿದ್ದರೂ ಅಜ್ಞಾನವು ಅಪರಿಮಿತನೂ ಅಸಂಸಾರಿಯೂ ಆದ ಆತ್ಮನನ್ನು, ನೋಡುತ್ತಿರುವವನ ಬುದ್ಧಿಯನ್ನು

ಮುಚ್ಚುವುದರ ಮೂಲಕ ಮುಚ್ಚಿಬಿಡುವಂತೆ ಮಾಡುವುದೊ, ಅಂತಹ ಸಾಮರ್ಥ್ಯ. ಅದನ್ನು ಹೀಗೆ ಹೇಳಿದೆ: "ಅತಿ ಮೂಢನಾದ ಒಬ್ಬನು ತನ್ನ ದೃಷ್ಟಿಯು ಮೋಡದಿಂದ ಆವರಿಸಲ್ಪಟ್ಟಿರಲು,(ಹೇಗೆ) ಮೋಡದಿಂದ ಮುಚ್ಚಲ್ಪಟ್ಟಿರುವ ಸೂರ್ಯನನ್ನು ಪ್ರಕಾಶರಹಿತನೆಂದು ಭಾವಿಸುತ್ತಾನೆಯೋ, ಹಾಗೆಯೇ ಮೂಢಬುದ್ಧಿಗೆ ಯಾವನು ಬದ್ಧನಂತೆ ಗೋಚರಿಸುವನೋ ಆ, ನಿತ್ಯಜ್ಞಾನ ಸ್ವರೂಪನಾದ, ಆತ್ಮನೇ ನಾನು!" (ಹಸ್ತಾಮಲಕಸ್ತೋತ್ರ ೧೦).

ಆತ್ಮನು ಅಪರಿಚ್ಛಿನ್ನನು, ಸ್ವಪ್ರಕಾಶನು, ಚಿದ್ರೂಪನು, ಅಖಂಡ ಪರಿಪೂರ್ಣ ಸ್ವರೂಪನು. ಅಜ್ಞಾನವಾದರೋ ಪರಿಚ್ಛಿನ್ನ, ಜಡ, ತಮೋರೂಪ. ಈ ಅಜ್ಞಾನವು ಅಂತಹ ಆತ್ಮನನ್ನು ಹೇಗೆ ಮುಚ್ಚಲು ಸಾಧ್ಯ? ಈ ಸಂಶಯವನ್ನು ದೃಷ್ಟಾಂತವೊಂದರ ಮೂಲಕ ನಿವಾರಿಸುತ್ತಿದ್ದಾರೆ.

ಮೋಡವು ಮುಚ್ಚುವುದು ಸೂರ್ಯನನ್ನಲ್ಲ, ಅದನ್ನು ನೋಡುತ್ತಿರುವವನ ದೃಷ್ಟಿಪಥವನ್ನು. ಸೂರ್ಯನಾದರೋ ಸದಾ ಪ್ರಕಾಶಿಸುತ್ತಲೇ ಇರುವನು. ಹಾಗೆಯೇ ಆತ್ಮನೂ ಸದಾ ಪ್ರಕಾಶಿಸುತ್ತಿದ್ದರೂ ಅಜ್ಞಾನದ ಆವರಣಶಕ್ತಿಯು ನಮ್ಮ ಬುದ್ಧಿಯನ್ನು ಮುಚ್ಚಿರುವುದರಿಂದ ಅವನು ನಮ್ಮ ಅನುಭವಕ್ಕೆ ಗೋಚರವಾಗುತ್ತಿಲ್ಲ. ಆತ್ಮನಿಗೆ ಬಂಧನವಾಗಲಿ ಮೋಕ್ಷವಾಗಲಿ ಇಲ್ಲ. ಬುದ್ಧಿಗೆ ಕವಿದಿರುವ ಅಜ್ಞಾನದಿಂದ ಹಾಗೆ ತೋರುತ್ತದೆಯಷ್ಟೆ.

**ಅನಯಾ ಏವ ಆವರಣಶಕ್ತ್ಯಾ ಅವಚ್ಛಿನ್ನಸ್ಯ ಆತ್ಮನಃ ಕರ್ತೃತ್ವಭೋಕ್ತೃತ್ವ-ಸುಖದುಃಖಮೋಹಾತ್ಮಕ-ತುಚ್ಛಸಂಸಾರ-ಭಾವನಾ ಅಪಿ ಸಂಭಾವ್ಯತೇ ಯಥಾ ಸ್ವ-ಅಜ್ಞಾನೇನ ಆವೃತಾಯಾಂ ರಜ್ಜ್ವಾಂ ಸರ್ಪತ್ವಸಂಭಾವನಾ ॥೫೩॥**

೫೩. ಈ ಆವರಣಶಕ್ತಿಯಿಂದಲೇ ಸೀಮಿತವಾದಂತೆ (ತೋರುವ) ಆತ್ಮನಿಗೆ ಕರ್ತೃತ್ವ, ಭೋಕ್ತೃತ್ವ, ಸುಖ, ದುಃಖ, ಮೋಹ ಇವುಗಳ ಸ್ವರೂಪವನ್ನುಳ್ಳ ತುಚ್ಛಸಂಸಾರಭಾವನೆಯೂ ಕೂಡ—ತನ್ನ ಅಜ್ಞಾನದಿಂದ ಆವೃತವಾದ ಹಗ್ಗದಲ್ಲಿ ಹಾವೆಂಬ ಭಾವನೆಯು ಸಂಭವಿಸುವಂತೆ—ಸಂಭವಿಸುತ್ತದೆ.

ಹಗ್ಗವು ಅಜ್ಞಾನದ ಕಾರ್ಯ. ವಸ್ತುತಃ ಅವೆರಡೂ ಒಂದೇ. ಆದ್ದರಿಂದ ಅಜ್ಞಾನವು ಹಗ್ಗವನ್ನು ಆವರಿಸಲು ಸಾಧ್ಯವೇ ಇಲ್ಲ. ಅದು ಆವರಿಸುತ್ತಿರುವುದು,

ಹಗ್ಗವನ್ನು ನೋಡುತ್ತಿರುವವನ ಜ್ಞಾನವನ್ನು. ಇದನ್ನು ಈಗಾಗಲೇ ಮೋಡದ
ಉದಾಹರಣೆಯಿಂದ ವಿವರಿಸಿದೆ. ಹಾಗೆಯೇ ಅಜ್ಞಾನವು, ಆವರಣಶಕ್ತಿಯ ಮೂಲಕ
ಆತ್ಮನ ಅಸಂಗತ್ವ ಚಿದ್ರೂಪತ್ವ ಮೊದಲಾದ ಗುಣಗಳನ್ನು ಮರೆಮಾಡಿ ಅವನಲ್ಲಿ ಇಲ್ಲ
ದಿರುವ ಕರ್ತೃತ್ವ ಭೋಕ್ತೃತ್ವ ಮೊದಲಾದುವನ್ನು ಅವನಲ್ಲಿ ಆರೋಪಿಸಿ ಅವನನ್ನು
ಸಂಸಾರಿಜೀವನನ್ನಾಗಿ ಪರಿವರ್ತಿಸಿಬಿಡುತ್ತದೆ! ಇದು ಹೇಗೆ ಸಾಧ್ಯ ಎಂಬುದನ್ನು
ವಿವರಿಸುವುದಕ್ಕಾಗಿ ರಜ್ಜು-ಸರ್ಪ-ದೃಷ್ಟಾಂತವನ್ನು ಕೊಟ್ಟಿದೆ. ನಸುಗತ್ತಲೆಯು
ಹಗ್ಗದ ಸ್ವರೂಪವನ್ನು ಮರೆಮಾಡುವುದಲ್ಲದೆ ಅದನ್ನು ಹಾವಿನಂತೆ ತೋರ್ಪಡಿಸು
ತ್ತದೆ. ಈ ಎರಡನೆಯ ಅಂಶವನ್ನು ವಿಕ್ಷೇಪಶಕ್ತಿಯೆಂದು ಕರೆಯುತ್ತಾರೆ. ಇದನ್ನು
ಮುಂದಿನ ಕಂಡಿಕೆಯಲ್ಲಿ ವಿವರಿಸಿದೆ.

**ವಿಕ್ಷೇಪಶಕ್ತಿಸ್ತು ಯಥಾ ರಜ್ಜ್ವಜ್ಞಾನಂ ಸ್ವಾವೃತರಜ್ಜೌ
ಸ್ವಶಕ್ತ್ಯಾ ಸರ್ಪಾದಿಕಮ್ ಉದ್ಭಾವಯತಿ, ಏವಮ್ ಅಜ್ಞಾನಮಪಿ
ಸ್ವಾವೃತಾತ್ಮನಿ ವಿಕ್ಷೇಪಶಕ್ತ್ಯಾ ಆಕಾಶಾದಿಪ್ರಪಂಚಮ್ ಉದ್ಭಾವ-
ಯತಿ, ತಾದೃಶಂ ಸಾಮರ್ಥ್ಯಮ್ । ತದುಕ್ತಮ್– 'ವಿಕ್ಷೇಪಶಕ್ತಿ
ರ್ಲಿಂಗಾದಿ-ಬ್ರಹ್ಮಾಂಡಾಂತಂ ಜಗತ್ ಸೃಜೇತ್' (ವಾಕ್ಯಸುಧಾ ೧೩)
ಇತಿ ॥೫೪॥**

೫೫. ವಿಕ್ಷೇಪಶಕ್ತಿಯೆಂದರೆ—ಹೇಗೆ ಹಗ್ಗದ ಬಗೆಗೆ ಇರುವ ಅಜ್ಞಾ
ನವು[1] ತನ್ನಿಂದ ಮುಚ್ಚಲ್ಪಟ್ಟಿರುವ ಹಗ್ಗದಲ್ಲಿ ತನ್ನ ಶಕ್ತಿಯಿಂದ ಹಾವೇ ಮೊದ
ಲಾದುವನ್ನು ಉಂಟುಮಾಡುತ್ತದೆಯೋ ಹಾಗೆಯೇ ಅಜ್ಞಾನವು ಕೂಡ ತನ್ನಿಂದ
ಮುಚ್ಚಲ್ಪಟ್ಟಿರುವ ಆತ್ಮನಲ್ಲಿ ವಿಕ್ಷೇಪಶಕ್ತಿಯ ಮೂಲಕ ಆಕಾಶಾದಿ ಪ್ರಪಂಚ
ವನ್ನು[2] ಸೃಷ್ಟಿಸುವಂಥ ಸಾಮರ್ಥ್ಯ. ಅದು (ಹೀಗೆ) ಹೇಳಲ್ಪಟ್ಟಿದೆ : "ವಿಕ್ಷೇಪ
ಶಕ್ತಿಯು ಲಿಂಗಶರೀರದಿಂದ ಬ್ರಹ್ಮಾಂಡದ ವರೆಗಿನ ಜಗತ್ತನ್ನು ಸೃಷ್ಟಿಸುತ್ತದೆ"
(ವಾಕ್ಯಸುಧಾ ೧೩).[3]

ಅಸಂಗನೂ ಚಿದ್ರೂಪನೂ ಆದ ಆತ್ಮನು ಈ ಚರಾಚರ ಜಗತ್ತನ್ನು ಹೇಗೆ
ಸೃಷ್ಟಿಸಿಯಾನು? ಈ ತೊಡಕನ್ನು ಬಿಡಿಸುವ ಸಲುವಾಗಿ ಅಜ್ಞಾನದ ವಿಕ್ಷೇಪಶಕ್ತಿ
ಯನ್ನು ವಿವರಿಸಲಾಗುತ್ತಿದೆ.

1 'ರಜ್ಜ್ವಜ್ಞಾನಂ' ಎಂಬ ಪದವನ್ನು ವ್ಯಾವಹಾರಿಕ ದೃಷ್ಟಿಯಿಂದ ಉಪಯೋ
ಗಿಸಿದೆ. ಸರ್ವವ್ಯಾಪಿಯಾದ ಚೈತನ್ಯವು ಉಪಾಧಿಯಾದ ಹಗ್ಗದಿಂದ ಸೀಮಿತವಾದಂ

ಕಂಡಾಗ ಅದನ್ನು ಹಗ್ಗ ಎಂದು ವ್ಯವಹರಿಸುತ್ತೇವೆ. ಅಜ್ಞಾನವೆಂಬ ಪದವು, ಯಾವ ಚೈತನ್ಯವು ಹಗ್ಗಕ್ಕೆ ಆಧಾರವಾಗಿದೆಯೋ ಅದಕ್ಕೆ ಸಂಬಂಧಿಸಿದ್ದು.

2 ತೈತ್ತಿರೀಯೋಪನಿಷತ್ತಿನಲ್ಲಿ (೨.೧) ಸೃಷ್ಟಿಕ್ರಮವನ್ನು ಹೀಗೆ ವಿವರಿಸಿದೆ: ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ । ಆಕಾಶಾದ್ವಾಯುಃ । ವಾಯೋ-ರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀ-ಭ್ಯೋಽನ್ನಮ್। ಅನ್ನಾತ್ಪುರುಷಃ, 'ಆ ಈ ಆತ್ಮನಿಂದ ಆಕಾಶವು ಉತ್ಪನ್ನವಾಯಿತು. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯಿಂದ ಸಸ್ಯಗಳು, ಸಸ್ಯಗಳಿಂದ ಅನ್ನ, ಅನ್ನದಿಂದ ಪುರುಷ-ಹೀಗೆ ಉತ್ಪತ್ತಿಯ ಕ್ರಮ).'

3 ಶ್ರೀಶಂಕರಾಚಾರ್ಯರ ದೃಗ್-ದೃಶ್ಯ-ವಿವೇಕವನ್ನು ವಾಕ್ಯಸುಧಾ ಎಂದೂ ಕರೆಯುವುದುಂಟು. ಇದು ಭಾರತೀತೀರ್ಥರ ಕೃತಿ ಎಂದು ಕೆಲವರ ಮತ.

ಆತ್ಮನು ಅಸಂಗನೂ ಚಿದ್ರೂಪನೂ ಆದರೂ ಆವರಣ-ವಿಕ್ಷೇಪ-ಶಕ್ತಿಸಹಿತವಾದ ಅಜ್ಞಾನವನ್ನು ಉಪಾಧಿಯಾಗಿ ಹೊಂದಿದಾಗ ಜಗತ್ಕಾರಣವೆಂದು ಪರಿಗಣಿಸಲ್ಪಡು ತ್ತಾನೆ-ಎಂಬುದು ಒಟ್ಟಭಿಪ್ರಾಯ. 'ವಿದ್ವನ್ಮನೋರಂಜನೀ' ವ್ಯಾಖ್ಯಾನಕಾರರಾದ ಶ್ರೀರಾಮತೀರ್ಥರು ಈ ಸಂದರ್ಭದಲ್ಲಿ ಸರ್ವಜ್ಞಾತ್ಮಮುನಿಗಳ 'ಸಂಕ್ಷೇಪಶಾರೀರಕ'ದ (೧.೨೦) ಶ್ಲೋಕವೊಂದನ್ನು ಉದ್ಧರಿಸಿದ್ದಾರೆ; ಆಚ್ಛಾದ್ಯ ವಿಕ್ಷಿಪತಿ ಸಂಸ್ಫುರದಾತ್ಮ-ರೂಪಂ, ಜೀವೇಶ್ವರತ್ವಜಗದಾಕೃತಿಭಿರ್ಮೃಷೈವ । ಅಜ್ಞಾನಮಾವರಣವಿಭ್ರಮಶಕ್ತಿ ಯೋಗಾತ್, ಆತ್ಮತ್ವಮಾತ್ರವಿಷಯಾಶ್ರಯತಾಬಲೇನ ॥, 'ಆತ್ಮನನ್ನು ಮಾತ್ರವೇ ವಿಷಯವಾಗಿಯೂ ಆಶ್ರಯವಾಗಿಯೂ ಹೊಂದಿ ಅದರ ಬಲದಿಂದ(ಹಾಗೆಯೇ ತಾನು) ಆವರಣ ವಿಕ್ಷೇಪಶಕ್ತಿಗಳಿಂದ ಕೂಡಿರುವ ಕಾರಣ, ಅಜ್ಞಾನವು ಪ್ರಕಾಶಮಾನವಾದ ಆತ್ಮರೂಪವನ್ನು ಆವರಿಸಿ ಸುಳ್ಳುಸುಳ್ಳಾಗಿಯೇ ಜೀವ ಈಶ್ವರ ಜಗತ್ತು ಮೊದಲಾದ ರೂಪಗಳಿಂದ ವಿಕ್ಷೇಪವನ್ನುಂಟುಮಾಡುತ್ತದೆ.'

**ಶಕ್ತಿದ್ವಯವದ್-ಅಜ್ಞಾನ-ಉಪಹಿತಂ ಚೈತನ್ಯಂ ಸ್ವಪ್ರಧಾನ-ತಯಾ ನಿಮಿತ್ತಂ ಸ್ವೋಪಾಧಿಪ್ರಧಾನತಯಾ ಉಪಾದಾನಂ ಚ ಭವತಿ ॥೫೫॥**

೫೫. ಎರಡು ಶಕ್ತಿಗಳಿಂದ ಕೂಡಿದ ಅಜ್ಞಾನವನ್ನು ಉಪಾಧಿಯಾಗಿ ಹೊಂದಿರುವ ಚೈತನ್ಯವು ತನ್ನನ್ನು ಮುಖ್ಯವಾಗಿ ಪರಿಗಣಿಸಿದಾಗ (ಜಗತ್ತಿಗೆ)

ನಿಮಿತ್ತಕಾರಣವೂ, ತನ್ನ ಉಪಾಧಿಯಾದ (ಅಜ್ಞಾನವನ್ನು) ಮುಖ್ಯವಾಗಿ
ಪರಿಗಣಿಸಿದಾಗ ಉಪಾದಾನಕಾರಣವೂ ಆಗುತ್ತದೆ.

ಮಡಕೆಗೆ ಮಣ್ಣು ಉಪಾದಾನಕಾರಣ, ಕುಂಬಾರನು ನಿಮಿತ್ತಕಾರಣ. ಬಟ್ಟೆಗ
ಹತ್ತಿಯು ಅಥವಾ ನೂಲು ಉಪಾದಾನಕಾರಣ, ನೇಕಾರನು ನಿಮಿತ್ತಕಾರಣ. ಹಾಗ
ಈ ಜಗತ್ತಿಗೆ ಉಪಾದಾನಕಾರಣವಾವುದು? ನಿಮಿತ್ತಕಾರಣವಾವುದು? ಚೈತನ್ಯವ
ಕೇವಲ ನಿಮಿತ್ತಕಾರಣವೇ ಅಥವಾ ಉಪಾದಾನಕಾರಣವೇ ಅಥವಾ ಎರಡೂ ಆಗಲ
ಸಾಧ್ಯವೇ? ಚೈತನ್ಯವು ಅಭಿನ್ನ-ನಿಮಿತ್ತ-ಉಪಾದಾನ-ಕಾರಣ ಎಂಬುದು ವೇದಾಂತದ
ನಿಲವು. ಸೃಷ್ಟಿಕಾರ್ಯದಲ್ಲಿ ಅಜ್ಞಾನಸಹಿತವಾದ ಚೈತನ್ಯವನ್ನೇ ಪ್ರಧಾನವೆಂದು
ಪರಿಗಣಿಸಿದಾಗ, ಅದು ನಿಮಿತ್ತಕಾರಣವೆನಿಸುತ್ತದೆ. ಉಪಾಧಿಯಾದ ಅಜ್ಞಾನವನ್ನು
ಪ್ರಧಾನವಾಗಿ ಪರಿಗಣಿಸಿದಾಗ, ಈ ಅಜ್ಞಾನವೇ ಉಪಾದಾನಕಾರಣವಾದರೂ ಚೈತನ್ಯದ
ಆಧಾರವಿಲ್ಲದೆ ಅದಿರಲು ಸಾಧ್ಯವಿಲ್ಲದ್ದರಿಂದ ಚೈತನ್ಯವೂ ಉಪಾದಾನಕಾರಣವೆನಿಸುತ್ತದೆ

ಈ ಜಗತ್ತಿನಲ್ಲಿ ಸಾಮಾನ್ಯವಾಗಿ ಉಪಾದಾನ ಮತ್ತು ನಿಮಿತ್ತ ಬೇರೆಬೇರೆ
ಯಾಗಿರುತ್ತವೆ. ಉಪಾದಾನವು ಜಡ, ನಿಮಿತ್ತವು ಚೇತನ. ಆದರೆ ಅವೆರಡೂ
ಯಾವಾಗಲೂ ಬೇರೆ ಬೇರೆಯಾಗಿರಲೇಬೇಕೆಂಬ ನಿಯಮವೇನೂ ಇಲ್ಲ. ಇದನು
ಮುಂದಿನ ಕಂಡಿಕೆಯಲ್ಲಿ ಉದಾಹರಣೆಯ ಮೂಲಕ ಸ್ಪಷ್ಟಪಡಿಸಲಾಗಿದೆ.

**ಯಥಾ ಲೂತಾ ತಂತುಕಾರ್ಯಂ ಪ್ರತಿ ಸ್ವಪ್ರಧಾನತಯಾ
ನಿಮಿತ್ತಂ ಸ್ವಶರೀರಪ್ರಧಾನತಯಾ ಉಪಾದಾನಂ ಚ ಭವತಿ । ೫೬॥**

೫೬. ಉದಾಹರಣೆಗೆ : ಜೇಡರಹುಳುವು ತನ್ನ ಬಲೆಯ ವಿಷಯದಲ್ಲಿ
ತನ್ನನ್ನು ಮುಖ್ಯವಾಗಿ ಪರಿಗಣಿಸಿದಾಗ ನಿಮಿತ್ತಕಾರಣವೆನಿಸುತ್ತದೆ ಮತ್ತು ತನ್ನ
ಶರೀರವನ್ನು ಮುಖ್ಯವಾಗಿ ಪರಿಗಣಿಸಿದಾಗ ಉಪಾದಾನಕಾರಣವೆನಿಸುತ್ತದೆ.

ಜೇಡರಹುಳುವು ಬಲೆಯನ್ನು ತಾನೇ ತನ್ನಿಂದ ಸೃಜಿಸುತ್ತದೆ. ಜೀವವಿಲ್ಲದ
ಶರೀರವು ತನ್ನಿಂದ ತಾನೇ ಬಲೆಯನ್ನು ಉಂಟುಮಾಡಲಾರದು. ಶರೀರದ ಸಹಾಯ
ವಿಲ್ಲದೆ ಕೇವಲ ಜೀವವೂ ಆ ಕಾರ್ಯವನ್ನು ಸಾಧಿಸಲಾರದು. ಅವೆರಡೂ ಇದ್ದರೇನೆ
ಬಲೆಯ ಉತ್ಪಾದನೆಯು ಸಾಧ್ಯ. ಬಲೆಯನ್ನು ನಿರ್ಮಿಸಲು ಬೇಕಾದ ವಸ್ತುವು ಅದರ
ಶರೀರದಿಂದಲೇ ಒದಗುವುದರಿಂದ, ಅದು ಉಪಾದಾನಕಾರಣ. ನಿರ್ಮಾಣಕಾರ್ಯವು
ಅದರಿಂದಲೇ ಜರುಗುವುದರಿಂದ ಅದು ನಿಮಿತ್ತಕಾರಣವೂ ಹೌದು.

ಇಲ್ಲಿ ಕೊಟ್ಟಿರುವ ಜೇಡರಹುಳುವಿನ ದೃಷ್ಟಾಂತದ ಮೂಲ ಮುಂಡಕೋಪ ಪತ್ತಿನಲ್ಲಿದೆ (೧.೧.೭) :

ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ।
ಯಥಾ ಸತಃ ಪುರುಷಾತ್ ಕೇಶಲೋಮಾನಿ
ತಥಾऽಕ್ಷರಾತ್ ಸಂಭವತೀಹ ವಿಶ್ವಮ್ ॥

'ಹೇಗೆ ಜೇಡರಹುಳುವು (ನೂಲುಗಳನ್ನು) ಹೊರಕ್ಕೆ ತಂದು ಪುನಃ ಒಳಕ್ಕೆ ಗೆದುಕೊಳ್ಳುತ್ತದೆಯೋ ಹೇಗೆ ಭೂಮಿಯಲ್ಲಿ ಸಸ್ಯಗಳು ಹುಟ್ಟುತ್ತವೆಯೋ ೇಗೆ ಜೀವಂತನಾದ ಮನುಷ್ಯನಿಂದ ಕೇಶಲೋಮಗಳು ಬೆಳೆಯುತ್ತವೆಯೋ ಾಗೆಯೇ ಅಕ್ಷರ (ಬ್ರಹ್ಮ)ದಿಂದ ಇಲ್ಲಿ ಸಮಸ್ತ ಜಗತ್ತೂ ಉಂಟಾಗುತ್ತದೆ.'

ಬ್ರಹ್ಮಸೂತ್ರಗಳು (೧.೪.೨೩) 'ಪ್ರಕೃತಿಶ್ಚ ಪ್ರತಿಜ್ಞಾ-ದೃಷ್ಟಾಂತ-ಅನುಪ-ೋಧಾತ್' ಎಂಬ ಸೂತ್ರದಲ್ಲಿ ಬ್ರಹ್ಮವು ಅಭಿನ್ನನಿಮಿತ್ತೋಪಾದಾನಕಾರಣವೆಂಬ ಾದವನ್ನು ಮುಂದಿಡುತ್ತವೆ.

### ಸೃಷ್ಟಿಕ್ರಮ—ಸೂಕ್ಷ್ಮಭೂತಗಳು

**ತಮಃಪ್ರಧಾನ-ವಿಕ್ಷೇಪಶಕ್ತಿಮದ್-ಅಜ್ಞಾನೋಪಹಿತಚೈತನ್ಯಾತ್ ಆಕಾಶಃ, ಆಕಾಶಾದ್ವಾಯುಃ, ವಾಯೋರಗ್ನಿಃ ಅಗ್ನೇರಾಪಃ, ಅದ್ಭ್ಯಃ ಪೃಥಿವೀ ಚ ಉತ್ಪದ್ಯತೇ, 'ಏತಸ್ಮಾದಾತ್ಮನ ಆಕಾಶಃ ಸಂಭೂತಃ' (ತೈ. ಉ. ೨.೧.೧) ಇತ್ಯಾದಿಶ್ರುತೇಃ ॥೫೭॥**

೫೭. ತಮೋಗುಣವನ್ನು ಪ್ರಧಾನವಾಗಿ ಹೊಂದಿರುವ ವಿಕ್ಷೇಪಶಕ್ತಿಯಿಂದೊಡಗೂಡಿರುವ ಅಜ್ಞಾನವನ್ನು ಉಪಾಧಿಯಾಗಿ ಹೊಂದಿರುವ ಚೈತನ್ಯನಿಂದ ಆಕಾಶವೂ, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಜಲವೂ, ಜಲದಿಂದ ಪೃಥ್ವಿಯೂ ಹುಟ್ಟುತ್ತವೆ. 'ಈ ಆತ್ಮನಿಂದ ಆಕಾಶವು ಉಂಟಾಯಿತು' (ತೈ.ಉ. ೨.೧.೧) ಇತ್ಯಾದಿ[1] ಶ್ರುತಿವಾಕ್ಯದಿಂದ (ಹೀಗೆ ತಿಳಿದುಬರುತ್ತದೆ).

ಆವರಣ ಮತ್ತು ವಿಕ್ಷೇಪ ಎಂಬ ಎರಡು ಶಕ್ತಿಗಳಿಂದೊಡಗೂಡಿದ ಅಜ್ಞಾನವನ್ನು ಉಪಾಧಿಯಾಗಿ ಹೊಂದಿರುವ ಚೈತನ್ಯವೇ (ಬ್ರಹ್ಮವೇ) ಜಗತ್ತಿಗೆ ಅಭಿನ್ನ-ನಿಮಿತ್ತ-

ಉಪಾದಾನ-ಕಾರಣ ಎಂದು ಹೇಳಿದ್ದಾಯಿತು. ಈಗ ಬ್ರಹ್ಮದಿಂದ ಈ ಜಗತ್ತು ಹೇ
ಉತ್ಪನ್ನವಾಗುತ್ತದೆ ಎಂಬುದರ ವಿವರಣೆಯನ್ನು ಕೊಡಲಾಗುತ್ತಿದೆ.

ಜಡವಾದ ಪ್ರಧಾನವೇ ಜಗತ್ತಿನ ಮೂಲಕಾರಣವೆಂಬುದು ಸಾಂಖ್ಯರ ಮತ
ಆಕಾಶವೇ ಮೊದಲಾದ ಒಂಬತ್ತು ದ್ರವ್ಯಗಳನ್ನು ನಿತ್ಯವೆಂದು ಪರಿಗಣಿಸಿರುವ ನೈಯ
ಯಿಕರು ಅವುಗಳ ಸಂಯೋಗದಿಂದ ಜಗತ್ತು ಉತ್ಪನ್ನವಾಯಿತೆನ್ನುತ್ತಾರೆ. ಈ ಮ
ಗಳನ್ನೆಲ್ಲ ಬ್ರಹ್ಮಸೂತ್ರಗಳಲ್ಲಿ (೧.೧.೫ ; ೨.೨.೧ ; ೨.೨. ೧೧-೧೭) ನಿರಾಕರಿಸಲಾಗಿದ

ವೇದಾಂತದ ಪ್ರಕಾರ ಚೈತನ್ಯಸ್ವರೂಪಿಯಾದ ಬ್ರಹ್ಮವೇ ಜಗತ್ಕಾರಣ. ಪುರುಷ
ಏವೇದಂ ಸರ್ವಮ್, 'ಇದೆಲ್ಲವೂ ಪುರುಷನೇ' (ಋ. ಸಂ. ೧೦. ೯೦. ೨)
ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ
ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ, 'ಯಾವುದರಿಂದ ಈ
ಪ್ರಾಣಿಗಳು ಹುಟ್ಟುತ್ತವೆಯೋ, ಹಾಗೆಯೇ, ಹುಟ್ಟಿರುವವುಗಳು ಯಾವುದರಿಂ
ಜೀವಿಸುತ್ತವೆಯೋ ಮತ್ತು ಯಾವುದನ್ನು ಕುರಿತು ಹೋಗಿ ಪ್ರವೇಶಿಸುವುವೋ
ಅದನ್ನು ತಿಳಿದುಕೊ, ಅದು ಬ್ರಹ್ಮ' (ತೈ.ಉ.೩.೧) ; ಅಹಂ ಸರ್ವಸ್ಯ ಪ್ರಭವೋ
ಮತ್ತಃ ಸರ್ವಂ ಪ್ರವರ್ತತೇ, 'ನಾನು ಸಮಸ್ತ ಜಗತ್ತಿಗೆ ಉತ್ಪತ್ತಿಸ್ಥಾನ, ನನ್ನಿಂದಲೆ
ಎಲ್ಲವೂ (ತನ್ನ ಕಾರ್ಯದಲ್ಲಿ) ತೊಡಗುತ್ತಿರುವುದು' (ಗೀತಾ ೧೦.೮)—ಈ ಶ್ರು
ಸ್ಮೃತಿ ವಾಕ್ಯಗಳೆಲ್ಲ ಈ ವಾದವನ್ನು ಸಮರ್ಥಿಸುತ್ತವೆ.

ಚೈತನ್ಯದಿಂದ ಆಕಾಶವುಂಟಾಗುತ್ತದೆ. ಚೈತನ್ಯವಿಶಿಷ್ಟವಾದ ಆಕಾಶದಿಂ
ವಾಯುವುಂಟಾಗುತ್ತದೆ. ಹೀಗೆಯೇ ಮುಂದೆಯೂ ಅರಿಯಬೇಕು. ಚೈತನ್ಯ
ಸಹಾಯವಿಲ್ಲದೆ ಸೃಷ್ಟಿಯು ಸಾಧ್ಯವಿಲ್ಲ.

1 ಸೃಷ್ಟಿಯನ್ನು ವಿವರಿಸುವ ಮತ್ತೆ ಕೆಲವು ಶ್ರುತಿವಾಕ್ಯಗಳನ್ನು ಇ
ಉದಾಹರಿಸಬಹುದು : ಸ ಪ್ರಾಣಮಸೃಜತ ; ಪ್ರಾಣಾಚ್ಛ್ರದ್ಧಾಂ, ಖಂ ವಾಯು
ರ್ಜ್ಯೋತಿರಾಪಃ, ಪೃಥಿವೀಂದ್ರಿಯಂ ಮನಃ, ಅನ್ನಮನ್ನಾದ್ವೀರ್ಯಂ, ತಪೋ
ಮಂತ್ರಾಃ, ಕರ್ಮ, ಲೋಕಾಃ, ಲೋಕೇಷು ಚ ನಾಮ ಚ, 'ಆ ಪುರುಷನು ಪ್ರಾ
ನನ್ನು ಸೃಷ್ಟಿಸಿದನು ; ಪ್ರಾಣದಿಂದ ಶ್ರದ್ಧೆ ಆಕಾಶ ವಾಯು ಜ್ಯೋತಿ ನೀರು ಪೃಥ
ಇಂದ್ರಿಯ ಮನಸ್ಸು ಅ ್ನ (ಇವುಗಳನ್ನೂ), ಮತ್ತು ಲೋಕಗಳಲ್ಲಿ ನಾಮವನ್
(ಸೃಷ್ಟಿಸಿದನು)' (ಪ್ರ. ಉ. ೬.೪).

ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ ।
ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥

'ಪ್ರಾಣ, ಮನಸ್ಸು, ಎಲ್ಲ ಇಂದ್ರಿಯಗಳು, ಆಕಾಶ, ವಾಯು, ಅಗ್ನಿ, ನೀರು, ಎಲ್ಲವನ್ನೂ ಧರಿಸಿರುವ ಪೃಥ್ವಿ—ಇವುಗಳು ಈ ಪುರುಷನಿಂದ ಹುಟ್ಟುತ್ತವೆ.' (ಮುಂ. ಉ. ೨.೧.೩)

ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ, ತತ್ತೇಜೋಽಸೃಜತ, ತತ್ತೇಜ ಐಕ್ಷತ, ಬಹು ಸ್ಯಾಂ ಪ್ರಜಾಯೇಯೇತಿ, ತದಪೋಽಸೃಜತ, 'ಆ ಸದ್ವಸ್ತುವು "ಬಹುವಾಗುವೆನು, ಉತ್ಪನ್ನವಾಗುವೆನು" ಎಂದು ಯೋಚಿಸಿತು. ಅದು ತೇಜಸ್ಸನ್ನು ಸೃಷ್ಟಿಸಿತು. ಆ ತೇಜಸ್ಸು "ಬಹುವಾಗುವೆನು, ಉತ್ಪನ್ನವಾಗುವೆನು" ಎಂದು ಯೋಚಿಸಿತು. ಅದು ನೀರನ್ನು ಸೃಷ್ಟಿಸಿತು.' (ಛಾಂ. ಉ. ೬.೨.೩)

**ತೇಷು ಜಾಡ್ಯಾಧಿಕ್ಯದರ್ಶನಾತ್ ತಮಃಪ್ರಾಧಾನ್ಯಂ ತತ್ಕಾರಣಸ್ಯ। ತದಾನೀಂ ಸತ್ತ್ವರಜಸ್ತಮಾಂಸಿ ಕಾರಣಗುಣಪ್ರಕ್ರಮೇಣ ತೇಷು ಆಕಾಶಾದಿಷು ಉತ್ಪದ್ಯಂತೇ ॥೫೮॥**

೫೮. ಅವುಗಳಲ್ಲಿ[1] ಜಡತ್ವವು ಹೆಚ್ಚಾಗಿ ಕಂಡುಬರುವುದರಿಂದ ಅವುಗಳ ಕಾರಣವು ತಮೋಗುಣವನ್ನು ಪ್ರಧಾನವಾಗಿ(ಹೊಂದಿರಬೇಕು). ಆಗ[2] ಸತ್ತ್ವ, ರಜಸ್ಸು-ತಮಸ್ಸುಗಳು, ಕಾರಣದ ಗುಣಗಳು (ಕಾರ್ಯಗಳಲ್ಲಿ) ಕ್ರಮವಾಗಿ (ಕಂಡುಬರುವುವು ಎಂಬ ನ್ಯಾಯದಿಂದ)[3] ಆ ಆಕಾಶಾದಿಗಳಲ್ಲಿ[4] ಉತ್ಪನ್ನವಾಗುತ್ತವೆ.

1 ಆಕಾಶಾದಿಗಳಲ್ಲಿ.

2 ಸೃಷ್ಟಿಕಾಲದಲ್ಲಿ.

3 ಕಾರಣದಲ್ಲಿ ಯಾವ ಗುಣಗಳು ಯಾವ ಕ್ರಮದಲ್ಲಿ ಮತ್ತು ಎಷ್ಟರ ಮಟ್ಟಿಗೆ ಇರುವುವೋ ಅದೇ ಕ್ರಮದಲ್ಲಿ ಮತ್ತು ಅದೇ ಪ್ರಮಾಣದಲ್ಲಿ ಕಾರ್ಯದಲ್ಲಿ ಕಂಡುಬರುತ್ತವೆ.

4 ಆಕಾಶಾದಿ ಪಂಚ ಸೂಕ್ಷ್ಮಭೂತಗಳಲ್ಲಿ ಸತ್ತ್ವಾದಿ ತ್ರಿಗುಣಗಳಿದ್ದರೂ ಅವುಗಳಲ್ಲಿ ತಮಸ್ಸಿನ ಅಂಶ ಹೆಚ್ಚು. ಭೂತಗಳನ್ನು ಪರಸ್ಪರ ಹೋಲಿಸಿದರೆ ಆಕಾಶದಲ್ಲಿ ಸತ್ತ್ವಾಂಶ ಹೆಚ್ಚು, ಪೃಥ್ವಿಯಲ್ಲಿ ತಮಸ್ಸಿನ ಅಂಶ ಹೆಚ್ಚು.

**ಏತಾನಿ ಏವ ಸೂಕ್ಷ್ಮಭೂತಾನಿ ತನ್ಮಾತ್ರಾಣಿ ಅಪಂಚೀಕೃತಾನಿ ಚ ಉಚ್ಯಂತೇ ॥೫೯॥**

೫೯. ಇವುಗಳೇ[1] 'ಸೂಕ್ಷ್ಮಭೂತಗಳು'[2] 'ತನ್ಮಾತ್ರಗಳು'[3] ಮತ್ತು 'ಅಪಂಚೀಕೃತಗಳು'[4] ಎಂದು ಕರೆಯಲ್ಪಡುತ್ತವೆ.

1 ಆಕಾಶಾದಿ ಭೂತಗಳೇ.

2 ಕಾರ್ಯಕ್ಕೆ ಉಪಯೋಗವಾಗುವ ಸ್ಥಿತಿಯಲ್ಲಿ ಇಲ್ಲದ್ದರಿಂದ ಸೂಕ್ಷ್ಮಭೂ ಗಳೆನ್ನಿಸಿವೆ.

3 ತನ್-ಮಾತ್ರ, ಅದು ಮಾತ್ರವೇ, ಸ್ವರೂಪ ಮಾತ್ರವೇ ಆಗಿರುವುದು ಆಕಾಶದ ಮೂಲಭೂತಗುಣವು ಶಬ್ದ. ಆದುದರಿಂದ ಆಕಾಶವು ಈ ಅವಸ್ಥೆಯಲ್ಲಿ ಶಬ್ದಗುಣವನ್ನು ಮಾತ್ರ ಪ್ರದರ್ಶಿಸುವುದು.

4 ಇತರ ಭೂತಗಳೊಡನೆ ಪರಸ್ಪರ ಸಂಮಿಲಿತವಾಗದಿರುವವುಗಳು ಪಂಚೀಕರಣವನ್ನು ಮುಂದೆ ೧೦೦ ರಲ್ಲಿ ಹೇಳಿದೆ.

**ಏತೇಭ್ಯಃ ಸೂಕ್ಷ್ಮಶರೀರಾಣಿ ಸ್ಥೂಲಭೂತಾನಿ ಚ ಉತ್ಪದ್ಯಂತೇ ||೬೦**

೬೦. ಇವುಗಳಿಂದ ಸೂಕ್ಷ್ಮಶರೀರಗಳು ಮತ್ತು ಸ್ಥೂಲಭೂತಗಳ ಹುಟ್ಟುತ್ತವೆ.

### ಸೂಕ್ಷ್ಮಶರೀರಗಳ ಲಕ್ಷಣಗಳು

**ಸೂಕ್ಷ್ಮ ಶರೀರಾಣಿ ಸಪ್ತದಶ-ಅವಯವಾನಿ ಲಿಂಗಶರೀರಾಣಿ ||೬೧**

೬೧. ಹದಿನೇಳು ಅವಯವಗಳನ್ನುಳ್ಳ ಲಿಂಗಶರೀರಗಳೇ ಸೂಕ್ಷ್ಮ ಶರೀರಗಳು.

ಪ್ರತ್ಯಗಾತ್ಮನು ಸ್ಥೂಲಶರೀರದಲ್ಲಿ ನಿಲ್ಲಬೇಕಾದರೆ ಲಿಂಗಶರೀರವನ್ನು ಆಧರಿ ಕೊಂಡೇ ನಿಲ್ಲಬೇಕು. ಇದರ ಮೂಲಕ ಪ್ರತ್ಯಗಾತ್ಮನ ಇರವನ್ನು ಅರಿಯಬಹುದಾದ ರಿಂದ ಇದಕ್ಕೆ ಲಿಂಗಶರೀರವೆಂದು ಹೆಸರು: ಲಿಂಗ್ಯತೇ ಜ್ಞಾಪ್ಯತೇ ಪ್ರತ್ಯಗಾತ **ಸದ್ಭಾವಃ ಏಭಿರಿತಿ,** 'ಇವುಗಳಿಂದ ಪ್ರತ್ಯಗಾತ್ಮನ ಇರವು ಗುರುತಿಸಲ್ಪಡುತ್ತದೆ ಜ್ಞಾಪಿಸಲ್ಪಡುತ್ತದೆ.'

**ಅವಯವಾಸ್ತು ಜ್ಞಾನೇಂದ್ರಿಯಪಂಚಕಂ, ಬುದ್ಧಿಮನಸೀ, ಕರ್ಮೇಂದ್ರಿಯಪಂಚಕಂ, ವಾಯುಪಂಚಕಂ ಚೇತಿ ॥೬೨॥**

೬೨. ಅವಯವಗಳಾದರೋ ಐದು ಜ್ಞಾನೇಂದ್ರಿಯಗಳು, ಬುದ್ಧಿ ಮನಸ್ಸುಗಳು, ಐದು ಕರ್ಮೇಂದ್ರಿಯಗಳು ಮತ್ತು ಐದು ವಾಯುಗಳು.

ಇನ್ನು ಕೆಲವು ವಿವರಣೆಗಳಲ್ಲಿ ಹದಿನೇಳು ಅವಯವಗಳನ್ನು ಹೀಗೆ ಹೇಳಿದೆ: ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಸೂಕ್ಷ್ಮಭೂತಗಳು ಪ್ರಾಣ ಮತ್ತು ಮನಸ್ಸು.

### ಜ್ಞಾನೇಂದ್ರಿಯಗಳು

**ಜ್ಞಾನೇಂದ್ರಿಯಾಣಿ ಶ್ರೋತ್ರ-ತ್ವಕ್-ಚಕ್ಷು-ಜಿಹ್ವಾ-ಘ್ರಾಣಾಖ್ಯಾನಿ ॥೬೩॥**

೬೩. ಕಿವಿ, ಚರ್ಮ, ಕಣ್ಣು, ನಾಲಗೆ, ಮೂಗು ಎಂಬ ಹೆಸರುಳ್ಳ (ಇವೇ) ಜ್ಞಾನೇಂದ್ರಿಯಗಳು.

ಬಾಹ್ಯವಸ್ತುಗಳ ಜ್ಞಾನವು ಇವುಗಳಿಂದ ಉಂಟಾಗುವ ಕಾರಣ ಇವನ್ನು ಜ್ಞಾನೇಂದ್ರಿಯಗಳೆಂದು ಕರೆದಿದೆ.

ಆಕಾಶಾದಿ ಪಂಚಭೂತಗಳ ಉತ್ಪತ್ತಿಕ್ರಮಕ್ಕೆ ಅನುಸಾರವಾಗಿ ಇಲ್ಲಿ ಇಂದ್ರಿಯಗಳನ್ನು ಹೇಳಿದೆ.

**ತಾನಿ ಆಕಾಶಾದೀನಾಂ ಸಾತ್ತ್ವಿಕಾಂಶೇಭ್ಯಃ ವ್ಯಸ್ತೇಭ್ಯಃ ಪೃಥಕ್ ಪೃಥಕ್ ಕ್ರಮೇಣ ಉತ್ಪದ್ಯಂತೇ ॥೬೪॥**

೬೪. ಇವುಗಳು[1] ಆಕಾಶವೇ ಮೊದಲಾದವುಗಳ, ಬಿಡಿಬಿಡಿಯಾದ ಸಾತ್ತ್ವಿಕಾಂಶಗಳಿಂದ, ಬೇರೆಬೇರೆಯಾಗಿ ಮತ್ತು ಕ್ರಮವಾಗಿ ಉತ್ಪನ್ನವಾಗುತ್ತವೆ.[2]

1 ಈ ಜ್ಞಾನೇಂದ್ರಿಯಗಳು.

2 ಆಕಾಶದ ಸಾತ್ತ್ವಿಕಾಂಶದಿಂದ ಕಿವಿ, ವಾಯುವಿನ ಸಾತ್ತ್ವಿಕಾಂಶದಿಂದ ಚರ್ಮ, ಅಗ್ನಿಯ ಸಾತ್ತ್ವಿಕಾಂಶದಿಂದ ಕಣ್ಣು, ನೀರಿನ ಸಾತ್ತ್ವಿಕಾಂಶದಿಂದ ನಾಲಗೆ, ಭೂಮಿಯ ಸಾತ್ತ್ವಿಕಾಂಶದಿಂದ ಮೂಗು.

**ಬುದ್ಧಿರ್ನಾಮ ನಿಶ್ಚಯಾತ್ಮಿಕ-ಅಂತಃಕರಣ-ವೃತ್ತಿಃ ॥೬೫॥**

೬೫. ಬುದ್ಧಿಯೆಂದರೆ ನಿಶ್ಚಯಸ್ವರೂಪವುಳ್ಳ ಅಂತಃಕರಣವೃತ್ತಿ.

ಬಾಹ್ಯೇಂದ್ರಿಯಗಳ ಹಿಂದೆ ನಿಂತು ಅವುಗಳ ಕಾರ್ಯಗಳನ್ನು ಕ್ರೋಢೀಕರಿಸಿ ನಮಗೆ ಒಳಗಿನಿಂದ ಜ್ಞಾನವನ್ನುಂಟುಮಾಡುವ ಅಂತರಿಂದ್ರಿಯವನ್ನೇ ಅಂತಃಕರಣ ಎಂದು ಕರೆಯುತ್ತಾರೆ. ನೀರಿನಲ್ಲಿ ಅಲೆಗಳೇಳುವಂತೆ ಈ ಅಂತಃಕರಣದಲ್ಲೇಳುವ ಅಲೆಗಳನ್ನು ವೃತ್ತಿಗಳು ಎಂದು ಕರೆಯುತ್ತಾರೆ. ವೃತ್ತಿಗಳ ಸ್ವರೂಪಕ್ಕನುಗುಣವಾಗಿ ಅಂತಃಕರಣವು ಚಿತ್ತ, ಬುದ್ಧಿ, ಮನಸ್ಸು ಮತ್ತು ಅಹಂಕಾರ ಎಂದು ನಾಲ್ಕು ವಿಧವಾಗಿ ಕಾರ್ಯವೆಸಗುತ್ತದೆ.

‘ಇದು ಹೀಗೆಯೇ, ಹಾಗಲ್ಲ’ ಎಂದು ವಸ್ತುವಿನ ಅಥವಾ ವಿಷಯದ ಬಗ್ಗೆ ನಿಶ್ಚಯಜ್ಞಾನವನ್ನುಂಟುಮಾಡುವ ಅಂತಃಕರಣವೃತ್ತಿಯೇ ಬುದ್ಧಿ.

**ಮನೋ ನಾಮ ಸಂಕಲ್ಪ-ವಿಕಲ್ಪಾತ್ಮಿಕ-ಅಂತಃಕರಣವೃತ್ತಿಃ ॥೬೬॥**

೬೬. ಮನಸ್ಸೆಂದರೆ ಸಂಕಲ್ಪ-ವಿಕಲ್ಪಸ್ವರೂಪವುಳ್ಳ ಅಂತಃಕರಣವೃತ್ತಿ.

ಸಂಕಲ್ಪವೆಂದರೆ ಯೋಚನೆ, ಭಾವನೆ; ವಿಕಲ್ಪವೆಂದರೆ ಸಂಶಯ. ಅಂತಃಕರಣದ ವೃತ್ತಿಗಳು ಒಂದು ವಿಷಯದ ಬಗ್ಗೆ ಅಥವಾ ಕ್ರಿಯೆಯ ಬಗ್ಗೆ ಈ ರೂಪದಿಂದ ಎದ್ದುಕೊಂಡಾಗ ಅದನ್ನು ಮನಸ್ಸೆಂದು ಕರೆಯಲಾಗುತ್ತದೆ.

**ಅನಯೋರೇವ ಚಿತ್ತ-ಅಹಂಕಾರಯೋಃ ಅಂತರ್ಭಾವಃ ॥೬೭॥**

೬೭. ಇವೆರಡರಲ್ಲಿಯೇ[1] ಚಿತ್ತ-ಅಹಂಕಾರಗಳು (ಕೂಡ) ಅಡಗಿವೆ.

1 ಬುದ್ಧಿಮನಸ್ಸುಗಳೆರಡರಲ್ಲಿಯೇ.

**ಅನುಸಂಧಾನಾತ್ಮಿಕ–ಅಂತಃಕರಣ–ವೃತ್ತಿಃ ಚಿತ್ತಮ್ ॥೬೮॥**

೬೮. ಅನುಸಂಧಾನದ ಸ್ವರೂಪವನ್ನುಳ್ಳ ಅಂತಃಕರಣವೃತ್ತಿಯೇ ಚಿತ್ತ.

ಅನುಸಂಧಾನವೆಂದರೆ ಹಿಂದೆ ಆದುದನ್ನು ನೆನಪಿಗೆ ತಂದುಕೊಳ್ಳುವುದು. ಸ್ಮರಣೆಯು ಚಿತ್ತದ ಮುಖ್ಯ ಲಕ್ಷಣ.

**ಅಭಿಮಾನಾತ್ಮಿಕ–ಅಂತಃಕರಣ–ವೃತ್ತಿಃ ಅಹಂಕಾರಃ ॥೬೯॥**

೬೯. ಅಭಿಮಾನದ ಸ್ವರೂಪವುಳ್ಳ ಅಂತಃಕರಣವೃತ್ತಿಯೇ ಅಹಂಕಾರ.

ಕೆಲವು ಪಾಠಗಳಲ್ಲಿ ೬೮ ನೆಯ ಮತ್ತು ೬೯ ನೆಯ ಕಂಡಿಕೆಗಳು ಕಂಡುಬರುವುದಿಲ್ಲ.

ವೇದಾಂತದ ಪ್ರಕಾರ ಅಂತಃಕರಣವು ದ್ರವವಸ್ತುವಿನಂತೆ ಹರಿಯುವ ಸ್ವಭಾವವುಳ್ಳದ್ದು. ನಾವು ಮಡಕೆಯೊಂದನ್ನು ನೋಡುತ್ತಿರುವಾಗ ಅಂತಃಕರಣವು ನಮ್ಮ ಕಣ್ಣಿನ ಮೂಲಕ ಹೊರಕ್ಕೆ ಹರಿದು ಆ ಮಡಕೆಯ ಆಕಾರವನ್ನು ತಾಳಿ ಅದನ್ನು ನಮ್ಮ ಚೈತನ್ಯದ ಮುಂದೊಡ್ಡುತ್ತದೆ. ಅದು ಮಡಕೆ ಎಂಬ ಸಾಮಾನ್ಯ ಜ್ಞಾನವುಂಟಾದಾಗ ಅಥವಾ ಅದು ಮಡಕೆಯೋ ಅಲ್ಲವೋ ಎಂಬ ಸಂಶಯವುಂಟಾದಾಗ ಅಂತಃಕರಣದ ಈ ವೃತ್ತಿಯು ಮನಸ್ಸು ಎಂದು ಕರೆಯಲ್ಪಡುತ್ತದೆ. ಅದು ಮಡಕೆಯೇ ಎಂಬ ನಿಶ್ಚಿತಜ್ಞಾನವುಂಟಾದಾಗ ಈ ವೃತ್ತಿಯು ಬುದ್ಧಿಯೆನಿಸಲ್ಪಡುತ್ತದೆ. ಹಿಂದೆ ನೋಡಿದ್ದ ಮಡಕೆಯನ್ನು ಸ್ಮರಿಸಿಕೊಂಡಾಗ ಆ ವೃತ್ತಿಯು ಚಿತ್ತವೆಂತಲೂ, ಆ ಮಡಕೆಯೊಂದಿಗೆ 'ನನ್ನದು' ಎಂಬ ಸಂಬಂಧವನ್ನು ಕಲ್ಪಿಸಿಕೊಂಡಾಗ ಅಹಂಕಾರವೆಂತಲೂ ಹೇಳಲ್ಪಡುತ್ತದೆ.

**ಏತೇ ಪುನಃ ಆಕಾಶಾದಿಗತ–ಸಾತ್ತ್ವಿಕಾಂಶೇಭ್ಯಃ ಮಿಲಿತೇಭ್ಯಃ ಉತ್ಪದ್ಯಂತೇ ॥೭೦॥**

೭೦. ಮತ್ತೆ ಇವು[1] (ಕೂಡ)ಆಕಾಶಾದಿಗಳಲ್ಲಿರುವ ಸಾತ್ತ್ವಿಕಾಂಶಗಳ[2] ಸಮ್ಮಿಲನದಿಂದ ಹುಟ್ಟುತ್ತವೆ.

1 ಮನಸ್ಸು, ಬುದ್ಧಿ, ಚಿತ್ತ ಮತ್ತು ಅಹಂಕಾರ.

2 ಹೀಗೆ ನಾಲ್ಕು ಪ್ರಕಾರಗಳನ್ನುಳ್ಳ ಅಂತಃಕರಣವು ಐದು ಜ್ಞಾನೇಂದ್ರಿಯಗಳೊಡನೆ ಸಹಕರಿಸುತ್ತದೆ. ಜ್ಞಾನೇಂದ್ರಿಯಗಳಾದರೋ ಪಂಚ ಸೂಕ್ಷ್ಮಭೂತಗಳ

ಸಾತ್ತ್ವಿಕಾಂಶದಿಂದ ಕ್ರಮವಾಗಿ ಉತ್ಪನ್ನವಾಗಿರುತ್ತವೆ. ಆದುದರಿಂದ ಅಂತಃಕರಣದಲ್ಲಿ ಐದೂ ಭೂತಗಳ ಸಾತ್ತ್ವಿಕಾಂಶವು ಇರಲೇಬೇಕಷ್ಟೆ.

ಬುದ್ಧಿ-ಮನಸ್ಸುಗಳು ಕೂಡ ಭೌತಿಕವಸ್ತುಗಳು ಎಂಬುದು ಗಮನಿಸಬೇಕಾದ ಅಂಶ.

**ಏತೇಷಾಂ ಪ್ರಕಾಶಾತ್ಮಕತ್ವಾತ್ ಸಾತ್ತ್ವಿಕಾಂಶಕಾರ್ಯತ್ವಮ್ ॥೭೧॥**

೭೧. ಇವುಗಳಿಗೆ[1] ಬೆಳಗುವ ಸ್ವಭಾವವಿರುವುದರಿಂದ[2] (ಇವು) (ಸೂಕ್ಷ್ಮಭೂತಗಳ) ಸಾತ್ತ್ವಿಕಾಂಶಗಳ ಕಾರ್ಯಗಳು.

1 ಬುದ್ಧಿ ಮನಸ್ಸು ಚಿತ್ತ ಅಹಂಕಾರ–ಇವುಗಳಿಗೆ.

2 ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮ್ ಅನಾಮಯಮ್, 'ಸತ್ತ್ವಗುಣವು ನಿರ್ಮಲವಾದುದರಿಂದ ಪ್ರಕಾಶಕವೂ ನಿರುಪದ್ರವವೂ ಆಗಿದೆ.' (ಗೀತಾ ೧೪.೬) ಆದುದರಿಂದ ಎಲ್ಲಿ ಬೆಳಗುವ ಸ್ವಭಾವವಿದೆಯೋ ಅಲ್ಲಿ ಸತ್ತ್ವವಿರಲೇಬೇಕು.

### ಪಂಚಕೋಶಗಳು—ವಿಜ್ಞಾನಮಯಕೋಶ

**ಇಯಂ ಬುದ್ಧಿಃ ಜ್ಞಾನೇಂದ್ರಿಯೈಃ ಸಹಿತಾ ವಿಜ್ಞಾನಮಯ-ಕೋಶೋ ಭವತಿ ॥೭೨॥**

೭೨. ಜ್ಞಾನೇಂದ್ರಿಯಗಳಿಂದ ಸಹಿತವಾದ ಈ ಬುದ್ಧಿಯು(ಚೈತನ್ಯಕ್ಕೆ) 'ವಿಜ್ಞಾನಮಯಕೋಶ'ವಾಗುತ್ತದೆ.

೩೯ ನೆಯ ಕಂಡಿಕೆಯ ೨ ನೆಯ ಟಿಪ್ಪಣಿಯನ್ನು ನೋಡಿ.

**ಅಯಂ ಕರ್ತೃತ್ವ-ಭೋಕ್ತೃತ್ವ-ಸುಖಿತ್ವ-ದುಃಖಿತ್ವಾದಿ–ಅಭಿಮಾನತ್ವೇನ ಇಹಲೋಕ-ಪರಲೋಕಗಾಮೀ ವ್ಯಾವಹಾರಿಕೋ ಜೀವಃ ಇತಿ ಉಚ್ಯತೇ ॥೭೩॥**

೬೩. (ಈ ವಿಜ್ಞಾನಮಯಕೋಶವು)[1] (ತಾನು) ಕರ್ತೃ, ಭೋಕ್ತೃ, ಸುಖಿ, ದುಃಖಿ ಮೊದಲಾದ ಅಭಿಮಾನವನ್ನು[2] ಹೊಂದಿರುವುದರಿಂದ, ಪರಲೋಕಕ್ಕೆ ಹೋಗುತ್ತ ಇಹಲೋಕಕ್ಕೆ ಬರುತ್ತ (ಇರುವುದರಿಂದ) ವ್ಯಾವಹಾರಿಕಜೀವ[3] ಎಂದು ಹೇಳಲ್ಪಟ್ಟಿದೆ.

1 ಎಂದರೆ, ವಿಜ್ಞಾನಮಯಕೋಶದಲ್ಲಿ ಪ್ರತಿಬಿಂಬಿತವಾದ ಆತ್ಮನು ಅಥವಾ ಚೈತನ್ಯವು; ಅಥವಾ ಅದನ್ನು ಉಪಾಧಿಯಾಗಿ ಹೊಂದಿರುವ ಚೈತನ್ಯವು.

2 ಆತ್ಮನು ಸ್ವತಃ ಅಸಂಗ ಮತ್ತು ಚಿದ್ರೂಪ. ದೇಹೇಂದ್ರಿಯಾದಿಗಳಲ್ಲಿ ಅಭಿಮಾನವನ್ನು ಕಲ್ಪಿಸಿಕೊಂಡಾಗ ಕರ್ತೃತ್ವಾದಿ ಭಾವನೆಗಳು ಉಂಟಾಗುತ್ತವೆ.

ತೈತ್ತಿರೀಯೋಪನಿಷತ್ತು (೨.೫) ಹೀಗೆನ್ನುತ್ತದೆ: ವಿಜ್ಞಾನಂ ಯಜ್ಞಂ ತನುತೇ, ಕರ್ಮಾಣಿ ತನುತೇಽಪಿ ಚ, 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ, ಕರ್ಮಗಳನ್ನೂ ಮಾಡುತ್ತದೆ.'

3 ಪಾರಮಾರ್ಥಿಕಸ್ವರೂಪಕ್ಕೆ ವಿರುದ್ಧವಾಗಿ ಇಲ್ಲಿ ವ್ಯಾವಹಾರಿಕಸ್ವರೂಪವನ್ನು ವಿವರಿಸಿದೆ. ಪಾರಮಾರ್ಥಿಕವಾಗಿ ನೋಡಿದರೆ ಜೀವನು ಬ್ರಹ್ಮವೇ. ಅವನಿಗೆ ಕರ್ತೃತ್ವಾದಿಗಳು ಒದಗಿರುವುದು ಬುದ್ಧಿಯೆಂಬ ಉಪಾಧಿಯ ಸಂಬಂಧದಿಂದಲೇ. ಬೃಹದಾರಣ್ಯಕ ಶ್ರುತಿಯು (೪.೩.೭) ಇದನ್ನು ಹೀಗೆ ವಿವರಿಸಿರುತ್ತದೆ: ಸ ಸಮಾನಃ ಸನ್ ಉಭೌ ಲೋಕೌ ಅನುಸಂಚರತಿ, ಧ್ಯಾಯತೀವ ಲೇಲಾಯತೀವ, 'ಅವನು ಬುದ್ಧಿಗೆ ಸಮಾನವಾದ ಆಕಾರವನ್ನು ಪಡೆದು ಇಹಲೋಕ ಪರಲೋಕಗಳ ನಡುವೆ ಸಂಚರಿಸುತ್ತಾನೆ; ಅವನು ಧ್ಯಾನಿಸುವಂತೆ ಚಲಿಸುವಂತೆ ಇರುತ್ತಾನೆ.'

ಶ್ರೀಶಂಕರರು ತಮ್ಮ ಸೂತ್ರಭಾಷ್ಯದಲ್ಲಿ (೨.೩.೩೦) ಹೀಗೆನ್ನುತ್ತಾರೆ: ಪರಮಾರ್ಥತಸ್ತು ನ ಜೀವೋ ನಾಮ ಬುದ್ಧಿ-ಉಪಾಧಿ-ಸಂಬಂಧ-ಪರಿಕಲ್ಪಿತ-ಸ್ವರೂಪ-ವ್ಯತಿರೇಕೇಣ ಅಸ್ತಿ, 'ಆದರೆ ಪರಮಾರ್ಥವಾಗಿ ಬುದ್ಧಿಯೆಂಬ ಉಪಾಧಿಯ ಸಂಬಂಧದಿಂದ ಕಲ್ಪಿತವಾದ ಸ್ವರೂಪಕ್ಕಿಂತ ಬೇರೆಯಾಗಿ ಜೀವನೆಂಬುದೇ ಇಲ್ಲ'.

ಮನೋಮಯಕೋಶ

**ಮನಸ್ತು ಜ್ಞಾನೇಂದ್ರಿಯೈಃ ಸಹಿತಂ ಸನ್ ಮನೋಮಯ-ಕೋಶೋ ಭವತಿ ||೬೪||**

೭೪. ಮನಸ್ಸಾದರೋ ಜ್ಞಾನೇಂದ್ರಿಯಗಳಿಂದೊಡಗೂಡಿ ಮನೋಮಯಕೋಶವಾಗುತ್ತದೆ.

### ಕರ್ಮೇಂದ್ರಿಯಗಳು

**ಕರ್ಮೇಂದ್ರಿಯಾಣಿ ವಾಕ್-ಪಾಣಿ-ಪಾದ-ಪಾಯು-ಉಪಸ್ಥ-ಆಖ್ಯಾನಿ ॥೭೫॥**

೭೫. ವಾಕ್ಕು, ಕೈ, ಕಾಲು, ಗುದ, ಜನನೇಂದ್ರಿಯ (ಎಂದು) ಕರೆಯಲ್ಪಡುವ (ಇವು) ಕರ್ಮೇಂದ್ರಿಯಗಳು.

**ಏತಾನಿ ಪುನಃ ಆಕಾಶಾದೀನಾಂ ರಜೋಽಂಶೇಭ್ಯಃ ವ್ಯಸ್ತೇಭ್ಯಃ ಪೃಥಕ್ ಪೃಥಕ್ ಕ್ರಮೇಣ ಉತ್ಪದ್ಯಂತೇ ॥೭೬॥**

೭೬. ಮತ್ತೆ ಇವು[1] ಆಕಾಶವೇ ಮೊದಲಾದವುಗಳ, ಬಿಡಿಬಿಡಿಯಾದ ರಜಸ್ಸಿನ ಅಂಶಗಳಿಂದ, ಬೇರೆಬೇರೆಯಾಗಿ ಮತ್ತು ಕ್ರಮವಾಗಿ ಉತ್ಪನ್ನವಾಗುತ್ತವೆ.[2]

1 ಕರ್ಮೇಂದ್ರಿಯಗಳು.

2 ಆಕಾಶದ ರಜೋಽಂಶದಿಂದ ವಾಕ್ಕು, ವಾಯುವಿನದರಿಂದ ಕೈಗಳು, ಅಗ್ನಿಯದರಿಂದ ಪಾದಗಳು, ನೀರಿನದರಿಂದ ಗುದ, ಪೃಥ್ವಿಯದರಿಂದ ಜನನೇಂದ್ರಿಯ.

### ಪಂಚಪ್ರಾಣಗಳು

**ವಾಯವಃ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನಾಃ ॥೭೭॥**

೭೭. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ—ಇವುಗಳು (ಪಂಚ) ವಾಯುಗಳು.

**ಪ್ರಾಣೋ ನಾಮ ಪ್ರಾಗ್ಗಮನವಾನ್ ನಾಸಾಗ್ರಸ್ಥಾನವರ್ತೀ ॥೭೮॥**

೭೮. ಮೇಲಕ್ಕೆ ಹೋಗುವ (ಮತ್ತು) ಮೂಗಿನ ತುದಿಯಲ್ಲಿರುವ (ವಾಯುವಿಗೆ) ಪ್ರಾಣವೆಂದು ಹೆಸರು.

1 ಪ್ರಾಣಕ್ಕೆ ಹೃದಯವು ಸ್ಥಾನವೆಂದು ತೈತ್ತಿರೀಯಬ್ರಾಹ್ಮಣದಲ್ಲಿ (೩.೧೦.೮.೫) ೇಳಿದ್ದರೂ ಪ್ರತ್ಯಕ್ಷವಾಗಿ ಅದು ಮೂಗಿನ ತುದಿಯಲ್ಲಿ ಪ್ರಕಟವಾಗುವುದರಿಂದ ೀಗೆಂದಿದೆ.

**ಅಪಾನೋ ನಾಮ ಅವಾಗ್ಗಮನವಾನ್ ಪಾಯ್ವಾದಿಸ್ಥಾನ-ವರ್ತೀ ||೭೯||**

೭೯. ಕೆಳಕ್ಕೆ[1] ಹೋಗುವ (ಮತ್ತು) ಗುದವೇ ಮೊದಲಾದ ಸ್ಥಾನಗಳಲ್ಲಿರುವ[2] (ವಾಯುವಿಗೆ) ಅಪಾನವೆಂದು ಹೆಸರು.

1 ನಾಭಿಯಿಂದ ಕೆಳಕ್ಕೆ.

2 ಜನನೇಂದ್ರಿಯ ಮೊದಲಾದ ಮಲಮೂತ್ರಾದಿಗಳ ವಿಸರ್ಜನೆಗೂ ಅಪಾನವೇ ಕಾರಣ.

**ವ್ಯಾನೋ ನಾಮ ವಿಷ್ವಗ್ಗಮನವಾನ್, ಅಖಿಲಶರೀರವರ್ತೀ ||೮೦||**

೮೦. ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುವ (ಮತ್ತು) ಶರೀರದ ಎಲ್ಲ ಕಡೆಯಲ್ಲೂ ಇರುವ (ವಾಯುವಿಗೆ) ವ್ಯಾನವೆಂದು ಹೆಸರು.

ಛಾಂದೋಗ್ಯೋಪನಿಷತ್ತು (೧.೩.೩ ಮತ್ತು ೫) ಹೀಗೆನ್ನುತ್ತದೆ: ಅಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನಃ......ಯಾನಿ ಅನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾ ಅಗ್ನೇಃ ಮಂಥನಮ್ ಆಜೇಃ ಸರಣಂ ದೃಢಸ್ಯ ಧನುಷಃ ಆಯಮನಮ್ ಅಪ್ರಾಣನನ್ ಅನಪಾನನ್ ತಾನಿ ಕರೋತಿ, 'ಇನ್ನು ಯಾವುದು ಪ್ರಾಣ-ಅಪಾನಗಳ ನಡುವೆಯಿರುವುದೊ ಅದು ವ್ಯಾನವು. ಅಗ್ನಿಯನ್ನು ಕಡೆಯುವುದು, ಲಕ್ಷ್ಯದ ಕಡೆಗೆ ಧಾವಿಸುವುದು, ಗಟ್ಟಿಯಾದ ಬಿಲ್ಲನ್ನು ಬಗ್ಗಿಸುವುದು ಮೊದಲಾದ ಅಧಿಕಪ್ರಯತ್ನದಿಂದ ಮಾಡಬೇಕಾಗಿರುವ ಬೇರೆ ಕರ್ಮಗಳನ್ನು ಉಸಿರನ್ನು ಹೊರಕ್ಕೆ ಬಿಡದೆ ಒಳಕ್ಕೆ ತೆಗೆದುಕೊಳ್ಳದೆ ಮಾಡುತ್ತಾನೆ.'

**ಉದಾನೋ ನಾಮ ಕಂಠಸ್ಥಾನೀಯಃ ಊರ್ಧ್ವಗಮನವಾನ್ ಉತ್ಕ್ರಮಣವಾಯುಃ ||೮೧||**

೮೧. ಮೇಲಕ್ಕೆ (ಮತ್ತು ಹೊರಕ್ಕೆ) ಸಂಚರಿಸುವ, ಕಂಠದಲ್ಲಿ ನೆಲಸಿರುವ, ಉತ್ಕ್ರಮಣಕ್ಕೆ (ಕಾರಣವಾದ) ವಾಯುವಿಗೆ ಉದಾನವೆಂದು ಹೆಸರು.

ಮರಣಕಾಲದಲ್ಲಿ ಜೀವನು ದೇಹವನ್ನು ಬಿಟ್ಟುಹೋಗುವುದಕ್ಕೆ ಉತ್ಕ್ರಮಣ ಅಥವಾ ಉತ್ಕ್ರಾಂತಿ ಎಂದು ಹೆಸರು. ಈ ಉತ್ಕ್ರಮಣವು ಕಣ್ಣು ಮೊದಲಾದ ಯಾವ ದ್ವಾರದಿಂದ ಬೇಕಾದರೂ ಆಗಬಹುದು. ಆದರೂ ಕಂಠವು ಪ್ರಾಯಶ ಉತ್ಕ್ರಮಣಸ್ಥಾನ.

**ಸಮಾನೋ ನಾಮ ಶರೀರಮಧ್ಯಗತ-ಅಶಿತ-ಪೀತ-ಅನ್ನಾದಿ-ಸಮೀಕರಣಕರಃ ॥೮೨॥**

೮೨. ಶರೀರದ ಮಧ್ಯದಲ್ಲಿರುವ, ತಿಂದ ಮತ್ತು ಕುಡಿದ ಅನ್ನ (ನೀರು)ಗಳನ್ನು ಸಮವಾಗಿ ಮಾಡುವ(ವಾಯುವಿಗೆ) ಸಮಾನವೆಂದು ಹೆಸರು.

ಸಮಾನವಾಯುವು ಜೀರ್ಣಕ್ರಿಯೆಗೆ ಕಾರಣ.

**ಸಮೀಕರಣಂ ತು ಪರಿಪಾಕಕರಣಂ ರಸ-ರುಧಿರ-ಶುಕ್ರ-ಪುರೀಷಾದಿಕರಣಮಿತಿ ಯಾವತ್ ॥೮೩॥**

೮೩. ಸಮೀಕರಣವೆಂದರೆ (ಆಹಾರವನ್ನು) ಪರಿಪಕ್ವವಾಗಿ ಮಾಡುವುದು; ಅನ್ನರಸ, ರಕ್ತ, ವೀರ್ಯ ಮೊದಲಾದ (ರೂಪಗಳಿಗೆ) ಪರಿವರ್ತಿಸುವುದು.

ಕೆಲವು ಪಾಠಗಳಲ್ಲಿ ಈ ಕಂಡಿಕೆಯಿಲ್ಲ.

ನಿಜವಾಗಿ ನೋಡಿದರೆ ಈ ಐದು ಪ್ರಾಣಗಳೂ ಒಂದೇ ಪ್ರಾಣದ ಕ್ರಿಯಾಪ್ರಕಾರ ಭೇದಗಳು.

**ಕೇಚಿತ್ತು ನಾಗ-ಕೂರ್ಮ-ಕೃಕಲ-ದೇವದತ್ತ-ಧನಂಜಯಾಖ್ಯಾ ಪಂಚ ಅನ್ಯೇ ವಾಯವಃ ಸಂತೀತಿ ವದಂತಿ ॥೮೪॥**

೭೪. ಮತ್ತೆ ಕೆಲವರಾದರೋ[1]ನಾಗ ಕೂರ್ಮ ಕೃಕಲ ದೇವದತ್ತ ಧನಂಜಯ ಎಂದು ಹೆಸರುಳ್ಳ ಇನ್ನೂ ಐದು ವಾಯುಗಳಿವೆ ಎಂದು ಹೇಳುತ್ತಾರೆ.

1 ಸಾಂಖ್ಯಮತದವರು.

**ತತ್ರ ನಾಗಃ ಉದ್ಗಿರಣಕರಃ । ಕೂರ್ಮಃ ಉನ್ಮೀಲನಕರಃ । ಕೃಕಲಃ ಕ್ಷುತ್ಕರಃ । ದೇವದತ್ತಃ ಜೃಂಭಣಕರಃ । ಧನಂಜಯಃ ಪೋಷಣಕರಃ ॥೭೫॥**

೭೫. ಅವುಗಳಲ್ಲಿ ನಾಗವು ವಮನವನ್ನು ಅಥವಾ ತೇಗನ್ನು ಉಂಟು ಮಾಡುತ್ತದೆ ; ಕೂರ್ಮವು (ಕಣ್ಣುರೆಪ್ಪೆಯನ್ನು) ತೆರೆಯಿಸುತ್ತದೆ[1] ; ಕೃಕಲವು ಸೀನನ್ನುಂಟುಮಾಡುತ್ತದೆ[2] ; ದೇವದತ್ತವು ಆಕಳಿಕೆಯನ್ನುಂಟುಮಾಡುತ್ತದೆ ; ಧನಂಜಯವು (ಶರೀರವನ್ನು) ಪೋಷಿಸುತ್ತದೆ.

1 ಕಣ್ಣುಮುಚ್ಚುವಂತೆ ಮಾಡುವುದೂ ಅದೇ.

2 ಕ್ಷುತ್ ಎಂದರೆ ಸೀನು. ಕ್ಷುಧಾಕರಃ ಎಂಬ ಪಾಠವನ್ನೊಪ್ಪಿದರೆ 'ಹಸಿವನ್ನು ಉಂಟುಮಾಡುತ್ತದೆ' ಎಂದು ಅನುವಾದಿಸಬೇಕು.

ಈ ಐದು ವಾಯುಗಳು ಹಿಂದೆ ಹೇಳಿದ ಪಂಚಪ್ರಾಣಗಳಲ್ಲಿಯೇ ಅಂತರ್ಗತವಾಗಿವೆ;ನಾಗವು ಉದಾನದಲ್ಲಿ, ಕೂರ್ಮವು ವ್ಯಾನದಲ್ಲಿ, ಕೃಕಲವು ಸಮಾನದಲ್ಲಿ, ದೇವದತ್ತವು ಅಪಾನದಲ್ಲಿ, ಧನಂಜಯವು (ಪುನಃ) ಸಮಾನದಲ್ಲಿ.

**ಏಶೇಷಾಂ ಪ್ರಾಣಾದಿಷು ಅಂತರ್ಭಾವಾತ್ ಪ್ರಾಣಾದಯಃ ಪಂಚ ಏವೇತಿ ಕೇಚಿತ್ ॥೭೬॥**

೭೬. ಇವು ಪ್ರಾಣಾದಿ (ಪಂಚ) ವಾಯುಗಳಲ್ಲಿಯೇ ಅಡಗಿರುವುದರಿಂದ ಪ್ರಾಣಾದಿಗಳು ಐದೇ ಎಂದು ಕೆಲವರು (ಅಭಿಪ್ರಾಯಪಡುತ್ತಾರೆ).

**ಏತತ್ ಪ್ರಾಣಾದಿಪಂಚಕಮ್ ಆಕಾಶಾದಿಗತ-ರಜೋಽಂಶೇಭ್ಯಃ ಮಿಲಿತೇಭ್ಯಃ ಉತ್ಪದ್ಯತೇ ॥೭೭॥**

೮೭. ಈ ಪ್ರಾಣಾದಿಪಂಚಕವು ಆಕಾಶಾದಿಗಳಲ್ಲಿರುವ ರಜಸ್ಸಿನ ಅಂ
ಗಳ ಸಮ್ಮಿಲನದಿಂದ ಹುಟ್ಟುತ್ತದೆ.

ಆದುದರಿಂದ ಪ್ರಾಣಾದಿಗಳೂ ಭೌತಿಕವಸ್ತುಗಳು.

### ಪ್ರಾಣಮಯಕೋಶ

**ಇದಂ ಪ್ರಾಣಾದಿಪಂಚಕಂ ಕರ್ಮೇಂದ್ರಿಯೈಃ ಸಹಿತ ಸತ್ ಪ್ರಾಣಮಯಕೋಶೋ ಭವತಿ । ಅಸ್ಯ ಕ್ರಿಯಾತ್ಮಕತ್ವೇನ ರಜೋಽಂಶಕಾರ್ಯತ್ವಮ್ ॥೮೮॥**

೮೮. ಕರ್ಮೇಂದ್ರಿಯಗಳ ಸಹಿತ ಈ ಪ್ರಾಣಾದಿಪಂಚಕವು (ಚೈತನ್ಯಕ್ಕೆ
ಪ್ರಾಣಮಯಕೋಶವಾಗುತ್ತದೆ. ಇದು ಕ್ರಿಯಾತ್ಮಕವಾಗಿರುವುದರಿಂದ
ರಜಸ್ಸಿನ ಅಂಶಗಳಿಂದ ಉಂಟಾಗಿರುತ್ತದೆ.

1 ಶರೀರದಲ್ಲಿ ಮತ್ತು ಶರೀರದಿಂದ ನಡೆಯುವ ಎಲ್ಲ ಚಟುವಟಿಕೆಗಳಿಗ
ಪಂಚಪ್ರಾಣವಾಯುಗಳೇ ಕಾರಣ.

### ಸೂಕ್ಷ್ಮಶರೀರ

**ಏತೇಷು ಕೋಶೇಷು ಮಧ್ಯೇ ವಿಜ್ಞಾನಮಯೋ ಜ್ಞಾನಶಕ್ತಿ ಮಾನ್ ಕರ್ತೃರೂಪಃ । ಮನೋಮಯಃ ಇಚ್ಛಾಶಕ್ತಿಮಾನ್ ಕರಣ ರೂಪಃ । ಪ್ರಾಣಮಯಃ ಕ್ರಿಯಾಶಕ್ತಿಮಾನ್ ಕಾರ್ಯರೂಪಃ ಯೋಗ್ಯತ್ವಾದೇವಮ್ ಏತೇಷಾಂ ವಿಭಾಗಃ ಇತಿ ವರ್ಣಯಂತಿ ಏತತ್ಕೋಶತ್ರಯಂ ಮಿಲಿತಂ ಸತ್ ಸೂಕ್ಷ್ಮಶರೀರಮ್ ಇತ್ಯುಚ್ಯತೆ ॥೮೯॥**

೮೯. ಈ ಕೋಶಗಳ ನಡುವೆ ಜ್ಞಾನಶಕ್ತಿಯನ್ನುಳ್ಳ ವಿಜ್ಞಾನಮಯ
(ಕೋಶ)ವು ಕರ್ತೃರೂಪವುಳ್ಳದ್ದು.[1] ಇಚ್ಛಾಶಕ್ತಿಯನ್ನುಳ್ಳ ಮನೋಮಯ
(ಕೋಶ)ವು ಕರಣರೂಪವುಳ್ಳದ್ದು.[2] ಕ್ರಿಯಾಶಕ್ತಿಯನ್ನುಳ್ಳ ಪ್ರಾಣಮಯ
(ಕೋಶ)ವು ಕಾರ್ಯರೂಪವುಳ್ಳದ್ದು.[3] ಯೋಗ್ಯತೆಗೆ[4] ತಕ್ಕಂತೆ ಹೀ
ಅವುಗಳ ವಿಭಾಗವು (ಮಾಡಲ್ಪಟ್ಟಿದೆ) ಎಂದು ವರ್ಣಿಸುತ್ತಾರೆ. ಈ ಮೂರ
ಕೋಶಗಳೂ ಸೇರಿ 'ಸೂಕ್ಷ್ಮಶರೀರ'[5] ಎಂದು ಹೇಳಲ್ಪಟ್ಟಿದೆ.

1 ಬುದ್ಧಿಯು ಅಥವಾ ವಿಜ್ಞಾನವು ಆತ್ಮನಿಗೆ ಅತ್ಯಂತ ಹತ್ತಿರವಾಗಿರುವುದರಿಂದ
ದಕ್ಕೆ ಜ್ಞಾನಶಕ್ತಿಯಿರುವಂತೆ ಕಾಣುತ್ತದೆ. ಬೃಹದಾರಣ್ಯಕೋಪನಿಷತ್ತು (೪.೩.೭)
ೀಗೆನ್ನುತ್ತದೆ: ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದಿ ಅಂತರ್ಜ್ಯೋತಿಃ
ುರುಷಃ, 'ವಿಜ್ಞಾನಮಯನೂ ಇಂದ್ರಿಯಗಳ ನಡುವೆಯಿರುವವನೂ ಬುದ್ಧಿಯ
ರುವ ಸ್ವಯಂಜ್ಯೋತಿಯೂ ಆದ ಈ ಪುರುಷನು.' ವಿಜ್ಞಾನಮಯಕೋಶದೊಡನೆ
ಾದಾತ್ಮ್ಯವನ್ನು ಕಲ್ಪಿಸಿಕೊಂಡಿರುವುದರಿಂದ ಆತ್ಮನಿಗೆ ಕರ್ತೃತ್ವವೊದಗಿರುತ್ತದೆ.
ಕರ್ತೃತ್ವ ಭಾವನೆಯನ್ನು ವಿಜ್ಞಾನಮಯಕೋಶಕ್ಕೂ ಅನ್ವಯಿಸಬಹುದು.

2 ಇಚ್ಛೆಯೆಂದರೆ ಕಾಮವೇ. 'ಕಾಮ, ಸಂಶಯ, ಸಂಕಲ್ಪ . . . ಇವೆಲ್ಲವೂ
ನಸ್ಸೇ' (ಬೃ.ಉ. ೧೫.೩) ಎಂದು ಶ್ರುತಿವಾಕ್ಯವಿರುವುದರಿಂದ ಇಚ್ಛೆಯು ಮನಸ್ಸಿನ
ೃತ್ತಿಯೇ. ಆದುದರಿಂದಲೇ ಮನೋಮಯಕೋಶಕ್ಕೆ ಇಚ್ಛಾಶಕ್ತಿಯನ್ನು ಹೇಳಿದೆ
ನಸ್ಸು ಇಂದ್ರಿಯಗಳೊಡನೆ ಕೂಡಿರುವಾಗ ಮಾತ್ರ ನಮಗೆ ಅರಿವುಂಟಾಗುವುದರಿಂದ
ನಸ್ಸು ಕರಣವು.

3 ರಥಕ್ಕೆ ಕುದುರೆಯು ಕಟ್ಟಲ್ಪಟ್ಟಿರುವಂತೆ ಈ ಶರೀರದಲ್ಲಿ ಪ್ರಾಣವು ಕಟ್ಟಲ್ಪ
ರುತ್ತದೆ (ಛಾಂ.ಉ. ೮.೧೨.೩). ರಥಕ್ಕೆ ಚಲನೆಯು ಕುದುರೆಯಿಂದೊದಗುವಂತೆ
ಶರೀರಕ್ಕೆ ಕ್ರಿಯಾಶಕ್ತಿಯು ಪ್ರಾಣದಿಂದಲೇ ಉಂಟಾಗಿರುತ್ತದೆ.

4 ಶಕ್ತಿ ಮತ್ತು ಸ್ವರೂಪ–ಇವುಗಳಿಗೆ ತಕ್ಕಂತೆ.

5 ಜೀವನು ಸೂಕ್ಷ್ಮಶರೀರ ಸಮೇತನಾಗಿಯೇ ದೇಹವನ್ನು ಬಿಡುತ್ತಾನೆ,
ತ್ತೊಂದು ದೇಹವನ್ನು ಪಡೆಯುತ್ತಾನೆ.

**ಅತ್ರಾಪಿ ಅಖಿಲಸೂಕ್ಷ್ಮಶರೀರಮ್ ಏಕಬುದ್ಧಿವಿಷಯತಯಾ ನವತ್ ಜಲಾಶಯವದ್ ವಾ ಸಮಷ್ಟಿಃ, ಅನೇಕಬುದ್ಧಿವಿಷಯ– ಯಾ ವೃಕ್ಷವತ್ ಜಲವದ್ ವಾ ವ್ಯಷ್ಟಿರಪಿ ಭವತಿ ॥೯೦॥**

೯೦. ಇಲ್ಲಿಯೂ ಕೂಡ ಎಲ್ಲ ಸೂಕ್ಷ್ಮಶರೀರಗಳನ್ನೂ ಒಂದು ಎಂಬ
ೃಷ್ಟಿಯಿಂದ ನೋಡಿದಾಗ, ಕಾಡಿನಂತೆ ಅಥವಾ ಜಲಾಶಯದಂತೆ, ಸಮಷ್ಟಿ
ಾಗುತ್ತದೆ; ಅನೇಕ ಎಂಬ ದೃಷ್ಟಿಯಿಂದ ನೋಡಿದಾಗ, ಮರದಂತೆ ಅಥವಾ
ೀರಿನ ಕಣದಂತೆ, ವ್ಯಷ್ಟಿಯೂ ಆಗುತ್ತದೆ.

ಅಜ್ಞಾನವನ್ನು ಹೇಗೆ ವ್ಯಷ್ಟಿಯಾಗಿ ಅಥವಾ ಸಮಷ್ಟಿಯಾಗಿ ಪರಿಗಣಿಸಬಹುದೋ ಹಾಗೆಯೇ ಸೂಕ್ಷ್ಮಶರೀರಗಳನ್ನೂ ಸಹ ವ್ಯಷ್ಟಿಯ ಅಥವಾ ಸಮಷ್ಟಿಯ ದೃಷ್ಟಿಯಿಂ ಪರಿಗಣಿಸಬಹುದು.

### ಹಿರಣ್ಯಗರ್ಭ

**ಏತತ್ ಸಮಷ್ಟಿ-ಉಪಹಿತಂ ಚೈತನ್ಯಂ ಸೂತ್ರಾತ್ಮಾ ಹಿರಣ್ ಗರ್ಭಃ ಪ್ರಾಣಶ್ಚ ಇತ್ಯುಚ್ಯತೇ ಸರ್ವತ್ರ ಅನುಸ್ಯೂತತ್ವಾತ್ ಜ್ಞಾನ ಇಚ್ಛಾಕ್ರಿಯಾಶಕ್ತಿಮತ್ ಉಪಹಿತತ್ವಾಚ್ಚ ॥೯೧॥**

೯೧. ಈ ಸಮಷ್ಟಿ(ಸೂಕ್ಷ್ಮಶರೀರವನ್ನು) ಉಪಾಧಿಯಾಗಿ ಹೊಂದಿರು ಚೈತನ್ಯವು 'ಸೂತ್ರಾತ್ಮ,[1]' 'ಹಿರಣ್ಯಗರ್ಭ'[2] ಮತ್ತು 'ಪ್ರಾಣ'[3] ಎಂ ಕರೆಯಲ್ಪಡುತ್ತದೆ; ಏಕೆಂದರೆ (ಅದು) ಎಲ್ಲದರಲ್ಲೂ ಹೊಕ್ಕಿರುತ್ತದೆ ಮತ ಜ್ಞಾನಶಕ್ತಿ-ಇಚ್ಛಾಶಕ್ತಿ-ಕ್ರಿಯಾಶಕ್ತಿಗಳಿಂದ ಕೂಡಿದ (ಕೋಶತ್ರಯವನ್ನು ಉಪಾಧಿಯಾಗಿ ಹೊಂದಿರುತ್ತದೆ.

1 ಹೂವುಗಳ ಅಥವಾ ಮಣಿಗಳ ನಡುವೆ ಇರುವ ದಾರದಂತೆ ಸಕಲ ಜೀವಿ ಸೂಕ್ಷ್ಮಶರೀರಗಳಲ್ಲೂ ಹೊಕ್ಕಿರುವುದರಿಂದ ಅವನು 'ಸೂತ್ರಾತ್ಮ'. ಬೃಹದಾರ ಕೋಪನಿಷತ್ತು (೩.೭.೨) ಹೀಗೆನ್ನುತ್ತದೆ: ವಾಯುರ್ವೈ ಗೌತಮ ತತ್ಸೂತ್ ವಾಯುನಾ ವೈ ಗೌತಮ ಸೂತ್ರೇಣ ಅಯಂ ಚ ಲೋಕಃ ಪರಶ್ಚ ಲೋಕಃ ಸವಾ ಚ ಭೂತಾನಿ ಸಂದೃಬ್ಧಾನಿ ಭವಂತಿ, 'ಗೌತಮ, ವಾಯುವೇ ಆ ಸೂತ್ರ ವಾಯುವೆಂಬ ಆ ಸೂತ್ರದಿಂದಲೇ ಈ ಲೋಕವೂ ಪರಲೋಕವೂ ಎಲ್ಲ ಪ್ರಾಣಿಗ ಪೋಣಿಸಲ್ಪಟ್ಟಿವೆ.'

2 ಹಿರಣ್ಯಗರ್ಭಃ ಸಮವರ್ತತಾಗ್ರೇ (ಋ.ಸಂ. ೧೦.೧೨೧.೧) ಎಂಬ ಋ ಮೇಲೆ ವ್ಯಾಖ್ಯಾನ ಮಾಡುವಾದ ಶ್ರೀ ಸಾಯಣರು ಹೀಗೆಂದಿರುತ್ತಾರೆ: ಹಿರ ಯಸ್ಯ ಅಂಡಸ್ಯ ಗರ್ಭಭೂತಃ ಪ್ರಜಾಪತಿಃ ಹಿರಣ್ಯಗರ್ಭಃ, 'ಚಿನ್ನದಂತಿರುವ(ಪ್ರಪ ವೆಂಬ) ಮೊಟ್ಟೆಗೆ ಗರ್ಭದಂತಿರುವ ಪ್ರಜಾಪತಿಯೇ ಹಿರಣ್ಯಗರ್ಭನು'. ಶಾಸ್ತ್ರಗ್ರ ಗಳಲ್ಲಿ ಸೂಕ್ಷ್ಮಾವಸ್ಥೆಯಲ್ಲಿರುವ ಸೃಷ್ಟಿಪೂರ್ವದ ಜಗತ್ತನ್ನು ಥಳಥಳಿಸುತ್ತಿ ಚಿನ್ನದ ಮೊಟ್ಟೆಗೆ ಹೋಲಿಸಿದೆ. ಅದನ್ನು ತನ್ನ ಗರ್ಭದಲ್ಲಿಟ್ಟುಕೊಂಡಿರುವ ಸೃ ಕರ್ತೃವಾದ ಪ್ರಜಾಪತಿಯೇ ಹಿರಣ್ಯಗರ್ಭ.

ಹಿರಣ್ಯಗರ್ಭಂ ಜನಯಾಮಾಸ ಪೂರ್ವಮ್ ಎಂಬ ಶ್ವೇತಾಶ್ವತರದ (೩.೪) ಮಂತ್ರದ ಮೇಲಿನ ಭಾಷ್ಯದಲ್ಲಿ ಶ್ರೀಶಂಕರರು ಹೀಗೆ ಹೇಳಿರುತ್ತಾರೆ: ಹಿತಂ ರಮಣೀಯಮ್ ಅತ್ಯುಜ್ಜ್ವಲಂ ಜ್ಞಾನಂ ಗರ್ಭಃ ಅಂತಸ್ಸಾರಃ ಯಸ್ಯ ತಮ್, 'ಹಿತವೂ (ಎಂದರೆ) ರಮಣೀಯವೂ ಅತ್ಯುಜ್ಜ್ವಲವೂ ಆದ ಜ್ಞಾನವು ಯಾರಿಗೆ ಗರ್ಭವೋ, ಎಂದರೆ ಅಂತಸ್ಸಾರವೋ, ಅಂಥವನು (ಹಿರಣ್ಯಗರ್ಭನು)'.

ಆದುದರಿಂದ ಹಿರಣ್ಯಗರ್ಭನು ಜಗತ್ಕರ್ತೃವು ಮತ್ತು ಜ್ಞಾನಸ್ವರೂಪನು. ಜ್ಞಾನದೊಂದಿಗೆ ಇಚ್ಛೆಯೂ ಇರುವುದರಿಂದ ಅವನು ಇಚ್ಛಾಶಕ್ತಿಸ್ವರೂಪನೂ ಹೌದು.

3 ಜಗತ್ತನ್ನು ಸೃಷ್ಟಿಮಾಡುವಾಗ ಅವನ ಕ್ರಿಯಾಶಕ್ತಿಯು ಪ್ರಧಾನವಾಗಿ ಕಂಡುಬರುವುದರಿಂದ ಅವನು 'ಪ್ರಾಣ' ನೂ ಹೌದು.

ಕತಮ ಏಕೋ ದೇವಃ? ಪ್ರಾಣ ಇತಿ, "ಒಂದು ದೇವತೆ ಯಾವುದು?" ಪ್ರಾಣ". (ಬೃ.ಉ. ೩.೯.೯)

ಮೂಲದಲ್ಲಿ ಪ್ರಾಣ ಇತಿ ಚ ಎಂದು ಚಕಾರವನ್ನು ಪ್ರಯೋಗಿಸಿರುವುದರಿಂದ ಪ್ರಜಾಪತಿ, ಚತುರ್ಮುಖ ಬ್ರಹ್ಮ ಮೊದಲಾದ ಇತರ ಹೆಸರುಗಳನ್ನೂ ಗ್ರಹಿಸಬೇಕು.

4 ವಿಜ್ಞಾನಮಯ, ಮನೋಮಯ, ಪ್ರಾಣಮಯ.

**ಅಸ್ಯೈಷಾ ಸಮಷ್ಟಿಃ ಸ್ಥೂಲಪ್ರಪಂಚಾಪೇಕ್ಷಯಾ ಸೂಕ್ಷ್ಮತ್ವಾತ್ ಸೂಕ್ಷ್ಮಶರೀರಂ ವಿಜ್ಞಾನಮಯಾದಿಕೋಶತ್ರಯಂ ಜಾಗ್ರದ್ವಾಸನಾಮಯತ್ವಾತ್ ಸ್ವಪ್ನಃ ಅತ ಏವ ಸ್ಥೂಲಪ್ರಪಂಚಲಯಸ್ಥಾನಮಿತಿ ಚ ಉಚ್ಯತೇ ॥೯೨॥**

೯೨. ಅದರ[1] ಈ ಸಮಷ್ಟಿಯು, (ಎಂದರೆ) ವಿಜ್ಞಾನಮಯವೇ ಮೊದಲಾದ ಕೋಶತ್ರಯವು, ಸ್ಥೂಲಪ್ರಪಂಚಕ್ಕೆ ಹೋಲಿಸಿದರೆ ಸೂಕ್ಷ್ಮವಾಗಿರುವುದರಿಂದ ಸೂಕ್ಷ್ಮಶರೀರವೆಂದೂ, ಜಾಗ್ರದವಸ್ಥೆಯ[2] ಸಂಸ್ಕಾರಗಳಿಂದ ಕೂಡಿರುವ ಕಾರಣ ಸ್ವಪ್ನವೆಂದೂ, ಆದುದರಿಂದಲೇ ಸ್ಥೂಲಪ್ರಪಂಚದ ಲಯಸ್ಥಾನವೆಂದೂ[3] ಹೇಳಲ್ಪಡುತ್ತದೆ.

1 ಹಿರಣ್ಯಗರ್ಭನ.

2 ಹಿರಣ್ಯಗರ್ಭನ ಜಾಗ್ರದವಸ್ಥೆ. ಇದನ್ನು ಮುಂದೆ ವಿರಾಟ್ ಎಂದು ಕರೆದಿ ನಮ್ಮ ಜಾಗ್ರದವಸ್ಥೆಯಲ್ಲಿ ಉಂಟಾದ ಅನುಭವಗಳ ಸಂಸ್ಕಾರವು ಸ್ವಪ್ನದಲ್ಲಿ ಪ್ರ ವಾಗುತ್ತದೆಯಷ್ಟೆ. ಹಾಗೆಯೇ ನಮ್ಮ ಜಾಗ್ರದವಸ್ಥೆಯನ್ನು ಹೋಲುವ ವಿರಾ ಅವಸ್ಥೆಯ ಸಂಸ್ಕಾರಗಳು ಹಿರಣ್ಯಗರ್ಭನಲ್ಲಿ ವ್ಯಕ್ತವಾಗುತ್ತವೆ. ಇದು ಜಾಗ್ರ ಸುಷುಪ್ತಿಗಳ ಸಂಧಿಸ್ಥಾನ.

3 ಹಿರಣ್ಯಗರ್ಭಾವಸ್ಥೆಯಲ್ಲಿ ಪ್ರಪಂಚವು ಸೂಕ್ಷ್ಮರೂಪದಿಂದ ಲೀನವಾ ನೆಲಸಿರುತ್ತದೆ; ಜಾಗ್ರದವಸ್ಥೆಯ ನಮ್ಮ ಅನುಭವಗಳು ಸ್ವಪ್ನಾವಸ್ಥೆಯಲ್ಲಿ ಸೂಕ್ಷ್ಮ ರೂಪದಿಂದ ಲೀನವಾಗಿ ನೆಲಸಿರುವಂತೆ.

### ತೈಜಸ

**ಏತದ್-ವ್ಯಷ್ಟಿ-ಉಪಹಿತಂ ಚೈತನ್ಯಂ ತೈಜಸೋ ಭವತಿ ತೇಜೋ ಮಯ-ಅಂತಃಕರಣ-ಉಪಹಿತತ್ವಾತ್ ॥೯೩॥**

೯೩. ಈ (ಸೂಕ್ಷ್ಮಶರೀರಗಳ) ವ್ಯಷ್ಟಿಯನ್ನು ಉಪಾಧಿಯಾಗಿ ಹೊಂ ರುವ ಚೈತನ್ಯವು ತೈಜಸವಾಗುತ್ತದೆ ; ಏಕೆಂದರೆ (ಅದಕ್ಕೆ) ತೇಜೋಮ ವಾದ ಅಂತಃಕರಣವು ಉಪಾಧಿಯಾಗಿರುತ್ತದೆ.

ಅಂತಃಕರಣವು ಸತ್ತ್ವಗುಣಪ್ರಧಾನವಾಗಿರುವುದರಿಂದ ತೇಜೋಮಯವೆನ್ನಿಸಿ ಇದನ್ನು ಉಪಾಧಿಯಾಗಿ ಹೊಂದಿರುವುದರಿಂದಲೇ ವ್ಯಷ್ಟಿಚೈತನ್ಯವು ತೈಜಸವೆನ್ನಿಸಿದೆ

**ಅಸ್ಯ ಅಪಿ ಇಯಂ ವ್ಯಷ್ಟಿಃ ಸ್ಥೂಲಶರೀರ–ಅಪೇಕ್ಷಯ ಸೂಕ್ಷ್ಮತ್ವಾತ್ ಇತಿ ಹೇತೋಃ ಏವ ಸೂಕ್ಷ್ಮಶರೀರಂ ವಿಜ್ಞಾನ ಮಯಾದಿಕೋಶತ್ರಯಂಜಾಗ್ರದ್ವಾಸನಾಮಯತ್ವಾತ್ ಸ್ವಪ್ನಃ ಅ ಏವ ಸ್ಥೂಲಶರೀರಲಯಸ್ಥಾನಮಿತಿ ಚ ಉಚ್ಯತೇ ॥೯೪॥**

೯೪. (ಈ) ತೈಜಸದ ವ್ಯಷ್ಟಿಯು ಕೂಡ, ಎಂದರೆ ವಿಜ್ಞಾನಮಯ ಮೊದಲಾದ ಕೋಶತ್ರಯವು, ಸ್ಥೂಲಶರೀರಕ್ಕಿಂತ ಸೂಕ್ಷ್ಮವಾಗಿರುವು ಎಂಬ ಕಾರಣದಿಂದಲೇ ಸೂಕ್ಷ್ಮಶರೀರವೆಂದೂ ಜಾಗ್ರದವಸ್ಥೆಯ ವಾಸನೆಗಳಿ ಕೂಡಿರುವ ಕಾರಣ ಸ್ವಪ್ನವೆಂದೂ, ಆದುದರಿಂದಲೇ ಸ್ಥೂಲಶರೀರದ ಲ ಸ್ಥಾನವೆಂದೂ ಹೇಳಲ್ಪಡುತ್ತದೆ.

**ಏತೌ ಸೂತ್ರಾತ್ಮ-ತೈಜಸೌ ತದಾನೀಂ ಮನೋವೃತ್ತಿಭಿಃ ಸೂಕ್ಷ್ಮ-ವಿಷಯಾನ್ ಅನುಭವತಃ, 'ಪ್ರವಿವಿಕ್ತಭುಕ್ ತೈಜಸಃ' (ಮಾಂ.ಉ.೪.) ಇತ್ಯಾದಿಶ್ರುತೇಃ ।೯೫॥**

೯೫. ಆಗ[1] ಈ ಸೂತ್ರಾತ್ಮ-ತೈಜಸರು ಮನೋವೃತ್ತಿಗಳ[2] ಮೂಲಕ ಸೂಕ್ಷ್ಮವಿಷಯಗಳನ್ನು ಅನುಭವಿಸುತ್ತಾರೆ. 'ಸೂಕ್ಷ್ಮಭೋಗಿಯಾದ ತೈಜಸನು' ಎಂಬಿವೇ ಮೊದಲಾದ[3] ಶ್ರುತಿಯಿಂದ (ಮಾಂ.ಉ. ೪) (ಹೀಗೆ ತಿಳಿದುಬರುತ್ತದೆ).

1 ಸ್ವಪ್ನಕಾಲದಲ್ಲಿ.

2 ಏಕೆಂದರೆ ಆಗ ಬಾಹ್ಯವಸ್ತುಗಳಿರುವುದಿಲ್ಲ.

ಸ್ವಪ್ನದಲ್ಲಿ ಕಾಣುವ ವಸ್ತುಗಳು ತೋರ್ಕೆಯ ವಸ್ತುಗಳೇ ('ಪ್ರಾತಿಭಾಸಿಕ') ವಿನಾ ನಿಜವಲ್ಲ. ನೇರವಾಗಿ ವಸ್ತುಗಳು ಅನುಭವಗೋಚರವಾದುದರಿಂದ ಸ್ವಪ್ನವು ಸ್ಮೃತಿಯಲ್ಲ. ಅದು ಸುಷುಪ್ತಿಯೂ ಅಲ್ಲ; ಏಕೆಂದರೆ ಸುಷುಪ್ತಿಯಲ್ಲಿ ಯಾವುದೂ ಗೋಚರಿಸುವುದಿಲ್ಲ. ಹಾಗೆಯೇ ಅದು ಜಾಗ್ರತ್ತೂ ಅಲ್ಲ; ಏಕೆಂದರೆ ಅಲ್ಲಿ ಗೋಚರಿಸುವ ವಸ್ತುಗಳಿಗೆ ದೇಶ ಕಾಲ ನಿಮಿತ್ತಗಳ ದೃಷ್ಟಿಯಿಂದ ಸತ್ಯತ್ವವಿರುವುದಿಲ್ಲ. ಆದ್ದರಿಂದಲೇ ಬೃಹದಾರಣ್ಯಕವು (೪.೩.೧೦) ಹೀಗೆನ್ನುತ್ತದೆ: ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ ಅಥ ರಥಾನ್ ಪಥಃ ಸೃಜತೇ, 'ಸ್ವಪ್ನದಲ್ಲಿ ರಥಗಳಾಗಲಿ ಅವುಗಳಿಗೆ ಕಟ್ಟಲ್ಪಡುವ (ಕುದುರೆಯೇ ಮೊದಲಾದ) ಪ್ರಾಣಿಗಳಾಗಲಿ ರಸ್ತೆಗಳಾಗಲಿ ಇರುವುದಿಲ್ಲ; ಆದರೆ ಆವನು ರಥಗಳನ್ನೂ ಪ್ರಾಣಿಗಳನ್ನೂ ರಸ್ತೆಗಳನ್ನೂ ಸೃಷ್ಟಿಸಿಕೊಳ್ಳುತ್ತಾನೆ.'

3 ತಸ್ಮಾದೇಷ ಪ್ರವಿವಿಕ್ತ-ಆಹಾರತರಃ ಇವೈವ ಭವತಿ, 'ಆದುದರಿಂದ ಈ (ಸ್ಥೂಲಶರೀರಕ್ಕಿಂತ) ಲಿಂಗಶರೀರವು ಹೆಚ್ಚು ಸೂಕ್ಷ್ಮವಾದ ಆಹಾರವನ್ನು ಪಡೆದಿರುತ್ತದೆ.' (ಬೃ.ಉ. ೪.೨.೩)

**ಅತ್ರಾಪಿ ಸಮಷ್ಟಿವ್ಯಷ್ಟ್ಯೋಃ ತದುಪಹಿತಸೂತ್ರಾತ್ಮತೈಜಸಯೋಃ ವನವೃಕ್ಷವತ್ ತದವಚ್ಛಿನ್ನ-ಆಕಾಶವಚ್ಚ ಜಲಾಶಯ-ಜಲವತ್ ತದ್ಗತ-ಪ್ರತಿಬಿಂಬ-ಆಕಾಶವಚ್ಚ ಅಭೇದಃ ॥೯೬॥**

೯೬. ಇಲ್ಲಿಯೂ ಕೂಡ ಸಮಷ್ಟಿವ್ಯಷ್ಟಿಗಳಲ್ಲಿ, ಅವುಗಳನ್ನು ಉಪಾಧಿಯಾಗಿ ಹೊಂದಿರುವ ಸೂತ್ರಾತ್ಮ-ತೈಜಸರಲ್ಲಿ, ಕಾಡು ಮತ್ತು ಮರಗಳು ಇವುಗಳಂತೆ ಮತ್ತು ಅವುಗಳಿಂದ ಆವೃತವಾದ ಆಕಾಶದಂತೆ, ಹಾಗೆಯೇ ಜಲಾಶಯ ನೀರಿನ ಕಣ ಇವುಗಳಂತೆ ಮತ್ತು ಅವುಗಳನ್ನು ಹೊಕ್ಕಿರುವ ಆಕಾಶದ ಪ್ರತಿಬಿಂಬದಂತೆ, ಅಭೇದವಿರುತ್ತದೆ.

**ಏವಂ ಸೂಕ್ಷ್ಮಶರೀರೋತ್ಪತ್ತಿಃ ॥೯೭॥**

೯೭. ಹೀಗೆ ಸೂಕ್ಷ್ಮಶರೀರಗಳು ಉತ್ಪನ್ನವಾಗುತ್ತವೆ.

ಸ್ಥೂಲಭೂತಗಳು

**ಸ್ಥೂಲಭೂತಾನಿ ತು ಪಂಚೀಕೃತಾನಿ ॥೯೮॥**

೯೮. ಆದರೆ ಸ್ಥೂಲಭೂತಗಳು ಪಂಚೀಕರಣದಿಂದ ಉಂಟಾಗಿವೆ.

ಮೂಲದಲ್ಲಿರುವ ತು ಶಬ್ದವು ('ಆದರೆ') ಸೂಕ್ಷ್ಮಭೂತಗಳಿಗೂ ಸ್ಥೂಲಭೂತಗಳಿಗೂ ಇರುವ ವ್ಯತ್ಯಾಸವನ್ನು ಸೂಚಿಸುತ್ತದೆ.

ಪಂಚೀಕರಣ

**ಪಂಚೀಕರಣಂ ತು ಆಕಾಶಾದಿಪಂಚಸು ಏಕೈಕಂ ದ್ವಿಧಾ ಸಮಂ ವಿಭಜ್ಯ, ತೇಷು ದಶಸು ಭಾಗೇಷು ಪ್ರಾಥಮಿಕಾನ್ ಪಂಚಭಾಗಾನ್ ಪ್ರತ್ಯೇಕಂ ಚತುರ್ಧಾ ಸಮಂ ವಿಭಜ್ಯ, ತೇಷಾಂ ಚತುರ್ಣಾಂ ಭಾಗಾನಾಂ ಸ್ವಸ್ವದ್ವಿತೀಯಾರ್ಧಭಾಗಪರಿತ್ಯಾಗೇನ ಭಾಗಾಂತರೇಷು ಯೋಜನಮ್ ॥೯೯॥**

೯೯. ಪಂಚೀಕರಣವೆಂದರೆ: ಆಕಾಶಾದಿ ಪಂಚ (ಸೂಕ್ಷ್ಮಭೂತಗಳಲ್ಲಿ) ಒಂದೊಂದನ್ನೂ ಎರಡು ಸಮಭಾಗಗಳನ್ನಾಗಿ ವಿಂಗಡಿಸಿ, ಆ ಹತ್ತು ಭಾಗಗಳಲ್ಲಿ ಮೊದಲ ಐದು ಭಾಗಗಳನ್ನು ಪ್ರತ್ಯೇಕವಾಗಿ ನಾಲ್ಕು ಸಮಭಾಗಗಳಾಗಿ ವಿಂಗಡಿಸಿ, ಆ ನಾಲ್ಕು ಭಾಗಗಳನ್ನು ತಮ್ಮ ತಮ್ಮ (ಜಾತಿಗೆ ಸೇರಿದ) ಅರ್ಧ ಭಾಗವನ್ನು ಬಿಟ್ಟು ಇತರ ಭಾಗಗಳೊಂದಿಗೆ ಸೇರಿಸುವುದು.

ಸೃಷ್ಟಿಯ ಪ್ರಾರಂಭದಲ್ಲುಂಟಾದ ಸೂಕ್ಷ್ಮಭೂತಗಳು ಪರಸ್ಪರ ಸಂಯೋಗವನ್ನು ೊಂದದೇ ಇರುವುದರಿಂದ ವ್ಯಾವಹಾರಿಕ ಪ್ರಪಂಚಕ್ಕೆ ಯೋಗ್ಯವಾದ ವಸ್ತುಗಳನ್ನು ುತ್ಪಾದಿಸಲು ಅಸಮರ್ಥವಾಗಿರುತ್ತವೆ. ಪಂಚೀಕರಣದಿಂದ ಅವು ಸ್ಥೂಲತ್ವವನ್ನು ೊಂದಿ ವ್ಯವಹಾರಯೋಗ್ಯವಾಗುತ್ತವೆ.

ಇಲ್ಲಿ ವಿವರಿಸಿರುವ ಪಂಚೀಕರಣವನ್ನು ಈ ಸಮೀಕರಣದ ಮೂಲಕ ಹೀಗೆ ೂಚಿಸಬಹುದು :

1 (ಭಾಗ) ಸ್ಥೂಲಪೃಥಿವಿ = $\frac{1}{2}$ ಸೂಕ್ಷ್ಮಪೃಥಿವಿ + $\frac{1}{8}$ ನೀರು + $\frac{1}{8}$ ಬೆಂಕಿ + $\frac{1}{8}$ ವಾಯು + $\frac{1}{8}$ ಆಕಾಶ

ಇನ್ನುಳಿದ ಭೂತಗಳ ವಿಷಯದಲ್ಲೂ ಹೀಗೆಯೇ ಅರಿಯಬೇಕು.

**ತದುಕ್ತಮ್—**

**'ದ್ವಿಧಾ ವಿಧಾಯ ಚೈಕೈಕಂ ಚತುರ್ಧಾ ಪ್ರಥಮಂ ಪುನಃ।**
**ಸ್ವಸ್ವೇತರದ್ವಿತೀಯಾಂಶೈರ್ಯೋಜನಾತ್ ಪಂಚ ಪಂಚ ತೇ'**
**ಇತಿ ॥೧೦೦॥**

೧೦೦. ಅದನ್ನು ಹೀಗೆ ಹೇಳಿದೆ: 'ಒಂದೊಂದು (ಸೂಕ್ಷ್ಮಭೂತ ವನ್ನೂ)ಎರಡು ಭಾಗಗಳಾಗಿ ಮಾಡಿ, ಪುನಃ ಅವುಗಳ ಒಂದೊಂದು ಭಾಗವನ್ನು ನಾಲ್ಕು ಭಾಗಗಳಾಗಿ ಮಾಡಿ, ಪ್ರತಿಯೊಂದು ಪಂಚೀಕೃತಭೂತವೂ ತನ್ನದಾದ ಅರ್ಧಾಂಶದೊಂದಿಗೆ ಉಳಿದ ನಾಲ್ಕು ಭೂತಗಳ ಎಂಟನೆಯ ಒಂದಂಶವನ್ನು ಒಳಸಿಕೊಂಡಿರುವಂತೆ (ಭಗವಂತನು) ಮಾಡಿದನು.'[1]

1 ಪಂಚದಶೀ ೧.೨೭.

**ಅಸ್ಯ ಅಪ್ರಾಮಾಣ್ಯಂ ನ ಆಶಂಕನೀಯಂ ತ್ರಿವೃತ್ಕರಣಶ್ರುತೇಃ ಪಂಚೀಕರಣಸ್ಯ ಅಪಿ ಉಪಲಕ್ಷಣತ್ವಾತ್ ॥೧೦೧॥**

೧೦೧. ಇದಕ್ಕೆ ಪ್ರಮಾಣವಿಲ್ಲವೆಂದು ಶಂಕಿಸಬಾರದು ; ಏಕೆಂದರೆ ತ್ರಿವೃತ್ಕರಣವನ್ನು ಹೇಳುವ ಶ್ರುತಿಯು ಪಂಚೀಕರಣಕ್ಕೂ ಉಪಲಕ್ಷಣ ವಾಗಿರುತ್ತದೆ.

ಛಾಂದೋಗ್ಯೋಪನಿಷತ್ತಿನಲ್ಲಿ (೬.೩.೩) ತ್ರಿವೃತ್ಕರಣವನ್ನು ಈ ರೀತಿ ಹೇಳಿರ ತ್ತದೆ: ತಾಸಾಂ ತ್ರಿವೃತಂ ತ್ರಿವೃತಮ್ ಏಕೈಕಾಂ ಕರವಾಣೀತಿ ಸೇಯಂ ದೇವತ ಇಮಾಃ ತಿಸ್ರೋ ದೇವತಾ ಅನೇನೈವ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೆ ವ್ಯಾಕರೋತ್, " ' ಅವುಗಳಲ್ಲಿ ಒಂದೊಂದನ್ನೂ ಮೂರುಮೂರಾಗಿ ಮಾಡುತ್ತೇನೆ ಎಂದು ಯೋಚಿಸಿ ಆ ಈ ದೇವತೆಯು ಜೀವಾತ್ಮರೂಪದಿಂದಲೇ ಈ ಮೂರು ದೇವ ಗಳನ್ನು (ತೇಜಸ್ಸು, ನೀರು, ಪೃಥ್ವಿ) ಪ್ರವೇಶಿಸಿ ನಾಮರೂಪಗಳನ್ನು ವಿಂಗಡಿಸಿತು.

ಇದರ ಪ್ರಕಾರ ನಮ್ಮ ಸಮೀಕರಣವು ಹೀಗಾಗುತ್ತದೆ.

1 ಸ್ಥೂಲತೇಜಸ್ಸು $=\frac{1}{2}$ ಸೂಕ್ಷ್ಮತೇಜಸ್ಸು $+\frac{1}{4}$ ಸೂಕ್ಷ್ಮನೀರು $+\frac{1}{4}$ ಸೂಕ್ಷ್ಮ ಪೃಥ್ವಿ. ಉಳಿದವೂ ಹಾಗೆಯೇ.

ಶ್ರುತಿಗಳಲ್ಲಿ ಪಂಚೀಕರಣವನ್ನು ನೇರವಾಗಿ ಹೇಳಿಲ್ಲ, ತ್ರಿವೃತ್ಕರಣವನ್ನು ಮಾತ್ರ ಹೇಳಿದೆ. ಆದರೆ ಪಂಚ ಸೂಕ್ಷ್ಮಭೂತಗಳ ಉತ್ಪತ್ತಿಯನ್ನು ಸ್ಪಷ್ಟವಾಗಿಯೇ ಅನೇ ಶ್ರುತಿಗಳು ಹೇಳಿರುತ್ತವೆ. ಆದ್ದರಿಂದ ತ್ರಿವೃತ್ಕರಣದ ಹಿಂದಿರುವ ತತ್ತ್ವವನ್ನ ಅನ್ವಯಿಸಿ ಪಂಚೀಕರಣವನ್ನು ಒಪ್ಪಿಕೊಳ್ಳುವುದರಲ್ಲಿ ಯಾವ ಅಸಮಂಜಸತೆಯು ಇಲ್ಲ.

**ಪಂಚಾನಾಂ ಪಂಚಾತ್ಮಕತ್ವೇ ಸಮಾನೇಽಪಿ ತೇಷು ' ವೈಶೇಷ್ಯಾತ್ತು ತದ್ವಾದಸ್ತದ್ವಾದಃ ' (ಬ್ರ.ಸೂ. ೨.೪.೨೨) ಇ ನ್ಯಾಯೇನ ಆಕಾಶಾದಿ-ವ್ಯಪದೇಶಃ ಸಂಭವತಿ ॥೧೦೨॥**

೧೦೨. ಐದು (ಸ್ಥೂಲಭೂತಗಳಲ್ಲೂ) ಐದು (ಸೂಕ್ಷ್ಮಭೂತಗಳೂ ಇರುವುವು ಎಂಬುದು ಸಮಾನವಾಗಿದ್ದರೂ ' ಆಧಿಕ್ಯದಿಂದ ಆ ಹೆಸರು ಆ ಹೆಸರು ' (ಬ್ರ. ಸೂ. ೨.೪.೨೨) ಎಂಬ ನ್ಯಾಯದಿಂದ ಅವುಗಳ ಆಕಾಶವೇ ಮೊದಲಾದ ಹೆಸರುಗಳು ಸಂಭವಿಸುತ್ತವೆ.

ಸ್ಥೂಲಾಕಾಶದಲ್ಲಿ ಆಕಾಶವಲ್ಲದೆ ಇತರ ನಾಲ್ಕು ಸೂಕ್ಷ್ಮಭೂತಗಳೂ ಇರುವು ರಿಂದ ಅದಕ್ಕೆ ಆಕಾಶ ಎಂಬ ಹೆಸರನ್ನೇ ಏಕೆ ಕೊಡಬೇಕು?—ಎಂಬುದು ಪ್ರಶ್ ಆದರಲ್ಲಿ ಆಕಾಶದ ಅಂಶವು ಅಧಿಕವಾಗಿರುವುದರಿಂದ ಹಾಗೆ ಹೆಸರಿಸಲಾಗಿದೆ ಎಂಬು ಉತ್ತರ.

**ತದಾನೀಮ್ ಆಕಾಶೇ ಶಬ್ದಃ ಅಭಿವ್ಯಜ್ಯತೇ, ವಾಯೌ ಶಬ್ದ ಸ್ಪರ್ಶೌ, ಅಗ್ನೌ ಶಬ್ದ-ಸ್ಪರ್ಶ-ರೂಪಾಣಿ, ಅಪ್ಸು ಶಬ್ದ-ಸ್ಪರ್ಶ-ರೂಪ ರಸಾಃ, ಪೃಥಿವ್ಯಾಂ ಶಬ್ದ-ಸ್ಪರ್ಶ-ರೂಪ-ರಸ-ಗಂಧಾಶ್ಚ ॥೧೦೩॥**

೧೦೩. ಆಗ[1] ಆಕಾಶದಲ್ಲಿ ಶಬ್ದವೂ ವಾಯುವಿನಲ್ಲಿ ಶಬ್ದಸ್ಪರ್ಶಗಳೂ, ಅಗ್ನಿಯಲ್ಲಿ ಶಬ್ದಸ್ಪರ್ಶರೂಪಗಳೂ, ನೀರಿನಲ್ಲಿ ಶಬ್ದಸ್ಪರ್ಶರೂಪರಸಗಳೂ ಮತ್ತು ಪೃಥ್ವಿಯಲ್ಲಿ ಶಬ್ದಸ್ಪರ್ಶರೂಪರಸಗಂಧಗಳೂ ಅಭಿವ್ಯಕ್ತವಾಗುತ್ತವೆ.

1 ಪಂಚೀಕರಣ ಸಮಯದಲ್ಲಿ.

ಸೂಕ್ಷ್ಮಾಕಾಶವು ಪಂಚೀಕರಣದ ಫಲವಾಗಿ ಸ್ಥೂಲಾಕಾಶವಾದಾಗ ಅದರಲ್ಲಿದ್ದ ಶಬ್ದಗುಣ ಅಭಿವ್ಯಕ್ತವಾಗುತ್ತದೆ. ಹಾಗೆಯೇ ಸ್ಥೂಲವಾಯುವಿನಲ್ಲಿ ತನ್ನ ಗುಣವಾದ ಸ್ಪರ್ಶವೂ ತನ್ನ ಕಾರಣ ವಸ್ತುವಾದ ಆಕಾಶದ ಗುಣವಾದ ಶಬ್ದವೂ ಅಭಿವ್ಯಕ್ತವಾಗುತ್ತವೆ. ಹೀಗೆಯೇ ಉಳಿದ ಭೂತಗಳ ವಿಷಯಗಳಲ್ಲಿಯೂ ಅರಿಯಬೇಕು.

### ಚತುರ್ದಶ ಲೋಕಗಳ ಉತ್ಪತ್ತಿ

**ಏತೇಭ್ಯಃ ಪಂಚೀಕೃತೇಭ್ಯಃ ಭೂತೇಭ್ಯಃ ಭೂಃ ಭುವಃ ಸ್ವಃ ಮಹಃ ಜನಃ ತಪಃ ಸತ್ಯಮ್ ಇತಿ ಏತನ್ನಾಮಕಾನಾಮ್ ಉಪರಿ ಉಪರಿ ವಿದ್ಯಮಾನಾನಾಮ್, ಅತಲ-ವಿತಲ-ಸುತಲ-ರಸಾತಲ-ತಲಾತಲ-ಮಹಾತಲ-ಪಾತಾಲ-ನಾಮಕಾನಾಮ್ ಅಧೋಽಧೋ ವಿದ್ಯಮಾನಾನಾಂ ಲೋಕಾನಾಂ ಬ್ರಹ್ಮಾಂಡಸ್ಯ ತದಂತರ್ಗತ-ಚತುರ್ವಿಧ-ಸ್ಥೂಲಶರೀರಾಣಾಂ ತದುಚಿತಾನಾಮ್ ಅನ್ನಪಾನಾದೀನಾಂ ಚ ಉತ್ಪತ್ತಿರ್ಭವತಿ ||೧೦೪||**

೧೦೪. ಈ ಪಂಚೀಕೃತ ಭೂತಗಳಿಂದ, ಮೇಲೆ ಮೇಲೆ ಹಬ್ಬಿರುವ ಭೂ ಭುವ ಸ್ವ ಮಹ ಜನ ತಪ ಮತ್ತು ಸತ್ಯ ಎಂಬ ಹೆಸರಿನ(ಏಳು ಲೋಕಗಳ), ಕೆಳ ಕೆಳಗೆ ಹರಡಿರುವ ಅತಲ ವಿತಲ ಸುತಲ ರಸಾತಲ ತಲಾತಲ ಮಹಾತಲ ಪಾತಾಲ ಎಂಬ ಹೆಸರಿನ (ಏಳು ಲೋಕಗಳ), ಬ್ರಹ್ಮಾಂಡದ, ಅದರಲ್ಲಿರುವ ನಾಲ್ಕುವಿಧದ ಸ್ಥೂಲಶರೀರಗಳ ಮತ್ತು ಅವುಗಳಿಗೆ ಉಚಿತವಾದ ಅನ್ನಪಾನಾದಿಗಳ ಉತ್ಪತ್ತಿಯು ಆಗುತ್ತದೆ.

### ಚತುರ್ವಿಧ ಶರೀರಗಳು

**ಚತುರ್ವಿಧಶರೀರಾಣಿ ತು ಜರಾಯುಜ-ಅಂಡಜ-ಸ್ವೇದಜ-ಉದ್ಭಿಜ್ಜಾಖ್ಯಾನಿ ||೧೦೫||**

೧೦೫. ಚತುರ್ವಿಧಶರೀರಗಳೆಂದರೆ ಜರಾಯುಜ, ಅಂಡಜ, ಸ್ವೇದಜ (ಮತ್ತು) ಉದ್ಭಿಜ್ಜ ಎಂಬ ಹೆಸರುಳ್ಳವು.

**ಜರಾಯುಜಾನಿ ಜರಾಯುಭ್ಯಃ ಜಾತಾನಿ ಮನುಷ್ಯಪಶ್ವಾ-ದೀನಿ|| ||೧೦೬||**

೧೦೬. ಗರ್ಭಾಶಯಗಳಿಂದ ಹುಟ್ಟಿದ ಮನುಷ್ಯರು ಪಶುಗಳು ಮೊದಲಾದುವೇ ಜರಾಯುಜಗಳು.

**ಅಂಡಜಾನಿ ಅಂಡೇಭ್ಯೋ ಜಾತಾನಿ ಪಕ್ಷಿಪನ್ನಗಾದೀನಿ||೧೦೭**

೧೦೭. ಅಂಡಜಗಳೆಂದರೆ ಮೊಟ್ಟೆಯಿಂದ ಹುಟ್ಟಿದ ಹಕ್ಕಿ ಹಾವು ಮೊದಲಾದುವು.

**ಸ್ವೇದಜಾನಿ ಸ್ವೇದೇಭ್ಯಃ ಜಾತಾನಿ ಯೂಕಾಮಶಕಾದೀನಿ ||೧೦೮||**

೧೦೮. ಸ್ವೇದಜಗಳೆಂದರೆ ತೇವದಿಂದ ಹುಟ್ಟಿದ ಹೇನು ಸೊಳ್ಳೆ ಮುಂತಾದುವು.

**ಉದ್ಭಿಜ್ಜಾನಿ ಭೂಮಿಮ್ ಉದ್ಭಿದ್ಯ ಜಾತಾನಿ ಲತಾವೃಕ್ಷಾದೀನಿ ||೧೦೯||**

೧೦೯. ಉದ್ಭಿಜ್ಜಗಳೆಂದರೆ ಭೂಮಿಯನ್ನು ಭೇದಿಸಿ ಹುಟ್ಟಿಬರುವ ಬಳ್ಳಿ ಮರ ಮೊದಲಾದುವು.

**ಅತ್ರಾಪಿ ಚತುರ್ವಿಧಸಕಲಸ್ಥೂಲಶರೀರಮ್ ಏಕ-ಅನೇಕ ಬುದ್ಧಿವಿಷಯತಯಾ ವನವದ್ ಜಲಾಶಯವದ್ವಾ ಸಮಷ್ಟಿಃ ವೃಕ್ಷವದ್ ಜಲವದ್ವಾ ವ್ಯಷ್ಟಿರಪಿ ಭವತಿ ||೧೧೦||**

೧೧೦. ಇಲ್ಲಿಯೂ ಕೂಡ ನಾಲ್ಕು ವಿಧದ ಎಲ್ಲ ಸ್ಥೂಲಶರೀರಗಳು ಕಾಡಿನಂತೆ ಅಥವಾ ಜಲಾಶಯದಂತೆ ಒಂದು ಎಂಬ ದೃಷ್ಟಿಯಿಂದ ನೋಡಿದಾ

ಸಮಷ್ಟಿಯಾಗುತ್ತದೆ ; ಮರದಂತೆ ಅಥವಾ ನೀರಿನ ಕಣದಂತೆ ಅನೇಕ ಎಂಬ ದೃಷ್ಟಿಯಿಂದ ನೋಡಿದಾಗ ವ್ಯಷ್ಟಿಯೂ ಆಗುತ್ತದೆ.

### ವೈಶ್ವಾನರ ಅಥವಾ ವಿರಾಟ್

**ಏತತ್ ಸಮಷ್ಟಿ-ಉಪಹಿತಂ ಚೈತನ್ಯಂ ವೈಶ್ವಾನರೋ ವಿರಾಟ್ ಇತ್ಯುಚ್ಯತೇ ಸರ್ವನರ-ಅಭಿಮಾನಿತ್ವಾತ್ ವಿವಿಧಂ ರಾಜಮಾನತ್ವಾಚ್ಚ ॥೧೧೧॥**

೧೧೧. ಈ ಸಮಷ್ಟಿಯನ್ನು ಉಪಾಧಿಯಾಗಿ ಹೊಂದಿರುವ ಚೈತನ್ಯವು ವೈಶ್ವಾನರ, ವಿರಾಟ್ ಎಂದು ಕರೆಯಲ್ಪಡುತ್ತದೆ ; ಏಕೆಂದರೆ (ಅದು) ಎಲ್ಲ ನರರಲ್ಲೂ ಅಭಿಮಾನವನ್ನು ಹೊಂದಿರುತ್ತದೆ ಮತ್ತು ವಿವಿಧವಾಗಿ ಪ್ರಕಾಶಿಸುತ್ತಿರುತ್ತದೆ.

ಛಾಂದೋಗ್ಯೋಪನಿಷತ್ತಿನಲ್ಲಿ (೮.೧೮.೧) ವೈಶ್ವಾನರನನ್ನು ಕುರಿತು ಹೀಗೆಂದಿದೆ: ಯಸ್ತು ಏತಮ್ ಏವ ಪ್ರಾದೇಶಮಾತ್ರಮ್ ಅಭಿವಿಮಾನಮ್ ಆತ್ಮಾನಂ ವೈಶ್ವಾನರಮ್ ಉಪಾಸ್ತೇ..., 'ಆದರೆ ಯಾವನು ಪ್ರಾದೇಶಮಾತ್ರನೂ ಅಭಿವಿಮಾನಿಯೂ ಆದ ಈ ವೈಶ್ವಾನರಾತ್ಮನನ್ನು ಹೀಗೆ ಉಪಾಸಿಸುವನೋ...' ದ್ಯುಲೋಕಾದಿಗಳಷ್ಟು ಪರಿಮಾಣವುಳ್ಳವನಾದ್ದರಿಂದ ಪ್ರಾದೇಶಮಾತ್ರನು, ಎಲ್ಲ ಪ್ರಾಣಿಗಳೂ ಇವನನ್ನು ಪ್ರತ್ಯಗಾತ್ಮನೆಂದು ಅರಿಯುವುದರಿಂದ ಅಭಿವಿಮಾನಿಯು.

ಇದರ ಮೇಲೆ ವ್ಯಾಖ್ಯಾನಮಾಡುವಾಗ ಶ್ರೀಶಂಕರರು ವೈಶ್ವಾನರ ಶಬ್ದವನ್ನು ಹೀಗೆ ನಿರ್ವಚನ ಮಾಡಿರುತ್ತಾರೆ: ವಿಶ್ವಾನ್ ನರಾನ್ ನಯತಿ, ಪುಣ್ಯಪಾಪಾನು-ರೂಪಾಂ ಗತಿಂ ಸರ್ವಾತ್ಮಾ ಏಷ ಈಶ್ವರೋ ವೈಶ್ವಾನರಃ, 'ಎಲ್ಲ ನರರನ್ನೂ ಪುಣ್ಯ ಪಾಪಾನುರೂಪವಾದ ಗತಿಗೆ ಒಯ್ಯುವುದರಿಂದ ಸರ್ವಾತ್ಮನೂ ಈಶ್ವರನೂ ಆದ ಇವನು ವೈಶ್ವಾನರನು'; ವಿಶ್ವೋ ನರಃ ಏವ ವಾ ಸರ್ವಾತ್ಮತ್ವಾತ್, 'ಅಥವಾ ಸರ್ವಾತ್ಮನಾಗಿರುವುದರಿಂದ ಎಲ್ಲ ನರರೂ ಅವನೇ'.

ಗೀತೆಯು ಹೀಗೆನ್ನುತ್ತದೆ (೧೫.೧೪): ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ । ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ 'ನಾನು ವೈಶ್ವಾನರನಾಗಿ ಎಲ್ಲ ಪ್ರಾಣಿಗಳ ಶರೀರವನ್ನು ಆಶ್ರಯಿಸಿ ಪ್ರಾಣಾಪಾನಗಳಿಂದ ಕೂಡಿದವನಾಗಿ, ನಾಲ್ಕು ವಿಧವಾದ ಅನ್ನವನ್ನು ಜೀರ್ಣವಾಗುವಂತೆ ಮಾಡುತ್ತೇನೆ.'

**ಅಸ್ಯೈಷಾ ಸಮಷ್ಟಿಃ ಸ್ಥೂಲಶರೀರಮ್ ಅನ್ನವಿಕಾರತ್ವಾತ್ ಅನ್ನಮಯಕೋಶಃ, ಸ್ಥೂಲಭೋಗಾಯತನತ್ವಾಚ್ಚ ಸ್ಥೂಲ-ಶರೀರಂ ಜಾಗ್ರತ್ ಇತಿ ಚ ವ್ಯಪದಿಶ್ಯತೇ ॥೧೧೨॥**

೧೧೨. ಅದರ[1] ಈ ಸಮಷ್ಟಿ ಸ್ಥೂಲಶರೀರವು ಅನ್ನದ[2] ವಿಕಾರವಾದುದರಿಂದ ಅನ್ನಮಯಕೋಶವೆಂತಲೂ, ಸ್ಥೂಲಭೋಗಗಳಿಗೆ ಆಶ್ರಯವಾದುದರಿಂದ ಸ್ಥೂಲಶರೀರವೆಂತಲೂ ಮತ್ತು ಜಾಗ್ರತ್ ಎಂತಲೂ ಕರೆಯಲ್ಪಟ್ಟಿದೆ.

1 ವಿರಾಟ್ಟಿನ

2 ಅನ್ನಂ ವೈ ವಿರಾಟ್, 'ವಿರಾಟ್ಪುರುಷನು ಅನ್ನವೇ' ಎಂದು ಶ್ರುತಿಯಿರುತ್ತದೆ (ತೈ.ಬ್ರಾ. ೧.೬.೩.೪). ಶರೀರಗಳು ಮಾತಾಪಿತೃಗಳು ತಿಂದ ಆಹಾರದ ಪರಿಣಾಮವಷ್ಟೆ.

**ಏತದ್ ವ್ಯಷ್ಟಿ-ಉಪಹಿತಂ ಚೈತನ್ಯಂ ವಿಶ್ವ ಇತ್ಯುಚ್ಯತೇ ಸೂಕ್ಷ್ಮಶರೀರ-ಅಭಿಮಾನಮ್ ಅಪರಿತ್ಯಜ್ಯ ಸ್ಥೂಲಶರೀರಾದಿ-ಪ್ರವಿಷ್ಟತ್ವಾತ್ ॥೧೧೩॥**

೧೧೩. ಈ ವ್ಯಷ್ಟಿಯನ್ನು[1] ಉಪಾಧಿಯಾಗಿ ಹೊಂದಿರುವ ಚೈತನ್ಯವು 'ವಿಶ್ವ' ಎಂದು ಹೇಳಲ್ಪಟ್ಟಿದೆ; ಏಕೆಂದರೆ (ಅದು) ಸೂಕ್ಷ್ಮಶರೀರದಲ್ಲಿನ ಅಭಿಮಾನವನ್ನು[2] ಬಿಡದೆಯೇ ಸ್ಥೂಲಶರೀರವೇ ಮೊದಲಾದುವನ್ನು[3] ಪ್ರವೇಶಿಸಿರುತ್ತದೆ.

1 ಹಿಂದೆ ಹೇಳಿದ ನಾಲ್ಕು ವಿಧದ ಶರೀರಗಳಲ್ಲಿ ಪ್ರತಿಯೊಂದನ್ನೂ.

2 ತಾದಾತ್ಮ್ಯವನ್ನು, 'ಅದೇ ನಾನು' ಎಂಬ ಭಾವವನ್ನು.

3 ಮೂಲದಲ್ಲಿ ಸ್ಥೂಲಶರೀರಾದಿ ಎಂಬ ಪ್ರಯೋಗವಿದೆ. ಕಾರಣಶರೀರ, ಸೂಕ್ಷ್ಮಶರೀರ, ಸ್ಥೂಲಶರೀರ ಎಂಬ ಶರೀರತ್ರಯದ ಸಾಲಿನಲ್ಲಿ ಸ್ಥೂಲಶರೀರವೇ ಕಡೆಯದಾದ್ದರಿಂದ, ಆದಿ ('ಮೊದಲಾದ') ಎಂಬ ಪದಕ್ಕೆ ವಿಶೇಷ ಅರ್ಥವೇನೂ ಕಾಣುವುದಿಲ್ಲ.

'ವಿದ್ವನ್ಮನೋರಂಜನಿ'ಯಲ್ಲಿ ಇದನ್ನು ಹೀಗೆ ವಿವರಿಸಿದೆ: ಸೂಕ್ಷ್ಮಶರೀರ ಂದರೆ ಕಾರಣ–ಶರೀರವು, ಅದಕ್ಕೆ ಹೋಲಿಸಿದರೆ ಲಿಂಗಶರೀರವು ಅಥವಾ ಸೂಕ್ಷ್ಮ ರೀರವು ಸ್ಥೂಲ. ಈ ಲಿಂಗಶರೀರಕ್ಕೆ ಹೋಲಿಸಿದರೆ ಸ್ಥೂಲಶರೀರವು ಮತ್ತಷ್ಟು ಸ್ಥೂಲ. ಜೀವಾತ್ಮನಿಗೆ ಈ ಮೂರೂ ಉಪಾಧಿಗಳು. ಸುಷುಪ್ತಿಯಲ್ಲಿ ಬುದ್ಧಿಯೇ ೊದಲಾದವುಗಳ ಸಂಸ್ಕಾರದಿಂದ ಕೂಡಿದ ಅಜ್ಞಾನವೇ ಅವನಿಗೆ ಉಪಾಧಿ. ಸ್ವಪ್ನಾ ವಸ್ಥೆಯಲ್ಲಿ ಜಾಗ್ರತ್ತಿನ ಸಂಸ್ಕಾರಗಳನ್ನೊಳಕೊಂಡ ಲಿಂಗಶರೀರವೇ ಉಪಾಧಿ. ಜಾಗ್ರದವಸ್ಥೆಯಲ್ಲಿ ಸೂಕ್ಷ್ಮಶರೀರದಿಂದ ಕೂಡಿದ ಸ್ಥೂಲಶರೀರವೇ ಉಪಾಧಿ.

ಕಾರಣಶರೀರ, ಲಿಂಗಶರೀರ, ಸ್ಥೂಲಶರೀರ—ಈ ಮೂರರೊಡನೆ ತಾದಾತ್ಮ್ಯ ವನ್ನು ಹೊಂದಿದಾಗ ಜೀವನಿಗೆ ಕ್ರಮವಾಗಿ ಕ್ರಮವಾಗಿ, ಪ್ರಾಜ್ಞ, ತೈಜಸ, ವೈಶಾನರ ಂದು ಹೆಸರು.

'ವಿಶ್ವ' ಎಂಬ ಶಬ್ದವು 'ವಿಶಪ್ರವೇಶನೇ' ಎಂಬ ಧಾತುವಿನಿಂದ ಉತ್ಪನ್ನ ಾಗಿದೆ. ಹಿಂದು ಹಿಂದಿನ ಉಪಾಧಿಯುನ್ನೊಳಗೊಂಡ ಚೈತನ್ಯನು ಮುಂದುಮುಂದಿನ ರೀರವನ್ನು ಪ್ರವೇಶಿಸಿರುವುದರಿಂದ, ಹೀಗೆ ಮೂರೂ ಶರೀರಗಳನ್ನು ಪ್ರವೇಶಿಸಿರು ುದರಿಂದ ಅವನಿಗೆ 'ವಿಶ್ವ' ಎಂದು ಹೆಸರು.

**ಅಸ್ಯ ಅಪಿ ಏಷಾ ವ್ಯಷ್ಟಿಃ ಸ್ಥೂಲಶರೀರಮ್, ಅನ್ನವಿಕಾರತ್ವಾ- ದೇವ ಹೇತೋಃ ಅನ್ನಮಯಕೋಶೋ ಜಾಗ್ರದಿತಿ ಚ ಉಚ್ಯತೇ ೧೧೪॥**

೧೧೪. ಇದಕ್ಕೂ[1] ಕೂಡ ಈ ವ್ಯಷ್ಟಿಯು[2] ಸ್ಥೂಲಶರೀರವು. ಅನ್ನದ ಪರಿಣಾಮವೆಂಬ ಕಾರಣದಿಂದಲೇ ಅನ್ನಮಯಕೋಶವೆಂದೂ ಮತ್ತು ಜಾಗ್ರತ್[3] ಎಂದೂ ಹೇಳಲ್ಪಡುತ್ತದೆ.

1 'ವಿಶ್ವ'ಕ್ಕೆ.

2 ಪ್ರತಿಭೂಂದು ಶರೀರವ್ಯಕ್ತಿಯು.

3 ಅದರ ಇರವಿನ ಅನುಭವವು ಜಾಗ್ರದವಸ್ಥೆಯಲ್ಲಿ ಮಾತ್ರ ಗೋಚರವಾಗು ುದರಿಂದ ಈ ಹೆಸರನ್ನು ಕೊಟ್ಟಿದೆ.

**ತದಾನೀಮ್ ಏತೌ ವಿಶ್ವವೈಶ್ವಾನರೌ ದಿಗ್-ವಾತ-ಅರ್ಕ-ವರುಣ- ಶ್ವಿಭಿಃ ಕ್ರಮಾತ್ ನಿಯಂತ್ರಿತೇನ ಶ್ರೋತ್ರಾದಿ–ಇಂದ್ರಿಯ–ಪಂಚ**

**ಕೇನ ಕ್ರಮಾತ್ ಶಬ್ದ-ಸ್ಪರ್ಶ-ರೂಪ-ರಸ-ಗಂಧಾನ್, ಅಗ್ನಿ-ಇಂದ್ರ ಉಪೇಂದ್ರ-ಯಮ-ಪ್ರಜಾಪತಿಭಿಃ ಕ್ರಮಾತ್ ನಿಯಂತ್ರಿತೇ ವಾಗಾದಿ-ಇಂದ್ರಿಯಪಂಚಕೇನ ಕ್ರಮಾತ್ ವಚನ-ಆದಾನ-ಗಮನ ವಿಸರ್ಗ-ಆನಂದಾನ್, ಚಂದ್ರ-ಚತುರ್ಮುಖ-ಶಂಕರ-ಅಚ್ಯುತೈ ಕ್ರಮಾತ್ ನಿಯಂತ್ರಿತೇನ ಮನೋಬುದ್ಧಿ-ಅಹಂಕಾರ-ಚಿತ್ತಾಖ್ಯೇ ಅಂತರಿಂದ್ರಿಯ-ಚತುಷ್ಕೇಣ ಕ್ರಮಾತ್ ಸಂಕಲ್ಪ-ನಿಶ್ಚಯ-ಅಹ ಕಾರ್ಯ-ಚೈತ್ತಾನ್ ಚ, ಸರ್ವಾನ್ ಏತಾನ್ ಸ್ಥೂಲವಿಷಯಾತ್ ಅನ ಭವತಃ 'ಜಾಗರಿತಸ್ಥಾನೋ ಬಹಿಃಪ್ರಜ್ಞಃ '(ಮಾಂ ಉ. ೩) ಇತ್ಯಾ ಶ್ರುತೇಃ ॥೧೧೫॥**

೧೧೫. ಆಗ[1] ಈ ವಿಶ್ವ–ವೈಶ್ವಾನರಿಬ್ಬರೂ ಈ ಎಲ್ಲ ಸ್ಥೂಲವಿಷಯ ಗಳನ್ನೂ ಅನುಭವಿಸುತ್ತಾರೆ. (ಅದು ಹೇಗೆಂದರೆ :) ದಿಕ್ಕು, ವಾಯು, ಸೂರ್ ವರುಣ, ಅಶ್ವಿನೀದೇವತೆಗಳು[2] ಇವರಿಂದ ಕ್ರಮವಾಗಿ ನಿಯಂತ್ರಿತವಾ ಶ್ರೋತ್ರಾದಿ ಪಂಚೇಂದ್ರಿಯಗಳ ಮೂಲಕ ಶಬ್ದ ಸ್ಪರ್ಶರೂಪರಸಗಂಧಗಳನ್ನು ಅಗ್ನಿ ಇಂದ್ರ ಉಪೇಂದ್ರ ಯಮ ಪ್ರಜಾಪತಿ ಇವರಿಂದ ಕ್ರಮವಾಗಿ ನಿಯಂತ್ರಿ ವಾದ ವಾಗಾದಿ ಪಂಚ (ಕರ್ಮೇಂದ್ರಿಯ) ಗಳ ಮೂಲಕ ಕ್ರಮವಾಗಿ ಮಾ ನಾಡುವುದು, ತೆಗೆದುಕೊಳ್ಳುವುದು, ಓಡಾಡುವುದು, ವಿಸರ್ಜಿಸುವುದ ರಮಿಸುವುದು–ಇವುಗಳನ್ನು ; ಚಂದ್ರ, ಚತುರ್ಮುಖಬ್ರಹ್ಮ, ಶಂಕರ, ವಿಷ ಇವರಿಂದ ಕ್ರಮವಾಗಿ ನಿಯಂತ್ರಿತವಾದ ಮನಸ್ಸು ಬುದ್ಧಿ ಅಹಂಕಾರ ಚಿ ಎಂಬ ಹೆಸರುಳ್ಳ ಅಂತರಿಂದ್ರಿಯ ಚತುಷ್ಟಯದ ಮೂಲಕ ಕ್ರಮವಾಗಿ ಸಂಕಲ್ಪ ನಿಶ್ಚಯ, ಅಹಂಕಾರ, ಸ್ಮರಣೆ ಇವುಗಳನ್ನು (ಅನುಭವಿಸುತ್ತಾರೆ). 'ಜಾಗ್ರ ವಸ್ಥೆಯೆಂಬ ಸ್ಥಾನವುಳ್ಳ, ಹೊರಗಿನ ಪ್ರಜ್ಞೆಯುಳ್ಳ....' ಎಂಬಿದೇ ಮೊದಲಾ ಶ್ರುತಿಯಿಂದ (ಮಾ. ಉ. ೩)[3] (ಹೀಗೆ ತಿಳಿದುಬರುತ್ತದೆ).

1 ಜಾಗ್ರದವಸ್ಥೆಯಲ್ಲಿ.

2 ಇವರು ಪಂಚಜ್ಞಾನೇಂದ್ರಿಯಗಳ ಅಭಿಮಾನೀ ದೇವತೆಗಳು. ಮುಂ ಹೇಳಿರುವ ಅಗ್ನಿ ಚಂದ್ರ ಮೊದಲಾದವರ ವಿಷಯಕ್ಕೂ ಹೀಗೆಯೇ ಅರಿಯಬೇಕು.

3 ಉಪನಿಷತ್ತಿನ ಸಂಪೂರ್ಣ ವಾಕ್ಯ ಹೀಗಿದೆ: **ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ ಸಪ್ತಾಂಗಃ ಏಕೋನವಿಂಶತಿಮುಖಃ ಸ್ಥೂಲಭುಗ್ ವೈಶ್ವಾನರಃ ಪ್ರಥಮಃ ಪಾದಃ,** ' ಜಾಗ್ರದವಸ್ಥೆಯೆಂಬ ಸ್ಥಾನವುಳ್ಳ, ಹೊರಗಿನ ಪ್ರಜ್ಞೆಯುಳ್ಳ, ಏಳು ಅಂಗಗಳುಳ್ಳ, ಹತ್ತೊಂಬತ್ತು ಮುಖಗಳುಳ್ಳ, ಸ್ಥೂಲಭೋಗಿಯಾದ ವೈಶ್ವಾನರನು ಮೊದಲನೆಯ ಪಾದವು.'

ಹೊರಗಿನ ಪ್ರಜ್ಞೆಯುಳ್ಳವನು ಎಂದರೆ ತನಗಿಂತ ವ್ಯತಿರಿಕ್ತವಾದ ವಿಷಯದಲ್ಲಿ ಪ್ರಜ್ಞೆಯುಳ್ಳವನು ಎಂದರ್ಥ. ದ್ಯುಲೋಕ, ಸೂರ್ಯ, ವಾಯು, ಆಕಾಶ, ನೀರು, ಪೃಥ್ವಿ ಮತ್ತು ಆಹವನೀಯಾಗ್ನಿ—ಇವು ಏಳು ಅಂಗಗಳು. ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚಪ್ರಾಣಗಳು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ—ಇವೇ ಹತ್ತೊಂಬತ್ತು ಮುಖಗಳು. ಇವುಗಳ ಮೂಲಕ ಶಬ್ದಾದಿ ಸ್ಥೂಲ ವಿಷಯಗಳನ್ನು ಅನುಭವಿಸುವುದರಿಂದ ಸ್ಥೂಲಭೋಗಿ.

**ಅತ್ರಾಪಿ ಅನಯೋಃ ಸ್ಥೂಲವ್ಯಷ್ಟಿಸಮಷ್ಟ್ಯೋಃ ತದುಪಹಿತವಿಶ್ವವೈಶ್ವಾನರಯೋಶ್ಚ ವನವೃಕ್ಷವತ್ ತದವಚ್ಛಿನ್ನ-ಆಕಾಶವಚ್ಚ ಜಲಾಶಯ-ಜಲವತ್ ತದ್ಗತಪ್ರತಿಬಿಂಬ-ಆಕಾಶವಚ್ಚ ಪೂರ್ವವದ್ ಅಭೇದಃ ॥೧೧೬॥**

೧೧೬. ಇಲ್ಲಿಯೂ ಕೂಡ ಈ ಸ್ಥೂಲ ವ್ಯಷ್ಟಿ—ಸಮಷ್ಟಿಗಳಲ್ಲಿ ಮತ್ತು ಅವುಗಳನ್ನು ಉಪಾಧಿಯಾಗಿ ಹೊಂದಿರುವ ವಿಶ್ವ-ವೈಶ್ವಾನರರಲ್ಲಿ, ಕಾಡು ಮತ್ತು ಮರಗಳು ಇವುಗಳಂತೆ ಮತ್ತು ಅವುಗಳಿಂದ ಆವೃತವಾದ ಆಕಾಶದಂತೆ, (ಹಾಗೆಯೇ), ನೀರಿನ ಕಣ ಇವುಗಳಂತೆ ಮತ್ತು ಇವುಗಳನ್ನು ಹೊಕ್ಕಿರುವ ಆಕಾಶದ ಪ್ರತಿಬಿಂಬದಂತೆ, ಅಭೇದವಿರುತ್ತದೆ.

ಜೀವ—ಬ್ರಹ್ಮರ ಅಭೇದವನ್ನು ಅದ್ವೈತಗ್ರಂಥಗಳು ಎರಡು ರೀತಿಯಲ್ಲಿ ಪ್ರತಿಪಾದಿಸುತ್ತವೆ. ಪ್ರಕಾಶಾತ್ಮರ 'ಪಂಚಪಾದಿಕಾ ವಿವರಣ'ಗ್ರಂಥದ ಪ್ರಕಾರ—ಇದನ್ನು ವಿವರಣಪ್ರಸ್ಥಾನವೆಂದು ಕರೆಯುತ್ತಾರೆ—ಜೀವನು ಬ್ರಹ್ಮದ ಪ್ರತಿಬಿಂಬ. ಬಿಂಬ—ಪ್ರತಿಬಿಂಬಗಳಲ್ಲಿ ಐಕ್ಯವಿರುವಂತೆ ಇವರಿಬ್ಬರಲ್ಲಿ ಐಕ್ಯವಿರುತ್ತದೆ. ಈ ವಾದವನ್ನು 'ಪ್ರತಿಬಿಂಬವಾದ' ಎನ್ನುತ್ತಾರೆ. ವಾಚಸ್ಪತಿಮಿಶ್ರರ ಭಾಮತೀಗ್ರಂಥದ ಪ್ರಕಾರ—ಇದನ್ನು ಭಾಮತೀಪ್ರಸ್ಥಾನವೆಂದು ಕರೆಯುತ್ತಾರೆ—ಅವಿದ್ಯಾಕೃತವಾದ ಶರೀರಾದಿ ಉಪಾಧಿ

ಗಳು ಆತ್ಮನನ್ನು (ಅಥವಾ ಬ್ರಹ್ಮವನ್ನು) ಮಡಕೆಯು ಆಕಾಶವನ್ನು ಅವಚ್ಛೇ
ಕ್ಕೊಳಪಡಿಸುವಂತೆ (ಎಂದರೆ ಪರಿಮಿತಿಗೊಳಪಡಿಸುವಂತೆ), ಅವಚ್ಛಿನ್ನಗೊಳಿಸುತ್ತ
ಮಡಕೆಯಿಂದ ಸೀಮಿತವಾದ ಆಕಾಶವು ನಿಜವಾಗಿ ಮಹಾಕಾಶವೇ ಆಗಿರುವಂ
ಮಡಕೆಯನ್ನು ಒಡೆದಾಗ ಅದರಲ್ಲಿದ್ದ ಆಕಾಶವು ಮಹಾಕಾಶದಲ್ಲಿ ಲೀನವಾಗುವಂ
ಉಪಾಧಿಗಳು ಲಯವಾದಾಗ ಜೀವವು ಬ್ರಹ್ಮದಲ್ಲಿ ಒಂದಾಗುತ್ತದೆ. ಈ ವಾದವನ
'ಅವಚ್ಛೇದವಾದ' ಎಂದು ಕರೆಯುತ್ತಾರೆ.

೯೭ ನೆಯ ಕಂಡಿಕೆಯಲ್ಲಿ ಮತ್ತು ಇಲ್ಲಿ ಕೊಟ್ಟಿರುವ ಉದಾಹರಣೆಗಳು ಎರಡ
ವಾದಗಳನ್ನು ಗಮನದಲ್ಲಿರಿಸಿವೆ.

**ಏವಂ ಪಂಚೀಕೃತ-ಪಂಚಭೂತೇಭ್ಯಃ ಸ್ಥೂಲಪ್ರಪಂಚೋತ್ಪತ್ತಿ**
**॥೧೧೭॥**

೧೧೭. ಪಂಚೀಕೃತ ಪಂಚಭೂತಗಳಿಂದ ಸ್ಥೂಲಪ್ರಪಂಚವು ಹೀ
ಉತ್ಪನ್ನವಾಗುತ್ತದೆ.

**ಏತೇಷಾಂ ಸ್ಥೂಲ-ಸೂಕ್ಷ್ಮ-ಕಾರಣ-ಪ್ರಪಂಚಾನಾಮಪಿ ಸಮಷ್ಟಿ**
**ಏಕೋ ಮಹಾನ್ ಪ್ರಪಂಚೋ ಭವತಿ, ಯಥಾ ಅವಾಂತರವನಾನಾ**
**ಸಮಷ್ಟಿಃ ಏಕಂ ಮಹದ್ವನಂ ಭವತಿ ಯಥಾ ವಾ ಅವಾಂತರ-ಜಲ**
**ಶಯಾನಾಂ ಸಮಷ್ಟಿಃ ಏಕೋ ಮಹಾನ್ ಜಲಾಶಯಃ ॥೧೧೮॥**

೧೧೮. ಅವಾಂತರ[1] ವನಗಳ ಸಮಷ್ಟಿಯು ಒಂದು ಮಹಾವನವಾ
ವಂತೆ ಅಥವಾ ಅವಾಂತರ ಜಲಾಶಯಗಳ ಸಮಷ್ಟಿಯು ಒಂದು ಮಹಾಜಲ
ಶಯವಾಗುವಂತೆ ಈ ಸ್ಥೂಲ-ಸೂಕ್ಷ್ಮ-ಕಾರಣ-ಪ್ರಪಂಚಗಳ ಸಮಷ್ಟಿಯ
ಕೂಡ ಒಂದು ಮಹಾಪ್ರಪಂಚವಾಗುತ್ತದೆ.

1 ನಡುವಣ, ಚಿಕ್ಕ ಚಿಕ್ಕ ಎಂದರ್ಥ.

**ಏತದುಪಹಿತಂ ವೈಶ್ವಾನರಾದಿ-ಈಶ್ವರಪರ್ಯಂತಂ ಚೈತನ್ಯವ**
**ಅಪಿ ಅವಾಂತರವನ-ಅವಚ್ಛಿನ್ನಂ-ಆಕಾಶವತ್ ಅವಾಂತರ-ಜಲ**
**ಶಯಗತ ಪ್ರತಿಬಿಂಬ-ಆಕಾಶವಚ್ಚ ಏಕಮೇವ ॥೧೧೯॥**

೧೯. ಈ (ಮಹಾಪ್ರಪಂಚವನ್ನು) ಉಪಾಧಿಯಾಗಿ ಹೊಂದಿರುವ, ಶ್ವಾನರನಿಂದ ಈಶ್ವರನವರೆಗಿನ, ಚೈತನ್ಯವೂ ಕೂಡ ಅವಾಂತರ ವನಗಳಿಂದ ಾಶದಂತೆ, (ಅಥವಾ) ಅವಾಂತರ ಜಲಾಶಯಗಳಲ್ಲಿ ಪ್ರತಿಬಿಂಬಿತವಾದ ಾಶದಂತೆ, ಒಂದೇ ಆಗಿರುತ್ತದೆ.

**ಆಭ್ಯಾಂ ಮಹಾಪ್ರಪಂಚ-ತದುಪಹಿತಚೈತನ್ಯಾಭ್ಯಾಂ ತಪ್ತ-ಯಃಪಿಂಡವತ್ ಅವಿವಿಕ್ತಂ ಸದ್ ಅನುಪಹಿತಂ ಚೈತನ್ಯಂ 'ಸರ್ವಂ ಲ್ವಿದಂ ಬ್ರಹ್ಮ' (ಛಾಂ.ಉ. ೩.೧೪.೧) ಇತಿ ವಾಕ್ಯಸ್ಯ ವಾಚ್ಯಂ ರತಿ ವಿವಿಕ್ತಂ ಸತ್ ಲಕ್ಷ್ಯಮಪಿ ಭವತಿ ॥೧೨೦॥**

೧೨೦. ಉಪಾಧಿರಹಿತವಾದ (ಶುದ್ಧ) ಚೈತನ್ಯವು-ಕಾದ ಕಬ್ಬಿಣದ ಂಡಿನಂತೆ-ಈ ಮಹಾಪ್ರಪಂಚ ಮತ್ತು ಅದನ್ನು ಉಪಾಧಿಯಾಗಿ ಹೊಂದಿರುವ ತನ್ಯ, ಇವುಗಳಿಂದ ಬೇರ್ಪಡಿಸಲಾಗದೆ ಇದ್ದಾಗ, 'ಇದೆಲ್ಲವೂ ಬ್ರಹ್ಮವೇ' ಾಂ.ಉ.೩.೧೪.೧) ಎಂಬ (ಮಹಾ) ವಾಕ್ಯದ ವಾಚ್ಯಾರ್ಥವೂ, ಬೇರ್ಪಡಿ ್ಟಾಗ ಲಕ್ಷ್ಯಾರ್ಥವೂ ಆಗುತ್ತದೆ.

೫೦ ನೆಯ ಕಂಡಿಕೆಯ ಟಿಪ್ಪಣಿಯನ್ನು ನೋಡಿ.

**ಏವಂ ವಸ್ತುನಿ ಅವಸ್ತು-ಆರೋಪಃ ಅಧ್ಯಾರೋಪಃ ಮಾನ್ಯೇನ ಪ್ರದರ್ಶಿತಃ ॥೧೨೧॥**

೧೨೧. ಹೀಗೆ (ಸತ್ಯವಾಗಿರುವ) ವಸ್ತುವಿನಲ್ಲಿ (ಅಸತ್ಯವಾದ) ಅವಸ್ತು ್ನ ಆರೋಪಿಸುವುದು (ಎಂಬ) ಅಧ್ಯಾರೋಪವನ್ನು ಸಾಮಾನ್ಯವಾಗಿ ತೋರಿ ಾಯಿತು.

### ಜೀವನ ಸ್ವರೂಪದ ಬಗ್ಗೆ ಇರುವ ವಿವಿಧ ಅಭಿಪ್ರಾಯಗಳು

**ಇದಾನೀಂ ಪ್ರತ್ಯಗಾತ್ಮನಿ ಇದಮ್ ಇದಮ್ ಅಯಮ್ ಯಮ್ ಆರೋಪಯತಿ ಇತಿ ವಿಶೇಷತಃ ಉಚ್ಯತೇ ॥೧೨೨॥**

೧೨೨. ಈಗ ಪ್ರತ್ಯಗಾತ್ಮನ ವಿಷಯದಲ್ಲಿ (ಜನರು) 'ಇವನ, ಇದ 'ಇವನು, ಇದು' ಎಂದು (ಏನೇನನ್ನು) ಆರೋಪಿಸುತ್ತಾರೋ (ಅದು) ವಿಶ ವಾಗಿ ಹೇಳಲ್ಪಡುತ್ತದೆ.

ಇದುವರೆಗೆ ಬ್ರಹ್ಮದಲ್ಲಿ ಜಗತ್ತಿನ ಅಧ್ಯಾರೋಪವನ್ನು ವಿವರಿಸಲಾಯಿತು. ಈ ಜೀವನ ಸ್ವರೂಪದ ಬಗ್ಗೆ ಇರುವ ವಿವಿಧ ಅಭಿಪ್ರಾಯಗಳ ನಿರೂಪಣೆಯು ಪ್ರಾರಂಭಿಸಲಾಗಿದೆ. ಪ್ರತ್ಯಗಾತ್ಮನು ಎಂದರೆ ಒಳಗಿರುವ ಆತ್ಮನು. ದೇಹೇಂದ್ರಿಯ ಗಳಿಗಿಂತ ಸೂಕ್ಷ್ಮನಾದ ಜೀವಾತ್ಮನನ್ನೇ ಇಲ್ಲಿ ಪ್ರತ್ಯಗಾತ್ಮನೆಂದು ಕರೆದಿದೆ.

**ಚಾರ್ವಾಕರ ಮತ**

**ಅತಿಪ್ರಾಕೃತಸ್ತು 'ಆತ್ಮಾ ವೈ ಜಾಯತೇ ಪುತ್ರಃ' ಇತ್ಯಾ ಶ್ರುತೇಃ ಸ್ವಸ್ಮಿನ್ ಇವ ಪುತ್ರೇ ಅಪಿ ಪ್ರೇಮದರ್ಶನಾತ್ ಪು ಪುಷ್ಟೇ ನಷ್ಟೇ ಚ ಅಹಮೇವ ಪುಷ್ಟೋ ನಷ್ಟಶ್ಚ ಇತ್ಯಾದ್ಯನುಭವಾ ಪುತ್ರಃ ಆತ್ಮಾ ಇತಿ ವದತಿ ॥೧೨೩॥**

೧೨೩. ಅತ್ಯಂತ ಸ್ಥೂಲಬುದ್ಧಿಯುಳ್ಳವನಾದರೋ, 'ತಾನೇ ಮಗನ ಹುಟ್ಟುತ್ತಾನೆ' ಎಂಬಿವೇ ಮೊದಲಾದ ಶ್ರುತಿಯ ಪ್ರಮಾಣದಿಂದಲೂ ತ (ತನಗಿರುವಂತೆ) (ತನ್ನ) ಪುತ್ರನಲ್ಲಿಯೂ ಪ್ರೀತಿಯು ಕಂಡುಬರುತ್ತಿರು ರಿಂದಲೂ, ಪುತ್ರನು ಪುಷ್ಟಿಹೊಂದಿದಾಗ ಅಥವಾ ನಾಶಹೊಂದಿದಾಗ ತ ಪುಷ್ಟಿಹೊಂದಿದಂತೆ ಅಥವಾ ನಾಶವಾದಂತೆ ಅನುಭವವುಂಟಾಗುತ್ತಿರು ರಿಂದಲೂ 'ಪುತ್ರನೇ ಆತ್ಮನು' ಎಂದು ಹೇಳುತ್ತಾನೆ.

ಇಲ್ಲಿಂದ ೧೨೮ ರ ವರೆಗೆ ಚಾರ್ವಾಕರ ವಿವಿಧಮತಗಳನ್ನು ನಿರೂಪಿಸಲಾ ಚಾರ್ವಾಕರೆಂದರೆ ಕೇಳಲು ಚೆನ್ನಾಗಿರುವ (ಚಾರು) ಮಾತುಗಳನ್ನಾಡುವ (ವಾಕ್) ಎಂದರ್ಥ. ಆಧ್ಯಾತ್ಮಿಕ ತತ್ತ್ವಜಿಜ್ಞಾಸೆಯ ಗೋಜಿಗೆ ಹೋಗದೆ, ದೇ ಗಳನ್ನೇ ಆತ್ಮನೆಂದು ಭ್ರಮಿಸಿ, ಇಂದ್ರಿಯಸುಖಭೋಗಗಳನ್ನೇ ಪರಮಪುರುಷ ವೆಂದು ಉಪದೇಶಿಸುತ್ತಿರುವ ಅವರ ಮಾತು ಪ್ರಾಕೃತರಿಗೆ ಕೇಳಲು ತು ವಾಗಿರುವುದರಿಂದ ಅವರಿಗೆ ಈ ಹೆಸರು ಸಲ್ಲುತ್ತದೆ. ಈ ಮತದ ಮೂಲಪ್ರ ಬೃಹಸ್ಪತಿಯೆಂದೂ ಅವನಿಗೆ ಚಾರ್ವಾಕನೆಂಬ ಶಿಷ್ಯನಿದ್ದನೆಂದೂ ಕೆಲವರುಹೇಳು

'ನಾನು' ಎಂಬುದು ನಮಗೆ ಅತ್ಯಂತ ಪ್ರಿಯವಾದ ವಸ್ತುವಾದುದರಿಂದ, ಾವ-ಯಾವುದು ನಮಗೆ ಅತ್ಯಂತ ಪ್ರಿಯವೋ ಅದೆಲ್ಲವೂ 'ನಾನೇ'. ಈ ದೃಷ್ಟಿ ಂದ ನೋಡಿದಾಗ ಅತ್ಯಂತ ಮಂದಬುದ್ಧಿಯುಳ್ಳ, ಪುತ್ರವ್ಯಾಮೋಹಪರಾಯಣ ದ ಜನರಿಗೆ ಪುತ್ರನೇ ಆತ್ಮನು.

ಈ ಸಾಲಿನಲ್ಲಿ ಕೊಡುತ್ತಿರುವ ಅಭಿಪ್ರಾಯಗಳಿಗೆಲ್ಲ ಗ್ರಂಥಕರ್ತರು ಶ್ರುತಿ, ುಕ್ತಿ ಮತ್ತು ಅನುಭವ ಎಂಬ ಮೂರು ಪ್ರಮಾಣಗಳನ್ನು ಆಧಾರವಾಗಿ ಕೊಡು ತ್ತಾರೆ. ಚಾರ್ವಾಕರೇ ಮೊದಲಾದವರಿಗೆ ಶ್ರುತಿಯು ಪ್ರಮಾಣವಲ್ಲದಿದ್ದರೂ ದಾಂತಿಗಳು ಅದನ್ನು ಒಪ್ಪುವುದರಿಂದ ಶ್ರುತಿವಾಕ್ಯಗಳನ್ನು ಉದ್ಧರಿಸಲಾಗಿದೆ. ವು ಪಲ ಹಾಸ್ಯಕ್ಕಾಗಿ ಉದ್ಧರಿಸುವುದೂ ಉಂಟು. ಆದರೆ ಎಲ್ಲ ಕಡೆಗಳಲ್ಲಿಯೂ ಉದ್ಧರಣವು ಅಪ್ರಾಸಂಗಿಕ.

ಇಲ್ಲಿ ಕೊಟ್ಟಿರುವ ಅಭಿಪ್ರಾಯವನ್ನು ಹೊಂದಿದ ಚಾರ್ವಾಕರು ಚಾರಿತ್ರಿಕವಾಗಿ ್ದರೆಂದು ಹೇಳಲಾಗುವುದಿಲ್ಲ. ತತ್ತ್ವಜಿಜ್ಞಾಸೆಯ ವಿಕಾಸಪಥದಲ್ಲಿ ಇದೂ ಒಂದು ತವೆಂದು ಭಾವಿಸಬಹುದು.

**ಚಾರ್ವಾಕಸ್ತು 'ಸ ವಾ ಏಷ ಪುರುಷೋಽನ್ನರಸಮಯಃ' ೖ.ಉ. ೨.೧.೧) ಇತ್ಯಾದಿಶ್ರುತೇಃ ಪ್ರದೀಪ್ತಗೃಹಾತ್ ಸ್ವಪುತ್ರಂ ಿತ್ಯಜ್ಯ ಅಪಿ ಸ್ವಸ್ಯ ನಿರ್ಗಮದರ್ಶನಾತ್ 'ಸ್ಥೂಲೋಽಹಮ್', ೃಶೋಽಹಮ್' ಇತ್ಯಾದ್ಯನುಭವಾಚ್ಚ 'ಸ್ಥೂಲಶರೀರಮ್ ಆತ್ಮಾ' ತಿ ವದತಿ ||೧೨೪||**

೧೨೪. ಚಾರ್ವಾಕನಾದರೋ 'ಆ ಈ ಪುರುಷನು[1] ಅನ್ನರಸದಿಂದ ಂಟಾದವನು' (ತೈ.ಉ.೨.೧.೧) ಇತ್ಯಾದಿ ಶ್ರುತಿಯಿಂದಲೂ, ಬೆಂಕಿ ಹತ್ತಿ ುಯುತ್ತಿರುವ ಮನೆಯಿಂದ (ಅಲ್ಲಿ) ತನ್ನ ಮಗನನ್ನು ಸಹ ಬಿಟ್ಟು ಬಿಟ್ಟು ನು (ಮಾತ್ರ) (ತಪ್ಪಿಸಿಕೊಂಡು) ಹೊರಬರುವುದು ಕಂಡುಬರುವುದ ದಲೂ[2], 'ನಾನು ದಪ್ಪನಾಗಿದ್ದೇವೆ', 'ನಾನು ಸಣ್ಣಗಾಗಿದ್ದೇನೆ' ಇತ್ಯಾದಿ ುಭವವಿರುವುದರಿಂದಲೂ ಸ್ಥೂಲಶರೀರವೇ ಆತ್ಮನೆಂದು ಹೇಳುತ್ತಾನೆ.

1 ಇಲ್ಲಿ ಶರೀರವನ್ನೇ ಪುರುಷನೆಂದು ಕರೆದಿದೆ.

2 ಮಗನೇ ಆತ್ಮನಾಗಿದ್ದ ಪಕ್ಷದಲ್ಲಿ ತನ್ನ ಜೀವವನ್ನು ಕೊಟ್ಟಾದರೂ ಅವನ
ರಕ್ಷಿಸಬೇಕಿತ್ತು. ಹಾಗಿಲ್ಲದೆ ಮಗನ ಶರೀರವನ್ನು ಬಲಿಕೊಟ್ಟರೂ ಚಿಂತಿಲ್ಲ,
ಶರೀರವುಳಿದರೆ ಸಾಕು ಎಂಬ ಬುದ್ಧಿಯುು ಕಂಡುಬರುತ್ತಿರುವುದರಿಂದ ಶರೀರವೇ
ಎಂದಭಿಪ್ರಾಯು.

3 ಈ ಅನುಭವಗಳಲ್ಲಿ 'ನಾನು' ಎಂದರೆ ಸ್ಥೂಲಶರೀರವೇ.

ಇಲ್ಲಿಂದ ಹೇಳುತ್ತಿರುವ ಪ್ರತಿಯೊಂದು ಮತವೂ ಹಿಂದುಹಿಂದಿನ ಮತಕಿ
ಶ್ರೇಷ್ಠವಾದುದು.

**ಅಪರಂ ಚಾರ್ವಾಕಃ 'ತೇ ಹ ಪ್ರಾಣಾಃ ಪ್ರಜಾಪತಿಂ ಪಿತ
ಮೇತ್ಯ ಊಚುಃ' (ಛಾ. ಉ. ೫.೧.೭) ಇತ್ಯಾದಿಶ್ರು
ಇಂದ್ರಿಯಾಣಾಮ್ ಅಭಾವೇ ಶರೀರಚಲನಾಭಾವಾತ್ 'ಕಾಣೊ
ಹಮ್' ಇತ್ಯಾದ್ಯನುಭವಾಚ್ಚ ಇಂದ್ರಿಯಾಣಿ ಆತ್ಮಾ ಇತಿ ವ
॥೧೨೫॥**

೧೨೫. ಮತ್ತೊಬ್ಬ ಚಾರ್ವಾಕನು 'ಆ ಪ್ರಾಣಗಳು[1] ತಂದೆಯ
ಪ್ರಜಾಪತಿಯನ್ನು ಬಳಿಸಾರಿ ಹೇಳಿದವು' (ಛಾಂ.ಉ ೫.೧.೭) ಎಂಬಿವೇ ಮೊ
ಲಾದ ಶ್ರುತಿಯಿರುವುದರಿಂದಲೂ, ಇಂದ್ರಿಯಗಳು ಇಲ್ಲದಿದ್ದಾಗ ಶರೀರಕ್ಕೆ ಚ
ಯಿಲ್ಲದಿರುವುದರಿಂದಲೂ[2], 'ನಾನು ಒಕ್ಕಣ್ಣ', 'ನಾನು ಕಿವುಡ' ಇತ
ಅನುಭವವಿರುವುದರಿಂದಲೂ ಇಂದ್ರಿಯಗಳೇ ಆತ್ಮ ಎಂದು ಹೇಳುತ್ತಾನೆ.

1 ಇಲ್ಲಿ 'ಪ್ರಾಣಗಳು' ಎಂದರೆ ಇಂದ್ರಿಯಗಳು.

2 ಇಂದ್ರಿಯಗಳು ಕೆಲಸ ಮಾಡದಿದ್ದಾಗ ಶರೀರವು ನಿಶ್ಚೇಷ್ಟಿತವಾಗಿರು
ಉದಾಹರಣೆಗೆ:—ಸ್ವಪ್ನಾವಸ್ಥೆಯಲ್ಲಿ ಮತ್ತು ಸುಷುಪ್ತಿಯಲ್ಲಿ.

ಆತ್ಮವಸ್ತುವು ಸ್ವತಂತ್ರ ತತ್ತ್ವ. ಶರೀರವು ತನ್ನ ಕಾರ್ಯಕ್ಕಾಗಿ ಇಂದ್ರಿ
ಗಳನ್ನು ಅವಲಂಬಿಸಿರುವುದರಿಂದ ಪರತಂತ್ರ. ಆದುದರಿಂದ ಅದು ಆತ್ಮವಾಗಲಾ
ಇಂದ್ರಿಯಗಳೇ ಆತ್ಮ–ಇದು ಈ ಚಾರ್ವಾಕರ ವಾದಸರಣಿ. ಚಾರ್ವಾಕರಲ್ಲಿ
ಮತಭೇದಗಳಿದ್ದುವು.

**ಅಪರಶ್ಚಾರ್ವಾಕಃ 'ಅನ್ಯೋಽಂತರ ಆತ್ಮಾ ಪ್ರಾಣಮಯ
(ತೈ.ಉ. ೨.೨.೧.) ಇತ್ಯಾದಿಶ್ರುತೇಃ,ಪ್ರಾಣಾಭಾವೇ ಇಂದ್ರಿಯಾ**

**ಚಲನ-ಅಯೋಗಾತ್ ಅಹಮ್ ಅಶನಾಯಾವಾನ್ ಅಹಂ ಪಿಪಾಸಾ-ವಾನ್ ಇತ್ಯಾದಿ-ಅನುಭವಾಚ್ಚ ಪ್ರಾಣಃ ಆತ್ಮಾ ಇತಿ ವದತಿ ॥೧೨೬॥**

೧೨೬. ಇನ್ನೊಬ್ಬ ಚಾರ್ವಾಕನು (ಸ್ಥೂಲಶರೀರಕ್ಕಿಂತ) 'ಬೇರೆ ಯುವನೂ ಒಳಗಿರುವವನೂ ಪ್ರಾಣಮಯನೂ ಆದ ಆತ್ಮನಿರುವನು' (ತೈ. ಉ. ೨.೨.೧) ಇತ್ಯಾದಿ ಶ್ರುತಿಯಿರುವುದರಿಂದಲೂ, ಪ್ರಾಣವಿಲ್ಲದಿದ್ದರೆ ಇಂದ್ರಿಯ ಗಳಿಗೆ ಚಲನೆಯಿಲ್ಲದಿರುವುದರಿಂದಲೂ, 'ನಾನು ಹಸಿದಿದ್ದೇನೆ', 'ನನಗೆ ಬಾಯಾರಿಕೆಯಾಗಿದೆ' ಇತ್ಯಾದಿ ಅನುಭವವಿರುವುದರಿಂದಲೂ ಪ್ರಾಣವೇ ಆತ್ಮ ಎಂದು ಹೇಳುತ್ತಾನೆ.

ಇಂದ್ರಿಯಗಳೇ ಆತ್ಮನಾದ ಪಕ್ಷದಲ್ಲಿ ಪ್ರಾಣಹೋದಮೇಲೆ ಇಂದ್ರಿಯಗಳು ಏಕೆ ಕೆಲಸಮಾಡುವುದಿಲ್ಲ? ಆದ್ದರಿಂದ ಇಂದ್ರಿಯಗಳು ಆತ್ಮನಲ್ಲ, ಪ್ರಾಣವೇ ಆತ್ಮ. ಅದೂ ಅಲ್ಲದೆ ಹಸಿವುನೀರಡಿಕೆಗಳು ಪ್ರಾಣದ ಧರ್ಮಗಳಾದರೂ ಅವನ್ನು ನಮ್ಮಲ್ಲಿ ಆರೋಪಿಸಿಕೊಳ್ಳುವುದರಿಂದ 'ನಾವು' ಪ್ರಾಣವೇ ಆಗಿರಬೇಕು. ಶ್ರುತಿಯೂ ಈ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ—ಇದು ಈ ಚಾರ್ವಾಕನ ಅಭಿಪ್ರಾಯ.

**ಅನ್ಯಸ್ತು ಚಾರ್ವಾಕಃ 'ಅನ್ಯೋಽಂತರ ಆತ್ಮಾ ಮನೋಮಯಃ (ತೈ. ಉ. ೨.೩.೧) ಇತ್ಯಾದಿಶ್ರುತೇಃ ಮನಸಿ ಸುಪ್ತೇ ಪ್ರಾಣಾದೇಃ ಅಭಾವಾತ್ ಅಹಂ ಸಂಕಲ್ಪವಾನ್ ಅಹಂ ವಿಕಲ್ಪವಾನ್ ಇತ್ಯಾದ್ಯನು-ಭವಾಚ್ಚ ಮನಃ ಆತ್ಮಾ ಇತಿ ವದತಿ ॥೧೨೭॥**

೧೨೭. ಇನ್ನೊಬ್ಬ ಚಾರ್ವಾಕನು '(ಪ್ರಾಣಮಯನಿಗಿಂತ) ಬೇರೆಯ ವನೂ ಒಳಗಿರುವವನೂ ಮನೋಮಯನೂ ಆದ ಆತ್ಮನಿರುವನು' (ತೈ. ಉ. ೨.೩.೧.) ಇತ್ಯಾದಿ ಶ್ರುತಿಯಿರುವುದರಿಂದಲೂ, ಮನಸ್ಸು ಗಾಢನಿದ್ರೆಯಲ್ಲಿರು ವಾಗ ಪ್ರಾಣಾದಿಗಳು ಕಂಡುಬರದ್ದರಿಂದಲೂ 'ನಾನು ಸಂಕಲ್ಪ ಮಾಡುತ್ತೇನೆ' 'ನನಗೆ ಸಂಶಯವಿದೆ' ಇತ್ಯಾದಿ ಅನುಭವವಿರುವುದರಿಂದಲೂ ಮನಸ್ಸೇ ಆತ್ಮ ಎಂದು ಹೇಳುತ್ತಾನೆ.

ಇವನ ಪ್ರಕಾರ ಪ್ರಾಣದ ಪಂಚಪ್ರಾಣಗಳು ಕಾರ್ಯಗಳು ಮನಸ್ಸನ್ನು ಅವಲಂಬಿಸಿರುತ್ತವೆ. ಮನಸ್ಸು ಸುಷುಪ್ತಿಯಲ್ಲಿರುವಾಗ ಅಥವಾ ಮೂರ್ಛೆಯಲ್ಲಿರು

ವಾಗ ಇವು ವ್ಯಕ್ತರೂಪದಲ್ಲಿ ಕಾರ್ಯವೆಸಗುವುದಿಲ್ಲ. ಆದುದರಿಂದ ಪ್ರಾಣವು ಆ ನಲ್ಲ. ಮನಸ್ಸಿನ ಧರ್ಮಗಳಾದ ಸಂಕಲ್ಪ ವಿಕಲ್ಪಾದಿಗಳನ್ನು ನಮ್ಮಲ್ಲಿ ಆರೋಪಿ ಕೊಳ್ಳುವುದರಿಂದ ನಾವು ನಿಜವಾಗಿ ಮನಸ್ಸೇ ಆಗಿರಬೇಕು. ಶ್ರುತಿಯೂ ಇದನ್ನ ಸಮರ್ಥಿಸುತ್ತದೆ. ಆದುದರಿಂದ ಮನಸ್ಸೇ ಆತ್ಮ.

### ಬೌದ್ಧರ ಮತ

**ಬೌದ್ಧಸ್ತು 'ಅನ್ಯೋಽಂತರ ಆತ್ಮಾ ವಿಜ್ಞಾನಮಯಃ' (ತೈ.ಉ. ೨.೪.೧) ಇತ್ಯಾದಿಶ್ರುತೇಃ ಕರ್ತುಃ ಅಭಾವೇ ಕರಣಸ ಶಕ್ತಿ-ಅಭಾವಾತ್ ಅಹಂ ಕರ್ತಾ ಅಹಂ ಭೋಕ್ತಾ ಇತ್ಯಾದ್ಯನ ಭವಾಚ್ಚ ಬುದ್ಧಿಃ ಆತ್ಮಾ ಇತಿ ವದತಿ ।೧೨೮॥**

೧೨೮. ಬೌದ್ಧನಾದರೋ '(ಮನೋಮಯನಿಗಿಂತ) ಬೇರೆಯಾದವನ ಒಳಗಿರುವವನೂ ವಿಜ್ಞಾನಮಯನೂ ಆದ ಆತ್ಮನಿರುವನು' (ತೈ.ಉ.೨.೪.೧ ಇತ್ಯಾದಿ ಶ್ರುತಿಯಿರುವುದರಿಂದಲೂ, 'ನಾನು ಮಾಡುವವನು', 'ನಾನು ಅನ ಭವಿಸುವವನು' ಇತ್ಯಾದಿ ಅನುಭವವಿರುವುದರಿಂದಲೂ ಬುದ್ಧಿಯೇ ಆತ್ಮನೆಂದ ಹೇಳುತ್ತಾನೆ.

ವೇದ ಪ್ರಾಮಾಣ್ಯವನ್ನು ಒಪ್ಪದಿರುವವರ ಗುಂಪಿನಲ್ಲಿ ಚಾರ್ವಾಕರಂ ಬೌದ್ಧರೂ ಸೇರಿರುತ್ತಾರೆ. ಆದ್ದರಿಂದ ಇಲ್ಲಿ ಅವರ ಮತವನ್ನು ಉದ್ಧರಿಸಿದೆ. ಅವರ ಉಪನಿಷದ್ವಾಕ್ಯವನ್ನು ಉದಾಹರಿಸಿರುವುದು ವೇದಾಂತಿಯ ಸಮಾಧಾನಕ್ಕಾಗಿ ಮಾತ್ರ

ಬೌದ್ಧರಲ್ಲಿ ನಾಲ್ಕು ಮತಗಳಿವೆ: (೧) ಮಾಧ್ಯಮಿಕ ಅಥವಾ ಶೂನ್ಯವಾದ (೨) ಯೋಗಾಚಾರ ಅಥವಾ ವಿಜ್ಞಾನವಾದ; (೩) ಸೌತ್ರಾಂತಿಕ; (೪) ವೈಭಾಷಿಕ.

ಸೌತ್ರಾಂತಿಕರು ಮತ್ತು ವೈಭಾಷಿಕರು ಬಾಹ್ಯ ಜಗತ್ತು ಸತ್ಯ, ಹಾಗೆಯೇ ಮನಸ್ಸೂ ಸತ್ಯ ಎಂದು ನಂಬುತ್ತಾರೆ. ಮಾಧ್ಯಮಿಕರು ಸತ್ಯವಾದ ವಸ್ತುವೇ ಇಲ್ಲ ಎಲ್ಲವೂ ಶೂನ್ಯವೇ ಎನ್ನುತ್ತಾರೆ. ಇವರ ವಾದವನ್ನು ಮುಂದೆ ೧೩೧ ರಲ್ಲಿ ತಿಳಿಸಿದೆ.

ಇಲ್ಲಿ ವಿಜ್ಞಾನವಾದಿಗಳ ಮತವನ್ನು ಮಂಡಿಸಿದೆ. ಇವರ ಅಭಿಪ್ರಾಯದ ಪ್ರಕಾ ಇತರ ಇಂದ್ರಿಯಗಳಂತೆ ಮನಸ್ಸೂ ಸಹ ಒಂದು ಇಂದ್ರಿಯವೇ, ಕರ್ತೃವಲ್ಲ. ಇದನ ಕರಣವಾಗಿ ಉಪಯೋಗಿಸುವ ಕರ್ತೃವು ಬೇರೆ. ಅದೇ ವಿಜ್ಞಾನ ಅಥವಾ ಬುದ್ಧಿ.

ಮನಸ್ಸೇ ಕರ್ತೃ ಅಥವಾ ಆತ್ಮ ಎಂದು ನಂಬಿದರೆ, ಮನಸ್ಸು ಎಲ್ಲ ಇಂದ್ರಿಯಗಳೊಂದಿಗೂ ಏಕಕಾಲದಲ್ಲಿಯೇ ಸಂಬಂಧವನ್ನು ಹೊಂದಿರುವುದರಿಂದ ಅವುಗಳಿಂದ ಬರುವ ಅನುಭವಗಳೂ ಏಕಕಾಲದಲ್ಲಿಯೇ ಉಂಟಾಗಿ ಭ್ರಮೆ ಹಿಡಿಯುತ್ತದೆ! ಆದ್ದರಿಂದ ಅದಕ್ಕಿಂತ ಬೇರೆಯಾದ ಕರ್ತೃವೊಂದು ಇರಲೇ ಬೇಕು. ಇದೇ ಬುದ್ಧಿ.

ಇಲ್ಲಿ ಬುದ್ಧಿ ಎಂಬ ಶಬ್ದವನ್ನು ಬೌದ್ಧರ ಕ್ಷಣಿಕವಿಜ್ಞಾನ ಅಥವಾ ವಿಜ್ಞಾನ ಎಂಬ ಪಾರಿಭಾಷಿಕಶಬ್ದಕ್ಕೆ ಸಮನಾಗಿ ಉಪಯೋಗಿಸಿದೆ. ಇವರ ಪ್ರಕಾರ ಬುದ್ಧಿಯು ಅಂತಃಕರಣದ ವೃತ್ತಿಯಲ್ಲ, ಅಲೆಯಲೆಯಾಗಿ ಬಂದು ಹೋಗುತ್ತಿರುವ ಜ್ಞಾನಸಂತತಿ.

## ಮೀಮಾಂಸಕರ ಮತ

**ಪ್ರಾಭಾಕರ-ತಾರ್ಕಿಕೌ ತು 'ಅನ್ಯೋಽಂತರ ಆತ್ಮಾಽಽನಂದಮಯಃ' (ತೈ.ಉ. ೨.೫.೧) ಇತ್ಯಾದಿಶ್ರುತೇಃ ಬುದ್ಧ್ಯಾದೀನಾಮ್ ಅಜ್ಞಾನೇ ಲಯದರ್ಶನಾತ್ ಅಹಮ್ ಅಜ್ಞಃ ಅಹಂ ಜ್ಞಾನೀ ಇತ್ಯಾದ್ಯನುಭವಾಚ್ಚ ಅಜ್ಞಾನಮ್ ಆತ್ಮಾ ಇತಿ ವದತಃ ॥೧೨೯॥**

೧೨೯. ಪ್ರಾಭಾಕರರು[1] ಮತ್ತು ತಾರ್ಕಿಕರು[2] '(ವಿಜ್ಞಾನಮಯನಿಗಿಂತ) ಬೇರೆಯವನೂ ಒಳಗಿರುವವನೂ ಆನಂದಮಯನೂ ಆದ ಆತ್ಮನಿರುವನು' (ತೈ. ಉ. ೨. ೫. ೧.) ಇತ್ಯಾದಿ ಶ್ರುತಿಯಿರುವುದರಿಂದಲೂ, ಬುದ್ಧಿ ಮೊದಲಾದವು[3] ಅಜ್ಞಾನದಲ್ಲಿ ಲಯ ಹೊಂದುವುದು[4] ಕಂಡುಬರುತ್ತಿರುವುದರಿಂದಲೂ ಮತ್ತು 'ನಾನು ಅಜ್ಞನು', 'ನಾನು ಜ್ಞಾನಿಯು'[5] ಇತ್ಯಾದಿ ಅನುಭವವಿರುವುದರಿಂದಲೂ ಅಜ್ಞಾನವೇ ಆತ್ಮ[6] ಎನ್ನುತ್ತಾರೆ.

1 ಪೂರ್ವಮೀಮಾಂಸಾದರ್ಶನದ ಮೂಲಗ್ರಂಥವಾದ ಜೈಮಿನಿಕೃತ ಮೀಮಾಂಸಾ ಸೂತ್ರಗಳ ಮೇಲೆ ಶಬರಮುನಿಗಳು ಭಾಷ್ಯವನ್ನು ಬರೆದಿದ್ದಾರೆ. ಇದರ ಮೇಲೆ ಪ್ರಭಾಕರಮಿಶ್ರರೆಂಬುವರು 'ಬೃಹತೀ' ಎಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇವರ ಅನುಯಾಯಿಗಳು ಪ್ರಾಭಾಕರರು. ಅದೇ ಶಾಬರಭಾಷ್ಯದ ಮೇಲೆ ಶ್ಲೋಕವಾರ್ತಿಕವೆಂಬ ಗ್ರಂಥವನ್ನು ಕುಮಾರಿಲಭಟ್ಟರೆಂಬ ಮತ್ತೊಬ್ಬ ವಿದ್ವಾಂಸರು ರಚಿಸಿದ್ದಾರೆ. ಇವರ ಅನುಯಾಯಿಗಳೇ ಮುಂದೆ ೧೩೯ ರಲ್ಲಿ ಹೇಳಿರುವ 'ಭಾಟ್ಟ'ರು.

2 ನ್ಯಾಯ-ವೈಶೇಷಿಕ ದರ್ಶನಗಳ ಪ್ರತಿಪಾದಕರು. ಇವರು ತರ್ಕಕ್ಕೆ ಪ್ರಾಧಾನ್ಯ ಕೊಟ್ಟಿರುವುದರಿಂದ 'ತಾರ್ಕಿಕ'ರು.

3 ಜ್ಞಾನ, ಸುಖ, ದುಃಖ, ಇಚ್ಛೆ ಇತ್ಯಾದಿ.

4 ಸುಷುಪ್ತಿಯಲ್ಲಿ ಜ್ಞಾನವಿರುವುದಿಲ್ಲ, ಆತ್ಮನಿರುತ್ತಾನೆ. ಆದ್ದರಿಂದ ಜ್ಞಾನಕ್ಕಿಂ ಬೇರೆಯಾದ, ಜ್ಞಾನವಲ್ಲದ, 'ಅ-ಜ್ಞಾನ'ದಲ್ಲಿ ಬುದ್ಧಿ ಮೊದಲಾದವು ಲಯ ಹೊಂದುತ್ತವೆ.

5 ಕೆಲವು ಪಾಠಗಳಲ್ಲಿ ಅಹಮಜ್ಞಾನೀ ಎಂದೂ, ಮತ್ತು ಕೆಲವು ಪಾಠಗಳ ಅಹಂ ಜ್ಞಾನೀ ಎಂದೂ ಇರುತ್ತದೆ.

6 ಪ್ರಾಭಾಕರರ ಮತ್ತು ತಾರ್ಕಿಕರ ಮತದಲ್ಲಿ ಆತ್ಮನು ಜ್ಞಾನಸ್ವರೂಪನ ಜ್ಞಾನವು ಆತ್ಮನಿಗೆ ಬಂದು ಹೋಗತಕ್ಕಂಥ ಒಂದು ಗುಣ. ಆದುದರಿಂದ ಅವ ಜ್ಞಾನಕ್ಕಿಂತ ಭಿನ್ನವಾದ, 'ಅ-ಜ್ಞಾನ'ವಾದ, ಜಡವಾದ ವಸ್ತು.

**ಭಾಟ್ಟಸ್ತು 'ಪ್ರಜ್ಞಾನಘನ ಏವಾನಂದಮಯಃ' (ಮಾಂ.ಉ ೫) ಇತ್ಯಾದಿಶ್ರುತೇಃ ಸುಷುಪ್ತೌ ಪ್ರಕಾಶ-ಅಪ್ರಕಾಶ-ಸದ್ಭಾವಾ ಮಾಮ್ ಅಹಂ ನ ಜಾನಾಮಿ ಇತ್ಯಾದ್ಯನುಭವಾಚ್ಚ ಅಜ್ಞಾನೋಪ ಹಿತಂ ಚೈತನ್ಯಮ್ ಆತ್ಮಾ ಇತಿ ವದತಿ ||೧೩೦||**

೧೩೦. ಭಾಟ್ಟನಾದರೋ[1] 'ಕೇವಲ ಪ್ರಜ್ಞಾನಘನನು ಮತ್ತು ಆನ ಮಯನು'[2] (ಮಾಂ. ಉ. ೫) ಇತ್ಯಾದಿ ಶ್ರುತಿಯಿರುವುದರಿಂದಲೂ, ಸುಷು ಯಲ್ಲಿ ಜ್ಞಾನ-ಅಜ್ಞಾನಗಳೆರಡೂ[3] ಇರುವುದರಿಂದಲೂ, 'ನಾನು ನನ್ನನ್ನು ಯೆನು' ಇತ್ಯಾದಿ ಅನುಭವವಿರುವುದರಿಂದಲೂ ಅಜ್ಞಾನವನ್ನು ಉಪಾಧಿಯ ಹೊಂದಿರುವ ಚೈತನ್ಯವೇ ಆತ್ಮ ಎಂದು ಹೇಳುತ್ತಾನೆ.[4]

1 ಕುಮಾರಿಲಭಟ್ಟನ ಅನುಯಾಯಿ.

2 ಜಾಗ್ರತ್ ಸ್ವಪ್ನಾವಸ್ಥೆಗಳಲ್ಲಿ ಜ್ಞಾನವು ಸ್ಪಷ್ಟವಾಗಿ ಗೋಚರವಾಗುತ್ತ ಸುಷುಪ್ತಿಯಲ್ಲಿ ಇಲ್ಲ. ಆದ್ದರಿಂದ ಪ್ರಜ್ಞಾನವು ಘನೀಭೂತವಾಗಿದೆ ಎಂದು ಹೇ ಆನಂದಮಯ ಎಂಬಲ್ಲಿ 'ಮಯ' ಎಂಬ ಪ್ರತ್ಯಯವು ಪ್ರಚುರವಾಗಿದೆ ಎಂಬರ್ಥ ಉಪಯೋಗಿಸಲ್ಪಟ್ಟಿದೆ. ಆನಂದವು ಹೆಚ್ಚಾಗಿರುವುದರಿಂದ ಆನಂದಮಯ. ಆ ಜೊತೆಗೆ ಆನಂದವಲ್ಲದ್ದೂ, ಎಂದರೆ, ಜಡಾಂಶವೂ ಇರುತ್ತದೆ.

3 ಸುಷುಪ್ತಿಯಿಂದ ಎದ್ದವನು 'ನಾನು ಸುಖವಾಗಿ ನಿದ್ರಿಸಿದೆನು, ನ ಏನೂ ತಿಳಿಯಲಿಲ್ಲ' ಎಂದು ಸ್ಮರಿಸಿಕೊಳ್ಳುತ್ತಾನೆ. 'ನನಗೆ ಏನೂ ತಿಳಿಯಲಿ ಎಂಬುದು ಅಜ್ಞಾನದ ಅಂಶ. ಸುಖನಿದ್ರೆಯ ಅನುಭವವನ್ನು ಸ್ಮರಿಸುತ್ತಿರು

ರಿಂದ ಅನುಭವ ಕಾಲದಲ್ಲಿ ಜ್ಞಾನವಿದ್ದಿರಲೇಬೇಕಷ್ಟೆ. ಹೀಗೆ ಸುಷುಪ್ತಿಯಲ್ಲಿ ಜ್ಞಾನ-ಅಜ್ಞಾನಗಳೆರಡೂ ಇರುತ್ತವೆ.

4 ಈ ಮತದ ಪ್ರಕಾರ ಆತ್ಮನು ಸಂಪೂರ್ಣ ಜಡವಸ್ತುವೂ ಅಲ್ಲ, ಕೇವಲ ಜ್ಞಾನಸ್ವರೂಪನೂ ಅಲ್ಲ; ಅವನು ಇವೆರಡರ ಮಿಶ್ರಣ.

## ಶೂನ್ಯವಾದಿ ಬೌದ್ಧರ ಮತ

**ಅಪರೋ ಬೌದ್ಧಃ 'ಅಸದೇವೇದಮಗ್ರ ಆಸೀತ್' (ಛಾ.ಉ. ೩.೧೯.೧) ಇತ್ಯಾದಿಶ್ರುತೇಃ ಸುಷುಪ್ತೌ ಸರ್ವಾಭಾವಾದ್ ಅಹಂ ಸುಷುಪ್ತೌ ನಾಸಮ್ ಇತಿ ಉತ್ಥಿತಸ್ಯ ಸ್ವ-ಅಭಾವ-ಪರಾಮರ್ಶ-ವಿಷಯ-ಅನುಭವಾಚ್ಚ ಶೂನ್ಯಮ್ ಆತ್ಮಾ ಇತಿ ವದತಿ ||೧೩೧||**

೧೩೧. ಮತ್ತೊಬ್ಬ[1] ಬೌದ್ಧನು '(ಸೃಷ್ಟಿಗೆ) ಮೊದಲು ಈ ಜಗತ್ತು ಅಸತ್ತೇ ಆಗಿತ್ತು'[2] (ಛಾಂ.ಉ.೩.೧೯.೧) ಇತ್ಯಾದಿ ಶ್ರುತಿಯಿರುವುದರಿಂದಲೂ, ಸುಷುಪ್ತಿಯಲ್ಲಿ ಏನೂ[3] ಇಲ್ಲದಿರುವುದರಿಂದಲೂ, 'ನಾನು ಸುಷುಪ್ತಿಯಲ್ಲಿ ಇರಲಿಲ್ಲ' ಎಂದು (ಸುಷುಪ್ತಿಯಿಂದ) ಎಚ್ಚೆತ್ತವನು ತನ್ನ ಅಭಾವದ ಪರಾಮರ್ಶವನ್ನು ವಿಷಯವಾಗಿ ಹೊಂದಿರುವ ಅನುಭವವನ್ನು ಪಡೆಯುತ್ತಿರುವುದರಿಂದಲೂ[4] ಶೂನ್ಯವೇ ಆತ್ಮ ಎಂದು ಹೇಳುತ್ತಾನೆ.

1 ಕ್ಷಣಿಕ ವಿಜ್ಞಾನವಾದಿಗಿಂತ ಬೇರೆಯಾದ ಶೂನ್ಯವಾದಿಯು.

2 ವೇದಾಂತಿಗಳ ಪ್ರಕಾರ ಅಸತ್ತೆಂದರೆ ಶೂನ್ಯವಲ್ಲ, ನಾಮರೂಪಗಳು ಪ್ರಕಟವಾಗುವುದಕ್ಕಿಂತ ಮುಂಚಿನ ಅವಸ್ಥೆ.

3 ಅರಿಯುವವನು, ಅರಿಯಲು ಯೋಗ್ಯವಾದ ವಸ್ತು ಮತ್ತು ಅರಿವು.

4 ಸುಷುಪ್ತಿಯಲ್ಲಿ ಯಾವ ಅನುಭವವೂ ಗೋಚರವಾಗುವುದಿಲ್ಲ. ಎದ್ದಮೇಲೆ ಆಗುವ ಸ್ಮರಣೆಯು ಆ 'ಅನುಭವ'ದ ಪರಾಮರ್ಶವಷ್ಟೆ. ಆದ್ದರಿಂದ ಜಾಗ್ರದವಸ್ಥೆಯಲ್ಲಿ ತೋರುವ ಈ ಅನುಭವವು ವ್ಯಕ್ತಿತ್ವದ ಅಭಾವದ ಪರಾಮರ್ಶದ ಅನುಭವವೇ ಹೊರತು ನೇರ ಅನುಭವದ ಸ್ಮರಣೆಯಲ್ಲ.

**ಏತೇಷಾಂ ಪುತ್ರಾದೀನಾಮ್ ಅನಾತ್ಮತ್ವಮ್ ಉಚ್ಯತೇ ॥೧೩೨॥**

೧೩೨. ಈಗ ಈ ಮಗನೇ ಮೊದಲಾದವರು ಆತ್ಮನಲ್ಲವೆಂಬುದು ಹೇಳಲ್ಪಡುತ್ತತೆ.

ಇಲ್ಲಿಂದ ಆತ್ಮಸ್ವರೂಪದ ಬಗ್ಗೆ ವೇದಾಂತಮತದ ನಿರೂಪಣೆಯನ್ನು ಪ್ರಾರಂಭಿಸಲಾಗಿದೆ. ಅದಕ್ಕೆ ಮುಂಚೆ ಇದುವರೆಗೆ ಹೇಳಿದ ಇತರ ಮತಗಳನ್ನು ನಿರಾಕರಿಸಬೇಕಷ್ಟೆ. ಈ ನಿರಾಕರಣೆಯನ್ನು ಎರಡು ಹಂತಗಳಲ್ಲಿ ಮಾಡಲಾಗಿದೆ. ಮೊದಲನೆಯದರಲ್ಲಿ ಈ ಮತಗಳು ಪರಸ್ಪರ ವಿರುದ್ಧವಾಗಿರುವುದರಿಂದ ತಾವಾಗಿಯೇ ನಿರಾಕೃತವಾಗುತ್ತವೆಯೆಂದು ಹೇಳಿ ಎರಡನೆಯದರಲ್ಲಿ ನೇರವಾಗಿಯೇ ಆ ಮತಗಳನ್ನು ನಿರಾಕರಿಸಿದೆ.

**ಏತೈಃ ಅತಿಪ್ರಾಕೃತಾದಿವಾದಿಭಿಃ ಉಕ್ತೇಷು ಶ್ರುತಿ-ಯುಕ್ತಿ-ಅನುಭವ ಆಭಾಸೇಷು ಪೂರ್ವಪೂರ್ವೋಕ್ತ-ಶ್ರುತಿ-ಯುಕ್ತಿ-ಅನುಭವ-ಆಭಾಸಾನಾಮ್ ಉತ್ತರೋತ್ತರ-ಶ್ರುತಿ-ಯುಕ್ತಿ-ಅನುಭವ ಆಭಾಸೈಃ ಆತ್ಮತ್ವಬಾಧದರ್ಶನಾತ್ ಪುತ್ರಾದೀನಾಮ್ ಅನಾತ್ಮತ್ವಂ ಸ್ಪಷ್ಟಮೇವ ॥೧೩೩॥**

೧೩೩. ಅತ್ಯಂತ ಸ್ಥೂಲಬುದ್ಧಿಯುಳ್ಳವನೇ ಮೊದಲಾದ ಈ ವಾದಿಗಳಿಂದ ಹೇಳಲ್ಪಟ್ಟ, ಶ್ರುತಿ-ಯುಕ್ತಿ-ಅನುಭವಗಳಂತೆ ತೋರುತ್ತಿರುವ ಈ ವಾದಗಳಲ್ಲಿ, ಮುಂಚೆ ಮುಂಚೆ ಹೇಳಲ್ಪಟ್ಟ ಶ್ರುತಿ-ಯುಕ್ತಿ-ಅನುಭವಗಳಂತೆ ತೋರುವ ವಾದಗಳಲ್ಲಿ ಪ್ರತಿಪಾದಿಸಿದ ಆತ್ಮವು ಮುಂದುಮುಂದಿನ ಶ್ರುತಿ-ಯುಕ್ತಿ-ಅನುಭವಗಳಂತೆ ತೋರುವ ವಾದಗಳಿಂದ ನಿರಾಕರಿಸಲ್ಪಡುವುದರಿಂದ ಮಗನೇ ಮೊದಲಾದವು ಆತ್ಮವಲ್ಲ ಎಂಬುದು ಸ್ಪಷ್ಟವೇ ಆಗಿದೆ.

**ಕಿಂಚ—'ಪ್ರತ್ಯಕ್', 'ಅಸ್ಥೂಲಃ', 'ಅಚಕ್ಷುಃ', 'ಅಪ್ರಾಣಃ', 'ಅಮನಾಃ', 'ಅಕರ್ತಾ', 'ಚೈತನ್ಯಂ', 'ಚಿನ್ಮಾತ್ರಂ', 'ಸತ್'—ಇತ್ಯಾದಿಪ್ರಬಲಶ್ರುತಿವಿರೋಧಾತ್ ಅಸ್ಯ**

**ಪುತ್ರಾದಿಶೂನ್ಯಪರ್ಯಂತಸ್ಯ ಜಡಸ್ಯ ಚೈತನ್ಯಭಾಸ್ಯತ್ವೇನ ಘಟಾದಿವತ್ ಅನಿತ್ಯತ್ವಾತ್ ಅಹಂ ಬ್ರಹ್ಮೇತಿ ವಿದ್ವದನುಭವಪ್ರಾಬಲ್ಯಾಚ್ಚ ತತ್ತತ್-ಶ್ರುತಿ-ಯುಕ್ತಿ-ಅನುಭವ-ಆಭಾಸಾನಾಂ ಬಾಧಿತತ್ವಾದಪಿ ಪುತ್ರಾದಿ-ಶೂನ್ಯಪರ್ಯಂತಮ್ ಅಖಿಲಮ್ ಅನಾತ್ಮಾ ಏವ ॥೧೩೪॥**

೧೩೪. ಮತ್ತು-'ಒಳಗಿರುವವನು', 'ಸ್ಥೂಲನಲ್ಲ', 'ಪ್ರಾಣವಲ್ಲ', 'ಮನಸ್ಸಲ್ಲ', 'ಕರ್ತೃವಲ್ಲ', 'ಚೈತನ್ಯನು', 'ಚಿನ್ಮಾತ್ರನು', 'ಸದ್ವಸ್ತುವು' ಇತ್ಯಾದಿ ಪ್ರಬಲಶ್ರುತಿಗಳ ವಿರೋಧವಿರುವುದರಿಂದಲೂ, ಮಗನಿಂದ ಮೊದಲಾಗಿ ಶೂನ್ಯದವರೆಗಿನ ಈ ಜಡವಸ್ತುವು ಮಡಕೆಯೇ ಮುಂತಾದುವಂತೆ ಚೈತನ್ಯದಿಂದ ಬೆಳಗಲ್ಪಡುವ ಕಾರಣ ಅನಿತ್ಯವಾಗಿರುವುದ ರಿಂದಲೂ 'ನಾನು ಬ್ರಹ್ಮ' ಇತ್ಯಾದಿಯಾಗಿ ಜ್ಞಾನಿಗಳ ಅನುಭವವು (ವ್ಯಾವಹಾರಿಕ ಅನುಭವಗಳಿಗಿಂತ) ಪ್ರಬಲವಾಗಿರುವುದರಿಂದಲೂ, ಮತ್ತು, ಆಯಾ ಶ್ರುತಿ-ಯುಕ್ತಿ-ಅನುಭವಗಳಂತೆ ತೋರುತ್ತಿರುವವು ನಿರಾಕೃತವಾಗು ವುದರಿಂದ ಕೂಡ, ಮಗನಿಂದ ಶೂನ್ಯದವರೆಗಿನ ಎಲ್ಲವೂ ಅನಾತ್ಮವೇ.

ಇತರ ವಾದಿಗಳು ತಮ್ಮ ತಮ್ಮ ಮತದ ಪ್ರಕಾರ ಆತ್ಮವು ಯಾವುದೆಂಬುದನ್ನು ನಿರ್ಧರಿಸಿ ತೋರಿಸಲು ಶ್ರುತಿ ಯುಕ್ತಿ ಮತ್ತು ಅನುಭವ ಎಂಬ ಮೂರು ವಿಧದ ಪ್ರಮಾಣಗಳನ್ನು ಕೊಟ್ಟಿದ್ದಾರೆ. ಇವು ಮೂರನ್ನೂ ಖಂಡಿಸಿ ಈಗ ಸಿದ್ಧಾಂತವನ್ನು ಮಂಡಿಸಬೇಕಾಗಿದೆ. ಸಿದ್ಧಾಂತದಲ್ಲೂ ಇದೇ ಕ್ರಮವನ್ನು ಅನುಸರಿಸಿದ್ದರೂ ಅವು ಗಳಿಗಿಂತ ಪ್ರಬಲತರವಾದ ಶ್ರುತಿ ಯುಕ್ತಿ ಅನುಭವಗಳನ್ನು ಉದಾಹರಿಸಿದೆ.

**ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತಚಕ್ಷುರಮೃತತ್ವಮಿಚ್ಛನ್, 'ಅಮೃತತ್ವವನ್ನು ಬಯಸುವವನಾಗಿ ವಿವೇಕಿಯೊಬ್ಬನು ಇಂದ್ರಿಯ ಸಮೂಹವನ್ನು ಹಿಂದಿರುಗಿಸಿ ಒಳಗಿರುವ ಆತ್ಮನನ್ನು ನೋಡಿದನು' (ಕ.ಉ.೪.೧) ಎಂಬ ಶ್ರುತಿಯು ಪುತ್ರನು (ತನಗಿಂತ ಹೊರಗಿರುವುದರಿಂದ) ಆತ್ಮನಲ್ಲ ಎಂದು ಹೇಳುತ್ತದೆ.**

**ಅಸ್ಥೂಲಃ ಅನಣುಃ..., 'ಸ್ಥೂಲನಲ್ಲ, ಅಣುವಲ್ಲ' (ಬೃ.ಉ. ೩.೮.೮) ಎಂಬ ಶ್ರುತಿವಾಕ್ಯವು ಸ್ಥೂಲಶರೀರವು ಆತ್ಮನೆಂಬುದನ್ನು ನಿರಾಕರಿಸುತ್ತದೆ.**

**ಅಪ್ರಾಣೋ ಹ್ಯಮನಾಃ ಶುಭ್ರಃ, 'ಪ್ರಾಣ ಮನಸ್ಸುಗಳಿಲ್ಲದವನು ಶುಭ್ರನು' (ಮುಂ. ಉ. ೨.೧.೨) ಎಂಬ ಶ್ರುತಿಯು ಪ್ರಾಣಮನಸ್ಸುಗಳು ಆತ್ಮನಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ.**

**ಅಚಕ್ಷುಃಶ್ರೋತ್ರಂ ತದಪಾಣಿಪಾದಮ್**, 'ಅದಕ್ಕೆ ಕಣ್ಣು-ಕಿವಿಯಿಲ್ಲ, ಕೈಕಾಲುಗಳಿಲ್ಲ' (ಮುಂ.ಉ. ೧.೧.೬) ಎಂಬ ಶ್ರುತಿಯು ಇಂದ್ರಿಯಗಳು ಆತ್ಮನಲ್ಲ ವೆನ್ನುತ್ತದೆ.

**ಅನಂತಶ್ಚಾತ್ಮಾ ವಿಶ್ವರೂಪೋ ಹ್ಯಕರ್ತಾ**, 'ಆತ್ಮನು, ಅನಂತನು, ವಿಶ್ವ ರೂಪನು, ಅಕರ್ತೃವು' (ಶ್ವೇ. ಉ. ೧.೯) ಎಂಬ ಶ್ರುತಿಯು ಆತ್ಮನು ಬುದ್ಧಿಯಲ್ಲ (ಎಂದರೆ ಕರ್ತೃವಾದ ವಿಜ್ಞಾನಮಯನಲ್ಲ) ಎಂದು ಘೋಷಿಸುತ್ತದೆ.

**ನ ಚಾಸ್ತಿ ವೇತ್ತಾ ಮಮ ಚಿತ್ಸದಾಽಹಮ್**, 'ನನ್ನನ್ನು ಯಾರೂ ಅರಿಯರು. ನಾನು ಶಾಶ್ವತ ಚೈತನ್ಯವು' (ಕೈ.ಉ. ೨.೧) ಎಂಬ ಶ್ರುತಿಯು ಅಜ್ಞಾನವೇ ಆತ್ಮ ಎಂಬ ಮತವನ್ನು ಖಂಡಿಸುತ್ತದೆ.

**ಚಿನ್ಮಾತ್ರೋಽಹಂ ಸದಾಶಿವಃ**, 'ನಾನು ಚಿನ್ಮಾತ್ರನು, ಸದಾಶಿವನು' (ಕೈ.ಉ. ೧೮) ಎಂಬ ಶ್ರುತಿವಾಕ್ಯವು ಆತ್ಮನು ಜಡ-ಚೈತನ್ಯಗಳ ಮಿಶ್ರಣವೆಂಬ ವಾದವನ್ನು ನಿರಾಕರಿಸುತ್ತದೆ.

**ತತ್ಸತ್ಯಂ ಸ ಆತ್ಮಾ**, 'ಅದು ಸತ್ಯವು, ಅವನೇ ಆತ್ಮನು' (ಛಾಂ. ಉ. ೬.೮.೭) **ಸದೇವ ಸೌಮ್ಯೇದಮಗ್ರ ಆಸೀತ್**, 'ಪ್ರೀತಿಪಾತ್ರನೆ, ಈ ಜಗತ್ತು ಸೃಷ್ಟಿಗೆ ಮೊದಲು ಸದ್ವಸ್ತುವೇ ಆಗಿತ್ತು' (ಛಾಂ.ಉ. ೯.೨.೧) ಇತ್ಯಾದಿ ಶ್ರುತಿಯು ಆತ್ಮನು ಶೂನ್ಯವಲ್ಲ ಎನ್ನುತ್ತವೆ.

ಹೀಗೆ ಪ್ರತಿವಾದಿಗಳು ಉದ್ಧರಿಸಿದ್ದ, ಸಂದರ್ಭಕ್ಕೆ ಉಚಿತವಲ್ಲದ, ಶ್ರುತಿವಾಕ್ಯ ಗಳನ್ನು ನಿರಾಕರಿಸಿ ಅವುಗಳಿಗಿಂತ ಪ್ರಬಲವಾದ ಇತರ ಶ್ರುತಿವಾಕ್ಯಗಳನ್ನು ಕೊಡ್ಲಾ ಯಿತು. ಈಗ ಯುಕ್ತಿಯಿಂದಲೂ ಅವರ ವಾದವನ್ನು ನಿರಾಕರಿಸಬಹುದು ಎಂಬು ದನ್ನು ತೋರಿಸಲಾಗುವುದು. ಮಗನೇ ಮೊದಲಾದ ವಸ್ತುಗಳು ನಮ್ಮ ಅರಿವಿಗೆ ಬರಬೇಕಾದರೆ ನಮ್ಮಲ್ಲಿರುವ ಚೈತನ್ಯದಿಂದ ಬೆಳಗಲ್ಪಟ್ಟಾಗ ಮಾತ್ರ. ಮಡಕೆಯೇ ಮೊದಲಾದ ಜಡವಸ್ತುಗಳಂತೆಯೇ ಇವೂ ಕೂಡ. ಸ್ವತಃ ಬೆಳಗುವ ಶಕ್ತಿಯಿಲ್ಲದ, ಚೈತನ್ಯದಿಂದ ಮಾತ್ರ ಗೋಚರವಾಗುವ ಈ ಜಡವಸ್ತುಗಳು ನಶ್ವರ, ಅನಿತ್ಯ ಎಂಬುದು ಲೋಕಪ್ರಸಿದ್ಧ. ಆದುದರಿಂದ ಮಗ, ಶರೀರ, ಇಂದ್ರಿಯಗಳು ಮೊದ ಲಾದುವು ಸಹ ನಶ್ವರ ಅನಿತ್ಯ; ಆದುದರಿಂದಲೇ ಅವು ಆತ್ಮನಾಗಲಾರವು.

ಇನ್ನು ಅನುಭವ. ಬೃಹದಾರಣ್ಯಕದಲ್ಲಿ (೧.೪.೭) ಪ್ರಾಣಾದಿಗಳಲ್ಲಿ ಆತ್ಮಭಾವ ವನ್ನಿಟ್ಟು ಉಪಾಸಿಸುವುದು ಅಜ್ಞಾನವೆಂದೂ, ಎಲ್ಲವೂ ಆತ್ಮನಲ್ಲಿಯೇ ಒಂದಾಗು

ದರಿಂದ ಆತ್ಮನನ್ನೇ ಉಪಾಸಿಸಬೇಕೆಂದೂ ಆತ್ಮನನ್ನೇ ಅರಿಯಬೇಕೆಂದೂ, ಆತ್ಮನಿಂತ ಬೇರೆಯಾದ ಅರಿಯಲು ಯೋಗ್ಯವಾದ ವಸ್ತುವಿಲ್ಲವೆಂದೂ, ಅದನ್ನು ಅರಿತವನೇ ಜವಾದ ವಿದ್ವಾಂಸನೆಂದೂ ಹೇಳಿದೆ. ಇಂಥ ಆತ್ಮನನ್ನು ಅಥವಾ ಬ್ರಹ್ಮವನ್ನು ಅರಿತವನು ಬ್ರಹ್ಮವೇ ಆಗುತ್ತಾನೆ. ಇದಕ್ಕಿಂತ ಕಡಮೆಯಾದ ವಸ್ತುವನ್ನರಿತವನ ನುಭವಕ್ಕಿಂತ ಬ್ರಹ್ಮವನ್ನು ಅಹಂ ಬ್ರಹ್ಮಾಸ್ಮಿ ಎಂದು ಅರಿತವನ ಅನುಭವವು ತ್ಯಂತ ಹೆಚ್ಚಿನದು.

ಹೀಗೆ ಶ್ರುತಿ ಯುಕ್ತಿ ಅನುಭವಗಳಿಂದ ಇತರ ವಾದಿಗಳ ಮತಗಳು ನಿರಾಕೃತಾಗಿ ವೇದಾಂತಸಂಮತ ಸಿದ್ಧಾಂತವು ಸಾಧಿತವಾಗುತ್ತದೆ.

**ಅತಃ ತತ್ತದ್-ಭಾಸಕಂ ನಿತ್ಯ-ಶುದ್ಧ-ಬುದ್ಧ-ಮುಕ್ತ-ಸತ್ಯ-ಸ್ವಭಾವಂ ಪ್ರತ್ಯಕ್ ಚೈತನ್ಯಮೇವ ಆತ್ಮವಸ್ತು ಇತಿ ವೇದಾಂತ-ವಿದ್ವದ್-ಅನುಭವಃ ॥೧೩೫॥**

೧೩೫. ಆದುದರಿಂದ ಅವವುಗಳನ್ನು[1] ಬೆಳಗಿಸುವ,[2] ನಿತ್ಯ[3] ಶುದ್ಧ[4] ಬುದ್ಧ[5] ಮುಕ್ತ[6] ಸತ್ಯ[7] ಸ್ವಭಾವವುಳ್ಳ, ಒಳಗಿರುವ[8] ಚೈತನ್ಯವೇ ಆತ್ಮವಸ್ತು ಎಂಬುದು ವೇದಾಂತವನ್ನರಿತವರ[9] ಅನುಭವವು.

1 ಮಗ, ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ಅಜ್ಞಾನ-ಇವುಗಳನ್ನು.

2 ಜ್ಞಾನಕ್ಕೆ ವಿಷಯವಾಗಿ ಮಾಡುವ.

3 ನಿತ್ಯವಾದ, ಶಾಶ್ವತವಾದ, ಅಥವಾ 'ನಿತ್ಯ'ಪದವನ್ನು ಶುದ್ಧ ಬುದ್ಧ ಮೊದಲಾದುವುಗಳಿಗೆ ವಿಶೇಷಣವಾಗಿ ಸಹ ಉಪಯೋಗಿಸಬಹುದು; ನಿತ್ಯಶುದ್ಧ, ನಿತ್ಯಬುದ್ಧ ಇತ್ಯಾದಿ.

4 ಸಂಸಾರಧರ್ಮಗಳಿಂದ ವರ್ಜಿತವಾದ.

5 ಸ್ವಯಂಜ್ಞಾನಸ್ವರೂಪವಾದ. ಪ್ರಕಾಶವೆಂದರೆ ದೀಪದ ಬೆಳಕಿನಂಥ ಬೆಳಕಲ್ಲ ವೆಂಬುದನ್ನು ತೋರಿಸಲು ಈ ಶಬ್ದನನ್ನು ಪ್ರಯೋಗಿಸಿದೆ.

6 ಸದಾ ಮುಕ್ತವಾದ; ಮುಂಚೆ ಬಂಧನದಲ್ಲಿದ್ದು ಅನಂತರ ಮುಕ್ತವಾಯಿತು ಎಂದರ್ಥವಲ್ಲ.

7 ಶೂನ್ಯವಲ್ಲ ಎಂದರ್ಥ.

8 ದೇಹಾದಿ ಅಜ್ಞಾನಾಂತ ವಸ್ತುಗಳೆಲ್ಲಕ್ಕಿಂತ ಒಳಗಿರುವ.

9 ವೇದಾಂತವೇ ಸಮ್ಯಕ್ಪ್ರಮಾಣ. ಅದನ್ನರಿತವರೇ ನಿಜವಾದ ವಿದ್ವಾಂಸ ಜ್ಞಾನಿಗಳು ಎಂದು ತಿಳಿಯಬೇಕು. ಮಿಕ್ಕ ಶಾಸ್ತ್ರಗಳೂ ವಿದ್ವಾಂಸರೂ ಆಭಾಸಗ ಎಂಬುದು ಇಲ್ಲಿ ಧ್ವನಿತವಾಗಿದೆ.

**ಏವಮ್ ಅಧ್ಯಾರೋಪಃ ॥೧೩೬॥**

೧೩೬. ಹೀಗೆ ಅಧ್ಯಾರೋಪವು ಮುಗಿಯಿತು.

೧೨೨ ನೆಯ ಕಂಡಿಕೆಯಿಂದ ಪ್ರಾರಂಭವಾದ ಅಧ್ಯಾರೋಪದ ವಿಷಯವು ಇಲ್ಲಿ ಮುಗಿಯಿತು.

ಅಪವಾದ

**ಅಪವಾದೋ ನಾಮ ರಜ್ಜುವಿವರ್ತಸ್ಯ ಸರ್ಪಸ್ಯ ರಜ್ಜು ಮಾತ್ರತ್ವವದ್ ವಸ್ತುವಿವರ್ತಸ್ಯ ಅವಸ್ತುನಃ ಅಜ್ಞಾನಾದೇ ಪ್ರಪಂಚಸ್ಯ ವಸ್ತುಮಾತ್ರತ್ವಮ್ ॥೧೩೭॥**

೧೩೭. ಅಪವಾದವೆಂದರೆ–ಹಗ್ಗದ ವಿವರ್ತವಾದ[1] ಹಾವು ಕೇವ ಹಗ್ಗವೇ ಆಗಿರುವಂತೆ ವಸ್ತುವಿನ[2] ವಿವರ್ತವಾದ, ವಸ್ತುವಲ್ಲದ,[3] ಅಜ್ಞಾನ ಪ್ರಪಂಚವು[4] ವಸ್ತುಮಾತ್ರವೇ ಆಗಿ ಉಳಿಯುವುದು.

1 ಪರಿಣಾಮ ಮತ್ತು ವಿವರ್ತ ಎಂಬ ಪಾರಿಭಾಷಿಕಶಬ್ದಗಳನ್ನು ಮುಂ ಕಂಡಿಕೆಯಲ್ಲಿ ವಿವರಿಸಿದೆ.

2 ಪರಮಾರ್ಥತಃ ನಿಜವಾದ ವಸ್ತುವಿನ.

3 ತಾತ್ಕಾಲಿಕವಾಗಿ ತೋರುವ, ಪರಮಾರ್ಥ ವಸ್ತುವಲ್ಲದ.

4 ಅಜ್ಞಾನದಿಂದ ಮೊದಲಾಗಿ ಉಂಟಾಗಿರುವ ಸಮಸ್ತ ಸೃಷ್ಟಿ.

**ತದುಕ್ತಮ್**—

**‘ಸತತ್ತ್ವತೋಽನ್ಯಥಾಪ್ರಥಾ ವಿಕಾರ ಇತ್ಯುದೀರಿತಃ ।**
**ಅತತ್ತ್ವತೋಽನ್ಯಥಾಪ್ರಥಾ ವಿವರ್ತ ಇತ್ಯುದೀರಿತಃ ॥’**

**ಇತಿ ॥೧೩**

೧೩೮. ಅದನ್ನು ಹೀಗೆ ಹೇಳಿರುತ್ತದೆ: "(ವಸ್ತುವೊಂದು) ನಿಜವಾಗಿ ೇರೊಂದು ರೀತಿಯಲ್ಲಿ ತೋರಿಕೊಳ್ಳುವುದನ್ನು 'ವಿಕಾರ'ವೆಂದು ಹೇಳಿರು ದೆ. (ಅದು) ನಿಜವಾಗಿಲ್ಲದ ಬೇರೊಂದು ರೀತಿಯಲ್ಲಿ ತೋರಿಕೊಳ್ಳುವುದನ್ನು ವಿವರ್ತ' ವೆಂದು ಹೇಳಿರುತ್ತದೆ.

ಇಲ್ಲಿ ಉದ್ಧರಿಸಿರುವ ಕಾರಿಕೆಯು ಯಾವ ಗ್ರಂಥದಿಂದ ಎಂಬುದು ತಿಳಿದು ಂದಿಲ್ಲ. ವೇದಾಂತಸೂತ್ರಗಳ ೧.೩.೨೧ ರ ಮೇಲಿನ 'ಪರಿಮಳಾ' ವ್ಯಾಖ್ಯಾನದಲ್ಲಿ ಂಥದ್ದೇ ವಾಕ್ಯವಿದೆ: **ತತ್ತ್ವತೋಽನ್ಯಥಾಭಾವಃ ಪರಿಣಾಮಃ ಅತತ್ತ್ವತೋ ನ್ಯಥಾಭಾವಃ ವಿವರ್ತಃ ॥**

ಒಂದು ವಸ್ತುವು ಮತ್ತೊಂದು ವಸ್ತುವಾಗಿ ಬದಲಾವಣೆ ಹೊಂದುವುದು ರಡು ರೀತಿಯಲ್ಲಿ ಸಾಧ್ಯವಾಗಬಹುದು: ಹಾಲು ಮೊಸರಾಗುವುದು, ಹಗ್ಗವು ವಾಗುವುದು. ಹಾಲು ಮೊಸರಾದಾಗ, ಮೊಸರು ಹಾಲಿನಿಂದ ಉತ್ಪನ್ನವಾಗಿದ್ದರೂ ಾಲಿನಷ್ಟೇ ಸತ್ಯವಾಗಿದ್ದರೂ ಹಾಲಿನ ಪೂರ್ಣ ಪರಿಣಾಮವು ಮೊಸರಿನಲ್ಲಿದ್ದರೂ ವೆರಡಕ್ಕೂ ಭೇದವಿರುತ್ತದೆ. ಇಂತಹ ಬದಲಾವಣೆಯನ್ನು 'ವಿಕಾರ' ಅಥವಾ ಪರಿಣಾಮ' ಎಂದು ಕರೆಯುತ್ತಾರೆ. ಮಸುಗತ್ತಲೆಯಲ್ಲಿ ಹಗ್ಗವು ಹಾವಾಗಿ ಕಂಡಾಗ, ಗ್ಗವು ನಿಜವಾಗಿ ಹಾವಿನ ರೂಪದಲ್ಲಿ ಪರಿಣಾಮ ಹೊಂದಿರುವುದಿಲ್ಲ. ಇದು ಕೇವಲ ೋರಿಕೆಯಷ್ಟೆ. ಇಂತಹ ಬದಲಾವಣೆಯನ್ನು 'ವಿವರ್ತ' ಎಂದು ಕರೆಯುತ್ತಾರೆ.

ಈ ಜಗತ್ತು ಹೇಗೆ ಉತ್ಪನ್ನವಾಯಿತು ಎಂಬ ಪ್ರಶ್ನೆಯನ್ನು ವಿವಿಧ ದಾರ್ಶನಿಕರು ವಿಧ ರೀತಿಯಲ್ಲಿ ಉತ್ತರಿಸಿದ್ದಾರೆ. ನೂಲಿನಿಂದ ಬಟ್ಟೆಯಾಗುವಂತೆ ಪಂಚಭೂತಗಳ ರಮಾಣುಗಳಿಂದ ಈ ಜಗತ್ತು ಉತ್ಪನ್ನವಾಯಿತೆಂಬುದು ನ್ಯಾಯ-ವೈಶೇಷಿಕರ ತ. ಇದನ್ನು 'ಆರಂಭವಾದ' ಎನ್ನುತ್ತಾರೆ. ಹಾಲಿನಿಂದ ಮೊಸರಾಗುವಂತೆ, ಣ್ಣಿನಿಂದ ಮಡಕೆಯೂ, ಬಂಗಾರದಿಂದ ಒಡವೆಗಳೂ ಆಗುವಂತೆ ಬ್ರಹ್ಮದಿಂದ ಗತ್ತು ಉಂಟಾಗಿದೆ ಎಂಬುದು ಪೂರ್ವಮೀಮಾಂಸಕರ ಮತ್ತು ವಿಶಿಷ್ಟಾದ್ವೈತ ದಾಂತಿಗಳ ಮತ. ಇದನ್ನು 'ಪರಿಣಾಮವಾದ' ಎನ್ನುತ್ತಾರೆ. ಅದ್ವೈತ ೇದಾಂತಿಗಳ ಪ್ರಕಾರ ಬ್ರಹ್ಮವು ಜಗದ್ರೂಪದಿಂದ ನಿಜವಾಗಿ ಪರಿಣತವಾಗುವುದಿಲ್ಲ, ಾವು ಹಗ್ಗದಲ್ಲಿ ಅಜ್ಞಾನದಿಂದ ತೋರುವಂತೆ ಜಗತ್ತು ಬ್ರಹ್ಮದಲ್ಲಿ ಅಜ್ಞಾನದಿಂದ ೋರುತ್ತಿದೆ. ಇದನ್ನು 'ವಿವರ್ತವಾದ' ಎನ್ನುತ್ತಾರೆ. ಹಗ್ಗದ ಅಜ್ಞಾನವು ನಾಶ ೊಂದಿದಾಗ, ತೋರಿಕೆಯ ಹಾವು ಕಾಣದಾಗಿ ಹಗ್ಗವೇ ಮತ್ತೆ ಕಂಡುಬರುವಂತೆ, ಹ್ಮದ ಬಗ್ಗೆ ಇರುವ ಅಜ್ಞಾನವು ನಷ್ಟವಾದಾಗ ಜಗತ್ತು ಕಾಣದಾಗಿ ಬ್ರಹ್ಮವೇ

ಗೋಚರಿಸುತ್ತದೆ. ಇದೇ 'ಅಪವಾದ'. ಅಪವಾದವೆಂದರೆ ಅಲ್ಲಗಳೆಯುವುದು
ಜಗತ್ತನ್ನು ಅಲ್ಲಗಳೆದಾಗ ಬ್ರಹ್ಮವು ತಾನಾಗಿಯೇ ಗೋಚರಿಸುವುದು.

**ತಥಾಹಿ–ಏತದ್ ಭೋಗಾಯತನಂ ಚತುರ್ವಿಧ-ಸಕಲ-ಸ್ಥೂಲ ಶರೀರಜಾತಂ ಭೋಗ್ಯರೂಪ-ಅನ್ನಪಾನಾದಿಕಮ್ ಏತದಾಯ ತನಭೂತ-ಭೂರಾದಿ-ಚತುರ್ದಶಭುವನಾನಿ ಏತದಾಯತನಭೂತ ಬ್ರಹ್ಮಾಂಡಂ ಚ ಏತತ್ ಸರ್ವಮ್ ಏತೇಷಾಂ ಕಾರಣರೂಪ ಪಂಚೀಕೃತಭೂತಮಾತ್ರಂ ಭವತಿ ॥೧೩೯॥**

೧೩೯. (ಇದಕ್ಕೆ) ನಿದರ್ಶನ:—ಭೋಗಾಯತನವಾದ[1] ಈ ನಾಲ ವಿಧದ[2] ಎಲ್ಲ ಸ್ಥೂಲಶರೀರಸಮೂಹವೂ, ಭೋಗ್ಯರೂಪದ ಅನ್ನಪಾನಾದಿಗಳ ಇವುಗಳಿಗೆ ಆಧಾರವಾದ ಭೂರಾದಿ[3] ಹದಿನಾಲ್ಕು ಲೋಕಗಳೂ, ಇವುಗಳಿ ಆಧಾರವಾದ ಬ್ರಹ್ಮಾಂಡವೂ—ಇವೆಲ್ಲವೂ ಸಹ, ಇವುಗಳಿಗೆ ಕಾರಣವಾಗಿರು ಪಂಚೀಕೃತಭೂತಗಳು[4] ಮಾತ್ರವೇ ಆಗಿರುತ್ತವೆ.

1 ಭೋಗದ ಅನುಭವಕ್ಕೆ ಅಧಾರವಾದ.

2 ಕಂಡಿಕೆ ೧೦೬–೧೦೯ನ್ನು ನೋಡಿ.

4 ಕಂಡಿಕೆ ೧೦೪ನ್ನು ನೋಡಿ.

4 ಕಂಡಿಕೆ ೯೯ನ್ನು ಮತ್ತು ಟಿಪ್ಪಣಿಯನ್ನು ನೋಡಿ.

**ಏತಾನಿ ಶಬ್ದಾದಿವಿಷಯಸಹಿತಾನಿ ಪಂಚೀಕೃತಾನಿ ಭೂತಾ ಸೂಕ್ಷ್ಮಶರೀರಜಾತಂ ಚ ಏತತ್ಸರ್ವಮ್ ಏತೇಷಾಂ ಕಾರಣರೂ ಅಪಂಚೀಕೃತಭೂತಮಾತ್ರಂ ಭವತಿ ॥೧೪೦॥**

೧೪೦. ಶಬ್ದಾದಿ–ವಿಷಯಸಹಿತವಾದ ಈ ಪಂಚೀಕೃತ ಭೂತಗ ಮತ್ತು ಸೂಕ್ಷ್ಮ ಶರೀರಗಳ ಸಮೂಹವು—ಇದೆಲ್ಲವೂ, ಇವುಗಳ ಕಾರ ವಾಗಿರುವ ಅಪಂಚೀಕೃತಭೂತಗಳು ಮಾತ್ರವೇ ಆಗಿರುತ್ತದೆ.

ಕಂಡಿಕೆ ೧೦೩ನ್ನು ನೋಡಿ.

**ಏತಾನಿ ಸತ್ತ್ವಾದಿ-ಗುಣಸಹಿತಾನಿ ಅಪಂಚೀಕೃತಾನಿ ಉತ್ಪತ್ತಿ-ವ್ಯುತ್ಕ್ರಮೇಣ ಏತತ್ಕಾರಣಭೂತ-ಅಜ್ಞಾನೋಪಹಿತ-ಚೈತನ್ಯ-ಮಾತ್ರಂ ಭವತಿ ॥೧೪೧॥**

೧೪೧. ಸತ್ತ್ವಾದಿ ಗುಣಸಹಿತವಾದ[1] ಈ ಅಪಂಚೀಕೃತಭೂತಗಳು, ಸೃಷ್ಟಿಕ್ರಮಕ್ಕೆ ವಿರುದ್ಧವಾಗಿ,[2] ಇವುಗಳಿಗೆ ಕಾರಣವಾದ, ಅಜ್ಞಾನವನ್ನು ಉಪಾಧಿಯಾಗಿ ಹೊಂದಿರುವ, ಚೈತನ್ಯಮಾತ್ರವೇ ಆಗುತ್ತದೆ.

1 ಸತ್ತ್ವ, ರಜಸ್ಸು, ತಮಸ್ಸು. ಕಂಡಿಕೆ ೩೪ ನ್ನು ನೋಡಿ.

2 ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಭೂಮಿ—ಇದು ಸೃಷ್ಟಿಕ್ರಮ. ಲಯಕ್ರಮವು ಇದಕ್ಕೆ ವಿರುದ್ಧವಾಗಿರುತ್ತದೆ. ಭೂಮಿಯು ನೀರಿನಲ್ಲೂ, ನೀರು ಅಗ್ನಿಯಲ್ಲೂ, ಅಗ್ನಿಯು ವಾಯುವಿನಲ್ಲೂ, ವಾಯುವು ಆಕಾಶದಲ್ಲೂ, ಆಕಾಶವು ಅಜ್ಞಾನ-ಉಪಹಿತ-ಆತ್ಮಚೈತನ್ಯದಲ್ಲೂ ಲಯವಾಗುತ್ತದೆ. ಹೀಗೆ, ಉಳಿಯುವುದು ಅಜ್ಞಾನೋಪಾಧಿ ಸಹಿತವಾದ ಆತ್ಮ ಚೈತನ್ಯವೊಂದೇ.

**ಏತದ್ ಅಜ್ಞಾನಮ್ ಅಜ್ಞಾನ-ಉಪಹಿತ-ಚೈತನ್ಯಂ ಚ ಈಶ್ವರಾದಿಕಮ್ ಏತದಾಧಾರಭೂತ-ಅನುಪಹಿತ-ಚೈತನ್ಯರೂಪಂ ತುರೀಯಂ ಬ್ರಹ್ಮಮಾತ್ರಂ ಭವತಿ ॥೧೪೨॥**

೧೪೨. ಈ ಅಜ್ಞಾನವೂ ಮತ್ತು ಇದನ್ನು ಉಪಾಧಿಯಾಗಿ ಹೊಂದಿರುವ ಈಶ್ವರನೇ ಮೊದಲಾದ[1] ಚೈತನ್ಯವೂ, ಇದಕ್ಕೆ ಆಧಾರಭೂತವಾಗಿರುವ ಉಪಾಧಿ ರಹಿತ ಚೈತನ್ಯವಾದ ತುರೀಯ-ಬ್ರಹ್ಮ-ಮಾತ್ರವೇ[2] ಆಗಿರುತ್ತದೆ.

1 ಕಂಡಿಕೆ ೩೮ ನ್ನು ನೋಡಿ.

2 ತುರೀಯವೆಂದರೆ ನಾಲ್ಕನೆಯದು. ಕಂಡಿಕೆ ೪೯ ರ ಟಿಪ್ಪಣಿಯನ್ನು ನೋಡಿ. ಅಜ್ಞಾನದ ಫಲವಾಗಿ ಹಾವು ಹೇಗೆ ಹಗ್ಗದಿಂದ 'ಉಂಟಾಗಿದೆಯೋ' ಹಾಗೆ ಸೋಪಾಧಿಕ-ಬ್ರಹ್ಮದಿಂದ ಈ ಜಗತ್ತು 'ಉಂಟಾಗಿದೆ' ಎಂಬುದನ್ನು 'ಅಧ್ಯಾರೋಪ'ದಲ್ಲಿ ಹೇಳಿದ್ದಾಯಿತು. ಈಗ 'ಅಪವಾದ'ದಲ್ಲಿ ಅಜ್ಞಾನಕೃತ ಜಗತ್ತನ್ನು ಅಲ್ಲಗಳೆಯುವುದ

ರಿಂದ ಹೇಗೆ ಮೂಲವಸ್ತುವಾದ ಬ್ರಹ್ಮವೇ ಉಳಿದುಕೊಂಡಿದೆ ಎಂಬುದನ್ನು ತೋರ ಲಾಗಿದೆ. ಈ ಎರಡರಿಂದಲೂ ತಿಳಿದುಬರುವುದಿಷ್ಟೇ: ಬ್ರಹ್ಮ ಸತ್ಯಂ ಜಗನ್ಮಿಥ ಜೀವೋ ಬ್ರಹ್ಮೈವ ನಾಪರಃ ।

'ತತ್' ಮತ್ತು 'ತ್ವಮ್' ಪದಗಳ ಸ್ಪಷ್ಟೀಕರಣ

**ಆಭ್ಯಾಮ್ ಅಧ್ಯಾರೋಪ-ಅಪವಾದಾಭ್ಯಾಂ ತತ್-ತ್ವಂ ಪದಾರ್ಥ-ಶೋಧನಮಪಿ ಸಿದ್ಧಂ ಭವತಿ ॥೧೪೩॥**

೧೪೩. ಈ ಅಧ್ಯಾರೋಪ-ಅಪವಾದಗಳಿಂದ 'ತತ್' ಮತ್ತು 'ತ್ವಮ್' ಎಂಬ ಪದಗಳ ಅರ್ಥದ ಸ್ಪಷ್ಟೀಕರಣವೂ ಸಿದ್ಧವಾಗುತ್ತದೆ.

ಛಾಂದೋಗ್ಯೋಪನಿಷತ್ತಿನಲ್ಲಿ ೬.೮.೭ ರಿಂದ ೬.೧೬.೩ ರ ವರೆಗೆ ಒಂಬತ್ತು 'ತತ್ ತ್ವಮ್ ಅಸಿ' (ಅದು ನೀನಾಗಿರುವೆ) ಎಂಬ ವಾಕ್ಯ ಬಂದಿರುತ್ತದೆ. ಇ ನಾಲ್ಕು 'ಮಹಾವಾಕ್ಯ'ಗಳಲ್ಲೊಂದು. ಸಾಮಾನ್ಯವಾಗಿ ಎಲ್ಲ ಅದ್ವೈತಗ್ರಂಥಗಳ ಈ ವಾಕ್ಯದ ಅರ್ಥವೇನೆಂಬುದನ್ನು ಚರ್ಚಿಸಿರುತ್ತದೆ.

**ತಥಾಹಿ—ಅಜ್ಞಾನಾದಿಸಮಷ್ಟಿಃ ಏತದುಪಹಿತಂ ಸರ್ವಜ್ಞ ತ್ವಾದಿ-ವಿಶಿಷ್ಟಂ ಚೈತನ್ಯಮ್ ಏತದನುಪಹಿತಂ ಚ ಏತತ್ರಯಂ ತಪ್ತ ಅಯಃಪಿಂಡವತ್ ಏಕತ್ವೇನ ಅವಭಾಸಮಾನಂ ತತ್-ಪ ವಾಚ್ಯಾರ್ಥೋ ಭವತಿ ॥೧೪೪॥**

೧೪೪. ಉದಾಹರಣೆಗೆ: ಅಜ್ಞಾನಾದಿಗಳ ಸಮೂಹ,[1] ಇದ ಉಪಾಧಿಯಾಗಿ ಹೊಂದಿ ಸರ್ವಜ್ಞತ್ವವೇ ಮೊದಲಾದ ಗುಣಗಳುಳ್ಳ ಚೈತ ಮತ್ತು ಈ ಉಪಾಧಿಯಿಲ್ಲದ (ಚೈತನ್ಯ)—ಈ ಮೂರೂ ಕಾದ ಕಬ್ಬಿಣದ ಗು ನಂತೆ ಒಂದೇ ಆಗಿ ತೋರುತ್ತಿರುವಾಗ 'ತತ್' ('ಅದು') ಪದದ ವಾಚ್ಯಾ ವಾಗುತ್ತದೆ.

1 ಈಶ್ವರನ ಸ್ಥೂಲ ಸೂಕ್ಷ್ಮ ಮತ್ತು ಕಾರಣ ಶರೀರಗಳು.

2 ಸರ್ವನಿಯಾಮಕತ್ವ ಮೊದಲಾದ ಗುಣಗಳುಳ್ಳ ಈಶ್ವರ. ಕಂಡಿಕೆ ಟಿಪ್ಪಣಿಯನ್ನು ನೋಡಿ.

**ಏತದ್-ಉಪಾಧಿ-ಉಪಹಿತ-ಆಧಾರಭೂತಮ್ ಅನುಪಹಿತಂ ಚೈತನ್ಯಂ ತತ್ಪದಲಕ್ಷ್ಯಾರ್ಥೋ ಭವತಿ ||೧೪೫||**

೧೪೫. ಈ ಉಪಾಧಿಗೂ ಅದನ್ನುಳ್ಳ ಚೈತನ್ಯಕ್ಕೂ ಆಧಾರವಾಗಿರುವ ರುಪಾಧಿಕ ಚೈತನ್ಯವು[1] ‘ ತತ್ ’ ಪದದ ಲಕ್ಷ್ಯಾರ್ಥವಾಗುತ್ತದೆ.

1 ಪರಬ್ರಹ್ಮವು.

**ಅಜ್ಞಾನಾದಿವ್ಯಷ್ಟಿಃ ಏತದುಪಹಿತ-ಅಲ್ಪಜ್ಞತ್ವಾದಿವಿಶಿಷ್ಟ-ಚೈತನ್ಯಮ್ ಏತದನುಪಹಿತಂ ಚ ಏತತ್ರಯಂ ತಪ್ತ-ಅಯಃಪಿಂಡ ತ್ ಏಕತ್ವೇನ ಅವಭಾಸಮಾನಂ ‘ ತ್ವಂ ’-ಪದ-ವಾಚ್ಯಾರ್ಥೋ ವತಿ ||೧೪೬||**

೧೪೬. ಅಜ್ಞಾನವೇ ಮೊದಲಾದ ವ್ಯಷ್ಟಿ,[1]ಇದನ್ನು ಉಪಾಧಿಯಾಗಿ ಹೊಂದಿರುವ ಅಲ್ಪಜ್ಞತ್ವ ಮೊದಲಾದ ಗುಣಗಳುಳ್ಳ ಚೈತನ್ಯ[2] ಮತ್ತು ರುಪಾಧಿಕ ಚೈತನ್ಯ[3]—ಈ ಮೂರೂ ಕಾದ ಕಬ್ಬಿಣದ ಗುಂಡಿನಂತೆ ಒಂದೇ ಗಿ ತೋರುತ್ತಿರುವಾಗ ‘ ತ್ವಂ ’ (‘ ನೀನು ’) ಎಂಬ ಪದದ ವಾಚ್ಯಾರ್ಥ ವಾಗುತ್ತದೆ.

1 ಪ್ರತಿ ವ್ಯಕ್ತಿಗೂ ಬೇರೆಬೇರೆಯಾಗಿರುವ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳು.

2 ಪ್ರಾಜ್ಞ ತೈಜಸ ವಿಶ್ವ ಎಂಬ ಜೀವಚೈತನ್ಯ.

3 ಶುದ್ಧ ಆತ್ಮ.

**ಏತದ್-ಉಪಾಧಿ-ಉಪಹಿತ-ಆಧಾರಭೂತಮ್ ಅನುಪಹಿತಂ ಪ್ರತ್ಯಗಾನಂದಂ ತುರೀಯಂ ಚೈತನ್ಯಂ ‘ ತ್ವಂ ’-ಪದಲಕ್ಷ್ಯಾರ್ಥೋ ಭವತಿ ||೧೪೭||**

೧೪೭. ಈ ಉಪಾಧಿಗೂ ಅದನ್ನುಳ್ಳ ಚೈತನ್ಯಕ್ಕೂ ಆಧಾರವಾಗಿರುವ ರುಪಾಧಿಕವೂ ಒಳಗಿರುವುದೂ ಆನಂದಸ್ವರೂಪವೂ ತುರೀಯವೂ ಆದ ಚೈತನ್ಯವು ‘ ತ್ವಂ ’ (‘ ನೀನು ’) ಎಂಬ ಪದದ ಲಕ್ಷ್ಯಾರ್ಥವಾಗುತ್ತದೆ.

## ‘ತತ್ತ್ವಮಸಿ’ ಮಹಾವಾಕ್ಯದ ಅರ್ಥ

**ಅಥ ಮಹಾವಾಕ್ಯಾರ್ಥೋ ವರ್ಣ್ಯತೇ । ಇದಂ ತತ್ತ್ವಮಸಿ ವಾಕ್ಯಂ ಸಂಬಂಧತ್ರಯೇಣ ಅಖಂಡಾರ್ಥಬೋಧಕಂ ಭವತಿ ॥೧೪**

೧೪೮. ಈಗ ಮಹಾವಾಕ್ಯದ ಅರ್ಥವು ವರ್ಣಿಸಲ್ಪಡುತ್ತದೆ. ಈ ‘ತ ತ್ವಮ್ ಅಸಿ’ (‘ಅದು ನೀನಾಗಿರುವೆ’) ಎಂಬ ವಾಕ್ಯವು ಮೂರು ವಿ ಸಂಬಂಧಗಳ ಮೂಲಕ[1] ಅಖಂಡವಾದ ಅರ್ಥವನ್ನು[2] ತಿಳಿಸಿಕೊಡುತ್ತದೆ.

1 ಮುಂದಿನ ಕಂಡಿಕೆಯನ್ನು ನೋಡಿ.

2 ನಿರ್ವಿಶೇಷ ಬ್ರಹ್ಮವಸ್ತುವನ್ನು.

ವಿವಿಧ ಪದಗಳು ಪರಸ್ಪರ ಸಂಬಂಧವನ್ನು ಹೊಂದಿ ಏಕಾರ್ಥವನ್ನು ಕೊ ವಂತೆ ಪ್ರಯೋಗಿಸಲ್ಪಟ್ಟಾಗ ಅದು ವಾಕ್ಯವೆನಿಸುತ್ತದೆ. ಪದಗಳ ಸಂಬಂಧವ ‘ಸಂಸರ್ಗ’ ವೆಂದು ಕರೆಯುತ್ತಾರೆ. ವಾಕ್ಯವು ಒಟ್ಟಿನಲ್ಲಿ ಏಕಾರ್ಥವನ್ನು ಸೂಚಿ ತ್ತಿದ್ದರೂ ಪದಗಳು ತಮ್ಮ ಪ್ರತ್ಯೇಕಾರ್ಥವನ್ನೂ ಸೂಚಿಸುತ್ತಿರಬ ವ್ಯಾಕರಣವು ಇದನ್ನು ವಿಭಿನ್ನ ವಿಭಕ್ತಿ ಪ್ರಯೋಗಗಳ ಮೂಲಕ ಸೂಚಿಸುತ್ತದೆ. ವಿಧದ ವಾಕ್ಯಾರ್ಥವನ್ನು ಸಂಸೃಷ್ಟಾರ್ಥ, ಭೇದಸಂಸರ್ಗ ಎಂದು ಕರೆಯುತ್ತಾ ಉದಾಹರಣೆಗೆ: **ದಂಡೇನ ಗಾಂ ನಯ** ‘ಕೋಲಿನಿಂದ (ಹೊಡೆದು) ಹಸುವ ಕರೆದುಕೊಂಡು ಹೋಗು.’ ಈ ವಾಕ್ಯದಲ್ಲಿ ಮೂರು ಪದಗಳೂ ಒಂದೇ ಅರ್ಥವ ಸೂಚಿಸುತ್ತಿದ್ದರೂ ಜೊತೆ ಜೊತೆಯಲ್ಲಿಯೇ ಕೋಲಿನ, ಹಸುವಿನ, ಹೊಡೆಯು ಮತ್ತು ಕರೆದೊಯ್ಯುವ ಕ್ರಿಯೆಯ ಅರ್ಥಗಳೂ ಭಾಸವಾಗುತ್ತಲೇ ಇರುತ್ತ ಆದುದರಿಂದಲೇ ದಂಡೇನ ಎಂಬಲ್ಲಿ ತೃತೀಯಾವಿಭಕ್ತಿಯನ್ನೂ ಗಾಂ ಎಂ ದ್ವಿತೀಯಾವಿಭಕ್ತಿಯನ್ನೂ ಪ್ರಯೋಗಿಸಿದೆ.

ಈಗ ಮತ್ತೊಂದು ವಾಕ್ಯವನ್ನು ನೋಡಿ: **ಏತತ್ ನೀಲಮ್ ಉತ್ಪಲ** ‘ಇದು ನೀಲಿಯ ಕಮಲ’. ಇಲ್ಲಿ ನೀಲಮ್ ಎಂಬ ಪದವು ಬಿಳಿ ಕೆಂಪು ಮೊದಲ ಬಣ್ಣಗಳಿಗಿಂತ ಭಿನ್ನವಾದ ನೀಲಿಯ ಬಣ್ಣವನ್ನೂ, ಉತ್ಪಲಮ್ ಎಂಬ ಪದವು ಮಡಕೆ ಮೊದಲಾದ ವಸ್ತುಗಳಿಗಿಂತ ಭಿನ್ನವಾದ ಕಮಲವೆಂಬ ವಸ್ತುವನ್ನೂ ಸೂಚ ತ್ತಿದ್ದರೂ ಇಲ್ಲಿ ಅವೆರಡೂ ಸೇರಿ ನೀಲಕಮಲವೆಂಬ ಒಂದೇ ವಸ್ತುವನ್ನು ನಿರ್ದೇಶಿ ತ್ತಿವೆ. ಆದುದರಿಂದ ಇಲ್ಲಿನ ವಾಕ್ಯಾರ್ಥವು ಅಸಂಸೃಷ್ಟಾರ್ಥ, ಅಖಂಡಾರ್ಥ ಅಥ

ಭೇದ ಸಂಸರ್ಗ. ಇದನ್ನು ವ್ಯಾಕರಣವು ಸಮಾನವಿಭಕ್ತಿ ಪ್ರಯೋಗದ ಮೂಲಕ ತೋರಿಸಿದೆ. ತತ್ ತ್ವಮ್ ಅಸಿ ಎಂಬ ವಾಕ್ಯವು ಈ ಎರಡನೆಯ ಗುಂಪಿಗೆ ಸೇರಿದ್ದು. ಿಚ್ಚಿನ ವಿವರಣೆಯನ್ನು ಮುಂದಿನ ಕಂಡಿಕೆಗಳಲ್ಲಿ ಕೊಟ್ಟಿದೆ.

**ಸಂಬಂಧತ್ರಯಂ ನಾಮ ಪದಯೋಃ ಸಾಮಾನಾಧಿಕರಣ್ಯಂ ಪದ-ಅರ್ಥಯೋಃ ವಿಶೇಷಣ-ವಿಶೇಷ್ಯ-ಭಾವಃ ಪ್ರತ್ಯಗಾತ್ಮ-ಲಕ್ಷಣಯೋಃ ಲಕ್ಷ್ಯ-ಲಕ್ಷಣ-ಭಾವಶ್ಚೇತಿ ॥೧೪೯॥**

೧೪೯. ಮೂರು ವಿಧದ ಸಂಬಂಧಗಳಾವುವೆಂದರೆ–ಎರಡು ಪದಗಳಿಗಿರುವ ಸಾಮಾನಾಧಿಕರಣ್ಯ[1], ಪದ-ಅರ್ಥಗಳ ನಡುವೆಯಿರುವ ವಿಶೇಷಣ-ವಿಶೇಷ್ಯ-ಭಾವ[2] ಮತ್ತು ಪ್ರತ್ಯಗಾತ್ಮದ ಮತ್ತು (‘ತತ್ತ್ವಮಸಿ’ ವಾಕ್ಯದ) ಲಕ್ಷಣಾರ್ಥದ[3] ಮಧ್ಯೆಯಿರುವ ಲಕ್ಷ್ಯ-ಲಕ್ಷಣ-ಭಾವ.

1 ಸಮಾನವಾದ ಅಧಿಕರಣವನ್ನು ಅಥವಾ ಆಶ್ರಯವನ್ನು ಹೊಂದಿರುವುದು. ಮೇಲೆ ಹೇಳಿದ ಉದಾಹರಣೆಯಲ್ಲಿ ನೀಲಿಯ ಬಣ್ಣಕ್ಕೂ ಕಮಲವೆಂಬ ವಸ್ತುವಿಗೂ ನೀಲಕಮಲವೆಂಬ ಒಂದೇ ವಸ್ತುವು ಆಶ್ರಯವಾಗಿರುವುದರಿಂದ ನೀಲತ್ವಕ್ಕೂ ಕಮಲತ್ವಕ್ಕೂ ಸಾಮಾನಾಧಿಕರಣ್ಯವಿರುತ್ತದೆ.

2 ಗುಣವನ್ನು ಹೇಳುವ ಪದಕ್ಕೂ ಗುಣವು ಯಾವ ವಸ್ತುವನ್ನು ಕುರಿತದ್ದೋ ಆ ವಸ್ತುವನ್ನು ಹೇಳುವ ಪದಕ್ಕೂ ಇರುವ ಸಂಬಂಧ.

3 ಕಂಡಿಕೆ ೫೦ ರ ಟಿಪ್ಪಣಿಯನ್ನು ನೋಡಿ.

**ತದುಕ್ತಮ್—**

ಸಾಮಾನಾಧಿಕರಣ್ಯಂ ಚ ವಿಶೇಷಣವಿಶೇಷ್ಯತಾ ।
ಲಕ್ಷ್ಯಲಕ್ಷಣಸಂಬಂಧಃ ಪದಾರ್ಥಪ್ರತ್ಯಗಾತ್ಮನಾಮ್ ॥
ಇತಿ ॥೧೫೦॥

೧೫೦. ಅದನ್ನು ಹೀಗೆ[1] ಹೇಳಿರುತ್ತದೆ: ‘ಪದಾರ್ಥ[2]-ಪ್ರತ್ಯಗಾತ್ಮರ ನಡುವೆ ಸಾಮಾನಾಧಿಕರಣ್ಯ, ವಿಶೇಷಣ-ವಿಶೇಷ್ಯ-ಭಾವ (ಮತ್ತು) ಲಕ್ಷ್ಯ-ಲಕ್ಷಣ-ಸಂಬಂಧ (ಇರುತ್ತವೆ).’

1 ಇದನ್ನು ಸುರೇಶ್ವರಾಚಾರ್ಯರ ನೈಷ್ಕರ್ಮ್ಯಸಿದ್ಧಿಯಿಂದ (೩.೩) ಉದ್ಧರಿ
ಲಾಗಿದೆ.

2 'ತತ್' ಪದದ ಮತ್ತು 'ತ್ವಂ' ಪದದ ಅರ್ಥ.

**ಸಾಮಾನಾಧಿಕರಣ್ಯಸಂಬಂಧಃ ತಾವದ್ ಯಥಾ :— 'ಸೋಽಯಂ ದೇವದತ್ತಃ' ಇತ್ಯಸ್ಮಿನ್ ವಾಕ್ಯೇ ತತ್ಕಾಲವಿಶಿಷ್ಟ ದೇವದತ್ತವಾಚಕ-ಸಶಬ್ದಸ್ಯ ಏತತ್ಕಾಲವಿಶಿಷ್ಟ-ದೇವದತ್ತವಾಚಕ ಅಯಂಶಬ್ದಸ್ಯ ಚ ಏಕಸ್ಮಿನ್ ಪಿಂಡೇ ತಾತ್ಪರ್ಯಸಂಬಂಧಃ। ತಥಾ ಚ 'ತತ್ತ್ವಮಸಿ' ಇತಿ ವಾಕ್ಯೇ ಅಪಿ ಪರೋಕ್ಷತ್ವಾದಿ-ವಿಶಿಷ್ಟ-ಚೈತನ ವಾಚಕ-ತತ್ಪದಸ್ಯ ಅಪರೋಕ್ಷತ್ವಾದಿವಿಶಿಷ್ಟ-ಚೈತನ್ಯವಾಚಕ-ತ್ವಂ ಪದಸ್ಯ ಚ ಏಕಸ್ಮಿನ್ ಚೈತನ್ಯೇ ತಾತ್ಪರ್ಯಸಂಬಂಧಃ ॥೧೫೧॥**

೧೫೧. ಮೊದಲನೆಯದಾಗಿ, ಸಾಮಾನಾಧಿಕರಣ್ಯ ಸಂಬಂಧವು ಹೇ ರುತ್ತದೆಂದರೆ :—'ಅವನೇ ಈ ದೇವದತ್ತನು' ಎಂಬ ವಾಕ್ಯದಲ್ಲಿ 'ಆ' ಕಾ ವೆಂಬ ವಿಶೇಷಣವನ್ನು ಹೊಂದಿರುವ ದೇವದತ್ತನನ್ನು ಹೇಳುವ 'ಅವನು' ಎಂ ಶಬ್ದಕ್ಕೂ, 'ಈ' ಕಾಲವೆಂಬ ವಿಶೇಷಣವನ್ನು ಹೊಂದಿರುವ ದೇವದತ್ತನನ ಹೇಳುವ 'ಇವನು' (ಅಥವಾ 'ಈ') ಎಂಬ ಶಬ್ದಕ್ಕೂ ಒಂದೇ ವ್ಯಕ್ತಿಯ ತಾತ್ಪರ್ಯವಿರುವ ಸಂಬಂಧ. ಹೀಗಿರಲಾಗಿ, 'ತತ್ (ಅದು) ತ್ವಮ (ನೀನು) ಅಸಿ (ಆಗಿರುವೆ)' ಎಂಬ ವಾಕ್ಯದಲ್ಲಿ ಕೂಡ, ಪರೋಕ್ಷತ್ವವ ಮೊದಲಾದ ವಿಶೇಷಣಗಳನ್ನುಳ್ಳ ಚೈತನ್ಯವನ್ನು ಹೇಳುತ್ತಿರುವ 'ತತ್ ಪದಕ್ಕೂ, ಅಪರೋಕ್ಷತ್ವವೇ ಮೊದಲಾದ ವಿಶೇಷಣಗಳನ್ನುಳ್ಳ 'ತ್ವಂ ಪದಕ್ಕೂ, ಒಂದೇ ಚೈತನ್ಯವಸ್ತುವಿನಲ್ಲಿ ತಾತ್ಪರ್ಯದಿಂದ ಸಂಬಂಧವಿರುತ್ತದೆ.

ನೆನ್ನೆ ಪೇಟೆಯಲ್ಲಿ ಕಂಡಿದ್ದ ದೇವದತ್ತನು ಇಂದು ನಮ್ಮ ಮನೆಯ ಮುಂ ಬಂದು ನಿಂತಾಗ 'ಅವನೇ ಈ ದೇವದತ್ತನು' ಎಂದು ಗುರುತಿಸುತ್ತೇವೆ. ಇ 'ಅವನು' ಎಂಬ ಶಬ್ದವು ಬೇರೊಂದು ಕಾಲಕ್ಕೆ ಬೇರೊಂದು ಸ್ಥಳಕ್ಕೆ ಸಂಬಂಧಿಸಿದು 'ಇವನು' ಅಥವಾ 'ಈ' ಎಂಬುದು ಈಗಿನ ಕಾಲಕ್ಕೆ ಈ ಸ್ಥಳಕ್ಕೆ ಸಂಬಂಧಿಸಿದು ಹಾಗಿದ್ದರೂ ವ್ಯಕ್ತಿ ಮಾತ್ರ ಒಬ್ಬನೇ. ಇದನ್ನು ಸೂಚಿಸುವುದಕ್ಕಾಗಿಯೇ ಸ (ಅವನು) ಮತ್ತು ಅಯಂ (ಇವನು) ಎಂಬ ಎರಡು ಪದಗಳನ್ನೂ ಒಂದೇ ವಿಭಕ್ತಿಯ

ಇಲ್ಲಿ ಪ್ರಥಮಾವಿಭಕ್ತಿ) ಪ್ರಯೋಗಿಸಲಾಗಿದೆ. ಇದರಿಂದಲೇ ಅವೆರಡಕ್ಕೂ ಸಮಾನವಾದ ಅಧಿಕರಣವಿದೆಯೆಂಬುದು ತಿಳಿದುಬರುತ್ತದೆ.

ಉದ್ದಾಲಕ ಆರುಣಿಯು ತನ್ನ ಮಗನಾದ ಶ್ವೇತಕೇತುವಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸುವಾಗ ಆ ಬ್ರಹ್ಮವನ್ನು ಸದ್-ವಸ್ತುವೆಂದು ಕರೆದು ತತ್ ತ್ವಮ್ ಅಸಿ ಎಂದು ಘೋಷಿಸುತ್ತಾನೆ (ಛಾ.ಉ. ೬.೮.೭ ರಿಂದ). ಇಲ್ಲಿ ತತ್ ('ಅದು') ಶಬ್ದವು ನಮಗೆ ನೇರವಾಗಿ ಗೋಚರವಾಗದ (ಪರೋಕ್ಷವಾದ), ಕೇವಲ ಅನುಮಾನ, ಶ್ರುತಿ— ಇವುಗಳಿಂದ ಮಾತ್ರ ತಿಳಿದು ಬರುವ, ಸರ್ವಜ್ಞತ್ವ ಸರ್ವನಿಯಂತೃತ್ವ ಮೊದಲಾದ ಗುಣಗಳನ್ನುಳ್ಳ ಈಶ್ವರನನ್ನು ಸೂಚಿಸುತ್ತದೆ. ತ್ವಮ್ ('ನೀನು') ಎಂಬ ಶಬ್ದವು ನೇರವಾಗಿ ಅನುಭವಕ್ಕೆ ಬರುತ್ತಿರುವ (ಅಪರೋಕ್ಷವಾದ), ಆದರೆ ಅಲ್ಪಶಕ್ತಿತ್ವ ಮೊದಲಾದ ಗುಣಗಳನ್ನುಳ್ಳ ಜೀವನನ್ನು ಸೂಚಿಸುತ್ತದೆ. ಎರಡು ಶಬ್ದಗಳೂ ಸಮಾನ ವಿಭಕ್ತಿಯನ್ನು ಹೊಂದಿರುವುದರಿಂದ ಒಂದೇ ವ್ಯಕ್ತಿಯಲ್ಲಿ ತಾತ್ಪರ್ಯವನ್ನು ಹೊಂದಿರಬೇಕಷ್ಟೆ. ಎರಡರಲ್ಲೂ ಉಪಾಧಿಗಳನ್ನು ಬಿಟ್ಟು ಚೈತನ್ಯಾಂಶವನ್ನು ಗ್ರಹಿಸಿದರೆ ಮಾತ್ರ ಇದು ಸಾಧ್ಯ.

**ವಿಶೇಷಣ-ವಿಶೇಷ್ಯ-ಭಾವ-ಸಂಬಂಧಸ್ತು ಯಥಾ ತತ್ರೈವ ವಾಕ್ಯೇ ಸ-ಶಬ್ದಾರ್ಥ-ತತ್ಕಾಲವಿಶಿಷ್ಟ-ದೇವದತ್ತಸ್ಯ ಅಯಂ-ಶಬ್ದಾರ್ಥ-ಏತತ್ಕಾಲವಿಶಿಷ್ಟ-ದೇವದತ್ತಸ್ಯ ಚ ಅನ್ಯೋನ್ಯ-ಭೇದ-ವ್ಯಾವರ್ತಕತಯಾ ವಿಶೇಷಣ-ವಿಶೇಷ-ಭವಃ। ತಥಾ ಅತ್ರಾಪಿ ವಾಕ್ಯೇ ತತ್-ಪದಾರ್ಥ-ಪರೋಕ್ಷತ್ವಾದಿವಿಶಿಷ್ಟ-ಚೈತನ್ಯಸ್ಯ ತ್ವಂ-ಪದಾರ್ಥ-ಅಪರೋಕ್ಷತ್ವಾದಿವಿಶಿಷ್ಟ-ಚೈತನ್ಯಸ್ಯ ಚ ಅನ್ಯೋನ್ಯಭೇದ-ವ್ಯಾವರ್ತಕತಯಾ ವಿಶೇಷಣ-ವಿಶೇಷ್ಯ-ಭಾವಃ ॥೧೫೨॥**

೧೫೨. ವಿಶೇಷಣ-ವಿಶೇಷ್ಯ-ಭಾವ ಸಂಬಂಧವು ಹೇಗೆಂದರೆ: ಅದೇ ವಾಕ್ಯದಲ್ಲಿ 'ಅವನು' ಎಂಬ ಶಬ್ದದ ಅರ್ಥವಾದ, 'ಆ' ಕಾಲಕ್ಕೆ ಸಂಬಂಧಿಸಿದ ದೇವದತ್ತನಿಗೂ ಮತ್ತು 'ಇವನು' (ಅಥವಾ 'ಈ') ಎಂಬ ಶಬ್ದದ ಅರ್ಥವಾದ, 'ಈ' ಕಾಲಕ್ಕೆ ಸಂಬಂಧಿಸಿದ ದೇವದತ್ತನಿಗೂ ಪರಸ್ಪರ ಭೇದವನ್ನು ನಿರಾಕರಿಸುವುದರ ಮೂಲಕ ಒದಗುವ ವಿಶೇಷಣ-ವಿಶೇಷ್ಯ-ಭಾವ. ಹಾಗೆಯೇ ಈ ವಾಕ್ಯದಲ್ಲಿ ಕೂಡ 'ಅದು' ('ತತ್') ಎಂಬ ಪದದ ಅರ್ಥವಾದ, ಪರೋಕ್ಷತ್ವವೇ ಮೊದ

ಲಾದ ವಿಶೇಷಣಗಳನ್ನುಳ್ಳ, ಚೈತನ್ಯಕ್ಕೂ ಮತ್ತು 'ನೀನು' ('ತ್ವಂ') ಎಂ
ಪದದ ಅರ್ಥವಾದ, ಅಪರೋಕ್ಷತ್ವವೇ ಮೊದಲಾದ ವಿಶೇಷಣಗಳನ್ನು
ಚೈತನ್ಯಕ್ಕೂ, ಪರಸ್ಪರ ಭೇದವನ್ನು ನಿರಾಕರಿಸುವುದರ ಮೂಲಕ ಒದಗು
ವಿಶೇಷಣ–ವಿಶೇಷ್ಯ–ಭಾವ.

**ಲಕ್ಷ್ಯ-ಲಕ್ಷಣ-ಸಂಬಂಧಸ್ತು ಯಥಾ ತತ್ರೈವ ಸ-ಶಬ್ದ-ಅಯಂ ಶಬ್ದಯೋಃ ತದರ್ಥಯೋರ್ವಾ ವಿರುದ್ಧ-ತತ್ಕಾಲ-ಏತತ್ಕಾಲ ವಿಶಿಷ್ಟತ್ವ-ಪರಿತ್ಯಾಗೇನ ಅವಿರುದ್ಧ-ದೇವದತ್ತೇನ ಸಹ ಲಕ್ಷ್ಯ-ಲಕ್ಷಣ ಸಂಬಂಧಃ । ತಥಾ ಅತ್ರಾಪಿ ವಾಕ್ಯೇ ತತ್–ತ್ವಂ–ಪದಯೋಃ ತದರ್ಥ ಯೋರ್ವಾ ವಿರುದ್ಧ – ಪರೋಕ್ಷತ್ವ – ಅಪರೋಕ್ಷತ್ವಾದಿ – ವಿಶಿಷ್ಟ ಪರಿತ್ಯಾಗೇನ ಅವಿರುದ್ಧ-ಚೈತನ್ಯೇನ ಸಹ ಲಕ್ಷ್ಯ–ಲಕ್ಷಣ–ಭಾವ ||೧೫೩||**

೧೫೩. ಲಕ್ಷ್ಯ–ಲಕ್ಷಣ–ಸಂಬಂಧವು ಹೇಗೆಂದರೆ: ಅಲ್ಲಿಯೇ 'ಅವನು' (ಮತ್ತು) 'ಇವನು' ಎಂಬ ಶಬ್ದಗಳಲ್ಲಿರುವ ಅಥವಾ ಅವೆರಡರ ಅರ್ಥಗಳಲ್ಲಿರು (ಪರಸ್ಪರ) ವಿರುದ್ಧವಾದ 'ಆ' ಕಾಲ (ಮತ್ತು) 'ಈ' ಕಾಲ ಎಂಬ ವಿಶೇಷಭಾ ವನ್ನು ಬಿಡುವುದರ ಮೂಲಕ, ವಿರುದ್ಧವಲ್ಲದ ದೇವದತ್ತನೊಡನೆ (ಉಂಟಾಗು ಸಂಬಂಧವು) ಲಕ್ಷ್ಯ–ಲಕ್ಷಣ–ಸಂಬಂಧ. ಹಾಗೆಯೇ ಈ ವಾಕ್ಯದಲ್ಲಿ ಕೂ 'ಅದು' (ಮತ್ತು) 'ನೀನು' ಎಂಬ ಶಬ್ದಗಳಲ್ಲಿರುವ ಅಥವಾ ಅವೆರಡರ ಅರ ಗಳಲ್ಲಿರುವ (ಪರಸ್ಪರ) ವಿರುದ್ಧವಾದ ಪರೋಕ್ಷತ್ವ ಅಪರೋಕ್ಷತ್ವ ಮೊದಲಾ ವಿಶೇಷಭಾವವನ್ನು ಬಿಡುವುದರ ಮೂಲಕ ವಿರುದ್ಧವಲ್ಲದ ಚೈತನ್ಯದೊಡ (ಉಂಟಾಗುವ ಸಂಬಂಧವು) ಲಕ್ಷ್ಯ–ಲಕ್ಷಣ ಸಂಬಂಧ.

ಪದಗಳಿಗೆ ವಾಚ್ಯಾರ್ಥ, ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥ ಎಂದು ಮೂ ವಿಧದ ಅರ್ಥಗಳಿರುತ್ತವೆಯೆಂದು ಅಂಡಿಕೆ ೫೦ ರ ಟಿಪ್ಪಣಿಯಲ್ಲಿ ಹೇಳಿದ್ದಾಯಿ ಇದರಲ್ಲಿ ಲಕ್ಷ್ಯಾರ್ಥವನ್ನು ಈಗ ಮತ್ತಷ್ಟು ವಿವರಿಸಬೇಕಾಗಿದೆ.

ಲಕ್ಷ್ಯಾರ್ಥವನ್ನು ಸೂಚಿಸುವ ಲಕ್ಷಣೆಯು ಕೇವಲ-ಲಕ್ಷಣಾ ಮತ್ತು ಲಕ್ಷಿ ಲಕ್ಷಣಾ ಎಂದು ಎರಡು ವಿಧ. '**ಗಂಗಾಯಾಂ ಘೋಷಃ**' (ಗಂಗೆಯಲ್ಲಿ ಗೊಲ್ಲರ ಹ ಯಿದೆ) ಎಂಬಲ್ಲಿ, ಗಂಗಾಪ್ರವಾಹದಲ್ಲಿ ಗೊಲ್ಲರ ಹಳ್ಳಿಯಿರಲು ಸಾಧ್ಯವಿಲ್ಲದ್ದರಿಂದ

ಪ್ರವಾಹಕ್ಕೆ ನೇರವಾಗಿ ಸಂಬಂಧವನ್ನು ಹೊಂದಿರುವ ತೀರದಲ್ಲಿ ಇದೆಯೆಂದು ಅರ್ಥ ಮಾಡಬೇಕು. ಇದು ಕೇವಲ-ಲಕ್ಷಣೆಯಿಂದ ಒದಗುವ ಅರ್ಥ. 'ದ್ವಿರೇಫ' ಪದಕ್ಕೆ ಎರಡು ರಕಾರಗಳುಳ್ಳ ಪದ ಎಂಬುದು ಸಾಕ್ಷಾತ್ತಾದ ಅರ್ಥ. ಉದಾ: ಭ್ರಮರ, ರಾತ್ರಿ, ರಂಧ್ರ ಇತ್ಯಾದಿ. ಆದರೆ ರೂಢಿಯಲ್ಲಿ ಅದು ದುಂಬಿಯನ್ನೇ ಸೂಚಿಸುತ್ತದೆ. ಭ್ರಮರಶಬ್ದವು ದುಂಬಿಯನ್ನೂ, ದ್ವಿರೇಫ-ಶಬ್ದವು ಭ್ರಮರ-ಪದವನ್ನೂ ಸೂಚಿಸುವುದರಿಂದ, ಲಕ್ಷಿತ-ಲಕ್ಷಣೆಯಿಂದ ದ್ವಿರೇಫವೆಂದರೆ ದುಂಬಿಯೆಂದು ಅರ್ಥವಾಗುತ್ತದೆ. ಲಕ್ಷಿತ-ಲಕ್ಷಣೆಯಲ್ಲಿ ಲಕ್ಷ್ಯಾರ್ಥವನ್ನು ಸೂಚಿಸುವ ಲಕ್ಷಣೆಯನ್ನು ಮತ್ತೊಂದು ಲಕ್ಷಣವು ಸೂಚಿಸುತ್ತದೆ.

ಇನ್ನೊಂದು ಪ್ರಕಾರದಿಂದ ಲಕ್ಷಣೆಯು ಮೂರು ವಿಧ: (೧) ಜಹಲ್ಲಕ್ಷಣೆ; (೨) ಅಜಹಲ್ಲಕ್ಷಣೆ; ಮತ್ತು (೩) ಜಹದ್-ಅಜಹಲ್ಲಕ್ಷಣೆ.

ವಾಚ್ಯಾರ್ಥವನ್ನು ಪೂರ ಬಿಟ್ಟು, ಲಕ್ಷ್ಯಾರ್ಥವನ್ನು ಮಾತ್ರ ಗ್ರಹಿಸಿದಾಗ ಅದು ಜಹಲ್ಲಕ್ಷಣೆಯೆನಿಸುತ್ತದೆ. (ಜಹತ್ =ಬಿಡುವುದು). ಮೇಲೆ ಹೇಳಿದ 'ಗಂಗೆಯಲ್ಲಿ ಗೊಲ್ಲರಹಳ್ಳಿಯಿದೆ' ಎಂಬ ವಾಕ್ಯದಲ್ಲಿ 'ಗಂಗೆಯಲ್ಲಿ' ಎಂಬ ವಾಚ್ಯಾರ್ಥವನ್ನು ಪೂರ್ತಿಯಾಗಿ ಕೈಬಿಟ್ಟು 'ಗಂಗೆಯ ದಡದಮೇಲೆ' ಎಂಬರ್ಥವನ್ನು ಗ್ರಹಿಸಿದೆ.

'**ಶೋಣಃ ಧಾವತಿ**' (ಕೆಂಪು ಬಣ್ಣ ಓಡುತ್ತಿದೆ) ಎಂಬ ವಾಕ್ಯದಲ್ಲಿ ಕೆಂಪು ಬಣ್ಣವು ಓಡಲು ಸಾಧ್ಯವಿಲ್ಲದ್ದರಿಂದ ಕೆಂಪುಬಣ್ಣ ಹೊಂದಿರುವ ಕುದುರೆಯಂಥ ಪ್ರಾಣಿ ಓಡುತ್ತಿದೆ ಎಂದು ಅರ್ಥಮಾಡಬೇಕು. ಇಲ್ಲಿ ಮೂಲ ವಾಕ್ಯದಲ್ಲಿರುವ 'ಕೆಂಪು' ಎನ್ನುವುದನ್ನು ಬಿಡದೆ (ಅಜಹತ್=ಬಿಡದೆ) ಅಪರ ಅರ್ಥವನ್ನು ವಿಸ್ತರಿಸಿದೆ. ಆದ್ದರಿಂದ ಈ ಲಕ್ಷಣೆಯನ್ನು ಅಜಹಲ್ಲಕ್ಷಣೆಯೆಂದು ಕರೆದಿದೆ.

'**ಸೋಽಯಂ ದೇವದತ್ತಃ**' (ಅವನೇ ಈ ದೇವದತ್ತನು) ಎಂಬ ವಾಕ್ಯದಲ್ಲಿ ಕಾಲ-ದೇಶಗಳು ಬೇರೆಯಾದರೂ ವ್ಯಕ್ತಿಯೊಬ್ಬನೇ ಆದುದರಿಂದ 'ಅ' ಮತ್ತು 'ಈ' ಎಂಬುದಕ್ಕೆ ಸಂಬಂಧಿಸಿದ ದೇಶ-ಕಾಲಗಳನ್ನು ಬಿಟ್ಟು (ಜಹತ್), ದೇವದತ್ತ ಎಂಬ ವ್ಯಕ್ತಿಯ ಅಂಶವನ್ನು ಬಿಡದೆ (ಅಜಹತ್) ಅರ್ಥವನ್ನು ಗ್ರಹಿಸಿರುತ್ತದೆ. ಇದು ಜಹದ್-ಅಜಹದ್-ಲಕ್ಷಣೆ.

'**ತತ್ ತ್ವಮ್ ಅಸಿ**' ಎಂಬ ವಾಕ್ಯವನ್ನು ಈ ಲಕ್ಷಣೆಗನುಸಾರವಾಗಿ ವ್ಯಾಖ್ಯಾನ ಮಾಡಬೇಕು.

**ಇಯಮೇವ 'ಭಾಗಲಕ್ಷಣಾ' ಇತಿ ಉಚ್ಯತೇ ॥೧೫೪॥**

೧೫೪. ಇದೇ 'ಭಾಗಲಕ್ಷಣಾ' ಎಂದು ಹೇಳಲ್ಪಡುತ್ತದೆ.

ವಾಚ್ಯಾರ್ಥದಲ್ಲಿ ಒಂದು ಭಾಗವನ್ನು ಪರಿಗ್ರಹಿಸಿ ಮತ್ತೊಂದನ್ನು ಬಿಡುವುದ ರಿಂದ ಇದನ್ನು ಭಾಗಲಕ್ಷಣಾ ಎಂದು ಕರೆದಿದೆ. ಇದನ್ನು ಭಾಗತ್ಯಾಗಲಕ್ಷಣಾ ಎಂದೂ ಹೇಳುವುದುಂಟು.

**ಅಸ್ಮಿನ್ ವಾಕ್ಯೇ 'ನೀಲಮ್ ಉತ್ಪಲಮ್' ಇತಿ ವಾಕ್ಯವದ್ ವಾಕ್ಯಾರ್ಥೋ ನ ಸಂಗಚ್ಛತೇ ॥೧೫೫॥**

೧೫೫. ಈ[1] ವಾಕ್ಯದಲ್ಲಿ, 'ನೀಲಿಯ ಕಮಲ' ಎಂಬ ವಾಕ್ಯದಂತೆ ವಾಕ್ಯಾರ್ಥವು[2] ಹೊಂದುವುದಿಲ್ಲ.

1 'ತತ್ ತ್ವಮ್ ಅಸಿ' ಎಂಬ ವಾಕ್ಯದಲ್ಲಿ.

2 'ನೀಲಿಯ ಕಮಲ' ಎಂಬ ವಾಕ್ಯದಲ್ಲಿ 'ನೀಲಿಯ' ಎಂಬ ವಿಶೇಷಣವು 'ಕಮಲ' ಎಂಬ ವಿಶೇಷ್ಯವೂ ಒಂದೇ ವಸ್ತುವನ್ನು ಸೂಚಿಸುತ್ತ ಏಕಾರ್ಥವನ್ನು ಹೊಂದಿವೆ. ಇಲ್ಲಿ ಹಾಗಾಗುವುದಿಲ್ಲ ಎಂದರ್ಥ. ಇದನ್ನು ಮುಂದಿನ ಕಂಡಿಕೆಯ ವಿವರಿಸಿದೆ.

**ತತ್ರ ತು ನೀಲಪದಾರ್ಥ-ನೀಲಗುಣಸ್ಯ ಉತ್ಪಲಪದಾರ್ಥ ಉತ್ಪಲದ್ರವ್ಯಸ್ಯ ಚ ಶೌಕ್ಲ್ಯ-ಪಟಾದಿ-ಭೇದವ್ಯಾವರ್ತಕತಯಾ ಅನ್ಯೋನ್ಯ-ವಿಶೇಷಣ-ವಿಶೇಷ್ಯರೂಪ-ಸಂಸರ್ಗಸ್ಯ, ಅನ್ಯತರವಿಶಿಷ್ಟಸ್ ಅನ್ಯತರಸ್ಯ, ತದೈಕ್ಯಸ್ಯ ವಾ ವಾಕ್ಯಾರ್ಥತ್ವ-ಅಂಗೀಕಾರೆ ಪ್ರಮಾಣಾಂತರ-ವಿರೋಧಾಭಾವಾತ್ ತದ್ವಾಕ್ಯಾರ್ಥಃ ಸಂಗಚ್ಛತೇ ॥೧೫೬॥**

೧೫೬. ಅಲ್ಲಾದರೋ[1] 'ನೀಲಿ' ಎಂಬ ಪದದ ಅರ್ಥವಾದ ನೀಲಿ ಎಂ ಗುಣಕ್ಕೂ, 'ಕಮಲ' ಎಂಬ ಪದದ ಅರ್ಥವಾದ ಕಮಲವೆಂಬ ವಸ್ತುವಿಗೂ ಬಿ ಬಟ್ಟೆ ಮೊದಲಾದ ಭಿನ್ನ (ಗುಣದಿಂದ ಅಥವಾ ವಸ್ತುವಿನಿಂದ) ಪ್ರತ್ಯೇಕಿಸುವುದ ಮೂಲಕ[2] ತೋರುತ್ತಿರುವ ಪರಸ್ಪರ ವಿಶೇಷಣ-ವಿಶೇಷ್ಯರೂಪದ ಸಂಬ

ವನ್ನು[3], (ಅಥವಾ) ಒಂದರಿಂದ ವಿಶಿಷ್ಟವಾದ ಮತ್ತೊಂದನ್ನು[4] ಅಥವಾ ಅವುಗಳ ಐಕ್ಯವನ್ನು[5] ವಾಕ್ಯಾರ್ಥವೆಂದು ಅಂಗೀಕರಿಸಿದರೆ, ಆ ವಾಕ್ಯಾರ್ಥವು ಇತರ ಪ್ರಮಾಣಗಳಿಗೆ ವಿರುದ್ಧವಲ್ಲದ್ದರಿಂದ[6] ಸರಿಹೊಂದುತ್ತದೆ.

1 'ನೀಲಮ್ ಉತ್ಪಲಮ್' (ನೀಲಿಯ ಕಮಲ) ಎಂಬ ವಾಕ್ಯದಲ್ಲಿ.

2 'ನೀಲಿ' ಎಂಬ ಪದವು ಬಿಳಿ, ಕೆಂಪು ಮೊದಲಾದ ಬಣ್ಣಗಳಿಂದ ಬೇರೆಯೆಂಬುದನ್ನೂ 'ಕಮಲ' ಎಂಬ ಪದವು ಬಟ್ಟೆ, ಗೋಡೆ ಮೊದಲಾದ ವಸ್ತುಗಳಿಗಿಂತ ಬೇರೆಯೆಂಬುದನ್ನೂ ಸೂಚಿಸುತ್ತದೆ.

3 ನೀಲಿಯ ಕಮಲ ಎಂಬ ವಾಕ್ಯದಲ್ಲಿ ನೀಲಿ ಎಂಬುದು ವಿಶೇಷಣ; ಕಮಲ ಎಂಬುದು ವಿಶೇಷ್ಯ. ಆದ್ದರಿಂದ ಅವೆರಡರ ನಡುವಣ ಸಂಬಂಧ ವಿಶೇಷಣ-ವಿಶೇಷ್ಯ-ಭಾವ.

4 ಈ ವಾಕ್ಯವು ನೀಲಿಯೆಂಬ ಬಣ್ಣದಿಂದ ವಿಶಿಷ್ಟವಾದ ಕಮಲವೆಂಬ ವಸ್ತುವನ್ನು ಅಥವಾ ಕಮಲತ್ವವೆಂಬ ವಸ್ತುಗುಣದಿಂದ ವಿಶಿಷ್ಟವಾದ ನೀಲಿಯ ಬಣ್ಣವನ್ನು ಸೂಚಿಸುತ್ತದೆ ಎಂದು ಬೇಕಾದರೂ ಅರ್ಥಮಾಡಬಹುದು.

5 ಅಥವಾ ಇದೇ ವಾಕ್ಯವು ನೀಲಿಯೆಂಬ ಬಣ್ಣದಿಂದ ಮತ್ತು ಕಮಲತ್ವವೆಂಬ ಗುಣದಿಂದ ಕೂಡಿರುವ ಒಂದೇ ವಸ್ತುವನ್ನು ಸೂಚಿಸುತ್ತದೆ ಎಂದೂ ಅರ್ಥ ಮಾಡಬಹುದು.

6 ಈ ಅರ್ಥವು ಪ್ರತ್ಯಕ್ಷ, ಅನುಮಾನ ಎಂಬ ಇತರ ಪ್ರಮಾಣಗಳಿಂದಲೂ ಸಮರ್ಥಿತವಾಗುತ್ತದೆ.

**ಅತ್ರ ತು ತತ್ಪದಾರ್ಥ-ಪರೋಕ್ಷತ್ವಾದಿ-ವಿಶಿಷ್ಟ-ಚೈತನ್ಯಸ್ಯ ತ್ವಂಪದಾರ್ಥ-ಅಪರೋಕ್ಷತ್ವಾದಿ-ವಿಶಿಷ್ಟ-ಚೈತನ್ಯಸ್ಯ ಚ ಅನ್ಯೋನ್ಯ-ಭೇದ-ವ್ಯಾವರ್ತಕತಯಾ ವಿಶೇಷಣ-ವಿಶೇಷ್ಯಭಾವ-ಸಂಸರ್ಗಸ್ಯ ಅನ್ಯತರ-ವಿಶಿಷ್ಟಸ್ಯ ಅನ್ಯತರಸ್ಯ ತದೈಕ್ಯಸ್ಯ ವಾ ವಾಕ್ಯಾರ್ಥಸ್ಯ-ಅಂಗೀಕಾರೇ ಪ್ರತ್ಯಕ್ಷಾದಿ-ಪ್ರಮಾಣ-ವಿರೋಧಾದ್ ವಾಕ್ಯಾರ್ಥೋ ನ ಸಂಗಚ್ಛತೇ ||೧೫೭||**

೧೫೭. ಇಲ್ಲಾದರೋ[1] 'ಅದು' (ತತ್) ಎಂಬ ಪದದ ಅರ್ಥವಾದ ಪರೋಕ್ಷತ್ವವೇ ಮೊದಲಾದವುಗಳಿಂದ ವಿಶಿಷ್ಟವಾದ ಚೈತನ್ಯಕ್ಕೂ[2], 'ನೀನು'

(ತ್ವಮ್) ಎಂಬ ಪದದ ಅರ್ಥವಾದ ಅಪರೋಕ್ಷತ್ವವೇ ಮೊದಲಾದುವುಗಳಿಂದ ವಿಶಿಷ್ಟವಾದ ಚೈತನ್ಯಕ್ಕೂ[3], ಪರಸ್ಪರ ಭೇದವನ್ನು ಹೋಗಲಾಡಿಸುವುದರ ಮೂಲಕ ವಿಶೇಷಣ–ವಿಶೇಷ್ಯ–ಭಾವವನ್ನಾಗಲೀ, ಒಂದರಿಂದ ಮತ್ತೊಂದು ವಿಶಿಷ್ಟವಾಗಿರುವುದು ಎಂಬುದನ್ನಾಗಲಿ, ಅಥವಾ, ಅವೆರಡರ ಐಕ್ಯವನ್ನಾಗಲಿ ವಾಕ್ಯಾರ್ಥವೆಂದು ಅಂಗೀಕರಿಸಿದರೆ[4] ಪ್ರತ್ಯಕ್ಷಾದಿ-ಪ್ರಮಾಣಗಳಿಗೆ ವಿರೋಧ ಮೊದಗುವುದರಿಂದ[5] (ಆ) ವಾಕ್ಯಾರ್ಥವು ಸರಿಹೋಗುವುದಿಲ್ಲ.

1 'ತತ್ ತ್ವಮ್ ಅಸಿ' ಎಂಬ ವಾಕ್ಯದಲ್ಲಿ.

2 ಈಶ್ವರ.

3 ಜೀವ.

4 ನೀಲಿಯು ಕಮಲವೆಂಬ ವಾಕ್ಯದಲ್ಲಿ ನೀಲಿಯು ಗುಣವನ್ನೂ ಕಮಲವು ದ್ರವ್ಯವನ್ನೂ ಸೂಚಿಸುತ್ತದೆ. ಇಲ್ಲಿ ಹಾಗಲ್ಲ; ತತ್ ತ್ವಮ್ ಎಂಬ ಎರಡು ಪದಗಳೂ ದ್ರವ್ಯವನ್ನೇ (ಅಥವಾ ವಸ್ತುವನ್ನೇ) ಸೂಚಿಸುತ್ತದೆ. ಆದುದರಿಂದ ವಿಶೇಷಣ-ವಿಶೇಷ್ಯ-ಭಾವವು ಸಾಧ್ಯವಾಗದು. ಎರಡನೆಯ ಮತ್ತು ಮೂರನೆಯ ಅರ್ಥಗಳಂತೂ ಸರಿಹೋಗುವುದೇ ಇಲ್ಲ.

5 ಪ್ರತ್ಯಕ್ಷ ಪ್ರಮಾಣದಿಂದ ಜೀವನು ಅಲ್ಪಜ್ಞ, ಅಲ್ಪಶಕ್ತ ಎಂಬುದು ಸ್ಪಷ್ಟ. ಆದುದರಿಂದ ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನೊಡನೆ ಐಕ್ಯವು ಸಾಧ್ಯವೇ ಇಲ್ಲ.

**ತದುಕ್ತಮ್—**

**'ಸಂಸರ್ಗೋ ವಾ ವಿಶಿಷ್ಟೋ ವಾ ವಾಕ್ಯಾರ್ಥೋ**
**ನಾತ್ರ ಸಂಮತಃ ।**
**ಅಖಂಡೈಕರಸತ್ವೇನ ವಾಕ್ಯಾರ್ಥೋ ವಿದುಷಾಂ ಮತಃ ॥'**

**ಇತಿ (ಪಂಚದಶೀ ೭.೭೫) ॥೧೫೮॥**

೧೫೮. ಅದನ್ನು ಹೀಗೆ ಹೇಳಿದೆ: 'ಈ (ಮಹಾವಾಕ್ಯದ) ವಾಕ್ಯಾರ್ಥವು ಸಂಸರ್ಗರೂಪದಿಂದಾಗಲಿ ವಿಶಿಷ್ಟರೂಪದಿಂದಾಗಲಿ ಸಂಮತವಲ್ಲ. ಅಖಂಡವೂ ಏಕರಸವೂ ಆದ (ಬ್ರಹ್ಮವೇ) ವಾಕ್ಯಾರ್ಥವೆಂಬುದು ಜ್ಞಾನಿಗಳ ಮತ.' (ಪಂಚದಶೀ ೭.೭೫)

ಈ ಶ್ಲೋಕವು 'ವಾಕ್ಯವೃತ್ತಿ' (೩೮) ಯಲ್ಲೂ ಬರುತ್ತದೆ.

**ಅತ್ರ 'ಗಂಗಾಯಾಂ ಘೋಷಃ ಪ್ರತಿವಸತಿ' ಇತಿ ವಾಕ್ಯವತ್ ಹಲ್ಲಕ್ಷಣಾ ಅಪಿ ನ ಸಂಗಚ್ಛತೇ ॥೧೫೯॥**

೧೫೯. ಇಲ್ಲಿ 'ಗಂಗೆಯಲ್ಲಿ ಗೊಲ್ಲರ ಹಳ್ಳಿಯಿದೆ' ಎಂಬ ವಾಕ್ಯದಲ್ಲಿನಂತೆ ಹಲ್ಲಕ್ಷಣೆಯೂ ಹೊಂದುವುದಿಲ್ಲ.

**ತತ್ರ ತು ಗಂಗಾ-ಘೋಷಯೋಃ ಆಧಾರ-ಆಧೇಯ-ಭಾವ-ಕ್ಷಣಸ್ಯ ವಾಕ್ಯಾರ್ಥಸ್ಯ ಅಶೇಷತಃ ವಿರುದ್ಧತ್ವಾತ್, ವಾಕ್ಯಾರ್ಥಮ್ ಶೇಷತಃ ಪರಿತ್ಯಜ್ಯ ತತ್ಸಂಬಂಧಿ-ತೀರಲಕ್ಷಣಾಯಾಃ ಯುಕ್ತ-ತ್ವಾತ್ ಜಹಲ್ಲಕ್ಷಣಾ ಸಂಗಚ್ಛತೇ ॥೧೬೦॥**

೧೬೦. ಅಲ್ಲಾದರೋ ಗಂಗೆಗೂ ಗೊಲ್ಲರಹಳ್ಳಿಗೂ ಆಧಾರ–ಆಧೇಯ–ಸದ ವಾಕ್ಯಾರ್ಥವು ಸಂಪೂರ್ಣವಾಗಿ ವಿರುದ್ಧವಾಗುವುದರಿಂದ, ವಾಕ್ಯಾರ್ಥನ್ನು ಸಂಪೂರ್ಣವಾಗಿ ಕೈಬಿಟ್ಟು, ಅದಕ್ಕೆ ಸಂಬಂಧಿಸಿದ ತೀರವೆಂಬ ಲಕ್ಷಣೆಯು ಕ್ತವಾದುದರಿಂದ ಜಹಲ್ಲಕ್ಷಣೆಯು ಸರಿಹೊಂದುತ್ತದೆ.

ಜಹದ್-ಅಜಹಲ್ಲಕ್ಷಣೆಯನ್ನು ಅಥವಾ ಭಾಗಲಕ್ಷಣೆಯನ್ನು ಬಿಟ್ಟು ಮತ್ತಾವ ಯಿಂದಲೂ 'ತತ್ತ್ವಮಸಿ' ವಾಕ್ಯಕ್ಕೆ ಅರ್ಥಮಾಡಲಾಗುವುದಿಲ್ಲವೆಂಬುದನ್ನು ನೆಯ ಕಂಡಿಕೆಯವರೆಗೂ ಸಾಧಿಸಲಾಗುತ್ತದೆ.

**ಅತ್ರ ತು ಪರೋಕ್ಷ–ಅಪರೋಕ್ಷ–ಚೈತನ್ಯೈಕತ್ವ-ಲಕ್ಷಣಸ್ಯ ಕ್ಯಾರ್ಥಸ್ಯ ಭಾಗಮಾತ್ರೇ ವಿರೋಧಾದ್ ಭಾಗಾಂತರಮಪಿ ಪರಿಜ್ಯ ಅನ್ಯಲಕ್ಷಣಾಯಾಃ ಅಯುಕ್ತತ್ವಾತ್ ಜಹಲ್ಲಕ್ಷಣಾ ನ ಗಚ್ಛತೇ ॥೧೬೧॥**

೧೬೧. ಇಲ್ಲಾದರೋ ಪರೋಕ್ಷತ್ವ-ವಿಶಿಷ್ಟಚೈತನ್ಯಕ್ಕೂ ಅಪರೋಕ್ಷತ್ವ-ಷ್ಟಚೈತನ್ಯಕ್ಕೂ ಐಕ್ಯವನ್ನು ಹೇಳುತ್ತಿರುವ ವಾಕ್ಯಾರ್ಥದಲ್ಲಿ ಒಂದುಭಾಗ

ಮಾತ್ರ ವಿರುದ್ಧವಾಗುವುದರಿಂದ ಮತ್ತೊಂದು ಭಾಗವನ್ನೂ ಕೈಬಿಟ್ಟ
ಬೇರೊಂದು ಲಕ್ಷಣೆಯಿಂದ (ಅರ್ಥಮಾಡುವುದು) ಯುಕ್ತವಲ್ಲದ್ದರಿಂ
ಜಹಲ್ಲಕ್ಷಣೆಯು ಸರಿಹೋಗುವುದಿಲ್ಲ.

'ತತ್ತ್ವಮಸಿ' ವಾಕ್ಯದಲ್ಲಿ ಪರೋಕ್ಷತ್ವ ಸರ್ವಜ್ಞತ್ವ ಸರ್ವಶಕ್ತಿತ್ವ ಇತ್ಯಾ
ಗಳನ್ನು ಸೂಚಿಸುವ ಭಾಗಕ್ಕೂ ಅಪರೋಕ್ಷತ್ವ ಕಿಂಚಿಜ್ಞತ್ವ ಅಲ್ಪಶಕ್ತಿತ್ವ ಇತ್ಯಾ
ಗಳನ್ನು ಸೂಚಿಸುವ ಭಾಗಕ್ಕೂ ವಿರೋಧವಿದ್ದರೂ ಚೈತನ್ಯಾಂಶದಲ್ಲಿ ಐಕ್ಯವಿರುತ್ತದೆ
ಆದ್ದರಿಂದ, ಒಂದು ಭಾಗದಲ್ಲಿ ವಿರೋಧವಿದೆಯೆಂದು ಎಲ್ಲವನ್ನೂ ಕೈಬಿಡುವುದ
ಸರಿಯಲ್ಲ. ಆದ್ದರಿಂದಲೇ ಜಹಲ್ಲಕ್ಷಣೆಯಿಂದ ಅರ್ಥಮಾಡುವುದು ಇಲ್ಲಿ ಸರಿಹೋಗ
ವುದಿಲ್ಲ.

**ನ ಚ ಗಂಗಾಪದಂ ಸ್ವಾರ್ಥಪರಿತ್ಯಾಗೇನ ತೀರಪದಾರ್ಥ
ಯಥಾ ಲಕ್ಷಯತಿ ತಥಾ ತತ್-ಪದಂ ತ್ವಂ-ಪದಂ ವಾ ಸ್ವಾರ್ಥಪರಿ
ತ್ಯಾಗೇನ ತ್ವಂ-ಪದಾರ್ಥಂ ತತ್-ಪದಾರ್ಥಂ ವಾ ಲಕ್ಷಯತು, ಅತಃ
ಕುತಃ ಜಹಲ್ಲಕ್ಷಣಾ ನ ಸಂಗಚ್ಛತೇ ?—ಇತಿ ವಾಚ್ಯಮ್ ॥೧೬೨॥**

೧೬೨. ಮತ್ತು: 'ಗಂಗಾ' ಎಂಬ ಪದವು ತನ್ನ ಅರ್ಥವನ್ನು ಬಿಟ್ಟ
"ತೀರ" ಎಂಬ ಪದದ ಅರ್ಥವನ್ನು ಲಕ್ಷಣೆಯಿಂದ ಸೂಚಿಸುವಂತೆ, ತತ
ಎಂಬ ಪದವಾಗಲಿ ಅಥವಾ ತ್ವಮ್ ಎಂಬ ಪದವಾಗಲಿ ತನ್ನ ಅರ್ಥವನ್ನು
ಬಿಟ್ಟು ತ್ವಮ್-ಪದದ ಅರ್ಥವನ್ನಾಗಲಿ ತತ್-ಪದದ ಅರ್ಥವನ್ನಾಗಲಿ
ಸೂಚಿಸಲಿ ! ಆದುದರಿಂದ ಜಹಲಕ್ಷಣೆಯು ಏಕೆ ಸರಿಹೋಗದು ?—ಎಂದ
ಹೇಳಬಾರದು.

ಇಲ್ಲಿ ಪೂರ್ವಪಕ್ಷವನ್ನು ಸೂಚಿಸಿ ಮುಂದಿನ ಕಂಡಿಕೆಯಲ್ಲಿ ಅದನ್ನು ನಿರಾಕರಿಸಿವೆ
ಗಂಗೆಯೆಂಬ ಪದವು ಪ್ರವಾಹವೆಂಬ ತನ್ನ ಅರ್ಥವನ್ನು ಬಿಟ್ಟು ತೀರ ಎಂಬ ಪದದ
ಅರ್ಥವಾದ ದಡವನ್ನು ಸೂಚಿಸುವಂತೆ, ತತ್ ಎಂಬ ಪದವು ತನ್ನ ಅರ್ಥವಾದ ಈಶ್ವ
ಚೈತನ್ಯವನ್ನು ಬಿಟ್ಟು ತ್ವಂಪದದ ಅರ್ಥವಾದ ಜೀವಚೈತನ್ಯವನ್ನು ಏಕೆ ಸೂಚಿಸ
ಬಾರದು ? ಹೀಗೆಯೇ ತ್ವಂ ಪದದ ಅರ್ಥ ಈಶ್ವರಚೈತನ್ಯವೇಕಾಗಬಾರದು ? ಅ
ಅರ್ಥೈಕ್ಯದಿಂದ ವಾಕ್ಯಾರ್ಥವು ಸರಿಹೊಂದುತ್ತದೆಯಲ್ಲವೇ ?—ಇದು ಪೂರ್ವಪಕ್ಷಿಯ
ಅಭಿಪ್ರಾಯ.

**ತತ್ರ ತೀರ-ಪದ-ಅಶ್ರವಣೇನ ತದರ್ಥ-ಅಪ್ರತೀತೌ ಲಕ್ಷಣಯಾ
ತತ್-ಪ್ರತೀತಿ-ಅಪೇಕ್ಷಾಯಾಮಪಿ ತತ್-ತ್ವಂಪದಯೋಃ ಶ್ರೂಯ**

**ೂಾಣತ್ವೇನ ತದರ್ಥಪ್ರತೀತೌ ಲಕ್ಷಣಯಾ ಪುನಃ ಅನ್ಯತರ-ಪದೇನ ಽನ್ಯತರ-ಪದಾರ್ಥ-ಪ್ರತೀತಿ-ಅಪೇಕ್ಷಾಭಾವಾತ್ ||೧೬೩||**

೧೬೩. ಅಲ್ಲಿ 'ತೀರ' ಎಂಬ ಪದವು ಕೇಳಿಬರದ್ದರಿಂದ, ಅದರ ಅರ್ಥವು ೋರಿಬರದಿದ್ದರೂ ಲಕ್ಷಣೆಯಿಂದ ಅದರ ಜ್ಞಾನವನ್ನು (ಪಡೆಯುವುದು) ಪೇಕ್ಷಿತವಾದರೂ, (ಇಲ್ಲಿ) ತತ್ ಮತ್ತು ತ್ವಮ್ ಎಂಬ ಪದಗಳು ಕೇಳಬರು ರುವುದರಿಂದಲೂ ಅವುಗಳ ಅರ್ಥವು (ನೇರವಾಗಿಯೇ) ಗೋಚರವಾಗುತ್ತಿರು ದರಿಂದಲೂ, ಮತ್ತೆ ಲಕ್ಷಣೆಯಿಂದ ಒಂದು ಪದವು ಮತ್ತೊಂದರ ಅರ್ಥವನ್ನು ೂಚಿಸುವ ಅಪೇಕ್ಷೆಯಿಲ್ಲದಿರುವುದರಿಂದಲೂ (ಹಾಗೆ ಹೇಳಬಾರದು).

ಒಂದು ವಾಕ್ಯದಲ್ಲಿ ವಾಚ್ಯಾರ್ಥವು ಪರಸ್ಪರ ವಿರುದ್ಧವಾಗಿರುವಾಗ ಲಕ್ಷಣೆಯಿಂದ ರ್ಥವನ್ನು ನಿರ್ಣಯಿಸಬೇಕಾಗುತ್ತದೆ. ಗಂಗೆಯ ಪ್ರವಾಹದಲ್ಲಿ ಗೊಲ್ಲರ ಹಳ್ಳಿಯಿರು ದು ಸಾಧ್ಯವಿಲ್ಲವಷ್ಟೆ? ಆದುದರಿಂದ ಗಂಗೆಯಲ್ಲಿಯೇ ಇದೆಯೋ ಎನ್ನುವಷ್ಟು ತ್ತಿರ, ತೀರದಲ್ಲಿ ಇರುವ ಹಳ್ಳಿ ಎಂದು ನಿಶ್ಚಯಿಸಲಾಯಿತು. ಇಲ್ಲಿ ತೀರವೆಂಬ ದವು ಮೂಲದಲ್ಲಿಲ್ಲ; ಲಕ್ಷಣಾವೃತ್ತಿಯಿಂದ ಅರ್ಥಪೂರಣಕ್ಕಾಗಿ ಕಲ್ಪಿಸಬೇಕಾಗಿದೆ. ದರೆ 'ತತ್ತ್ವಮಸಿ' ವಾಕ್ಯದಲ್ಲಿ ಇಂಥ ಆವಶ್ಯಕತೆಯಿಲ್ಲ. ತತ್-ಪದವು ತ್ವಮ್-ದದ ಅರ್ಥವನ್ನು ಅಥವಾ ತ್ವಮ್-ಪದವು ತತ್-ಪದದ ಅರ್ಥವನ್ನು ಲಕ್ಷಣೆಯಿಂದ ಾಚಿಸುತ್ತದೆ ಎಂದು ನಿರ್ಣಯಿಸುವುದಕ್ಕೆ ಎರಡು ಪದಗಳನ್ನೂ ನೇರವಾಗಿ ವಾಕ್ಯದಲ್ಲಿ ಯೋಗಿಸಿರುವುದೂ ಅವೆರಡರ ವಾಚ್ಯಾರ್ಥ ನೇರವಾಗಿಯೇ ತೋರುತ್ತಿರುವುದೂ ಡ್ಡಿಯಾಗುತ್ತವೆ. ಕೈ-ಹುಣ್ಣಿಗೆ ಕನ್ನಡಿಯೇಕೆ ಎಂಬಂತೆ ವಾಚ್ಯಾರ್ಥವನ್ನೇ ಮರ್ಥಿಸಲು ಸಾಧ್ಯವಿರುವಾಗ ಜಹಲ್ಲಕ್ಷಣೆಯನ್ನು ಸ್ವೀಕರಿಸುವುದು ಸರಿಯಲ್ಲ ಂದು ಭಾವ.

**ಅತ್ರ "ಶೋಣೋ ಭಾವತಿ" ಇತಿ ವಾಕ್ಯವದ್ ಅಜಹಲ್ಲಕ್ಷಣಾ ಪಿ ನ ಸಂಭವತಿ ||೧೬೪||**

೧೬೪. ಇಲ್ಲಿ, 'ಕೆಂಪು ಓಡುತ್ತಿದೆ' ಎಂಬ ವಾಕ್ಯದಲ್ಲಿರುವಂತೆ ಅಜಹಲ್ಲ ಣೆಯು ಕೂಡ ಸಂಭವಿಸುವುದಿಲ್ಲ.

ಕಂಡಿಕೆ ೧೫೩ ರ ಟಿಪ್ಪಣಿಯನ್ನು ನೋಡಿ.

**ತತ್ರ ಶೋಣಗುಣ-ಗಮನ-ಲಕ್ಷಣಸ್ಯ ವಾಕ್ಯಾರ್ಥಸ್ಯ ವಿರುದ್ಧ-ತ್ವಾತ್ ತದ್-ಅಪರಿತ್ಯಾಗೇನ ತದಾಶ್ರಯ-ಅಶ್ವಾದಿ-ಲಕ್ಷಣಯಾ ತದ್ ವಿರೋಧ ಪರಿಹಾರ-ಸಂಭವಾತ್ ಅಜಹಲ್ಲಕ್ಷಣಾ ಸಂಭವತಿ ||೧೬೫||**

೧೬೫. ಅಲ್ಲಿ, ಕೆಂಪು ಎಂಬ ಗುಣಕ್ಕೆ ಗಮನವನ್ನು (ಹೇಳುವ) ರೂಪದ ವಾಕ್ಯಾರ್ಥವು (ಅನುಭವ)ವಿರುದ್ಧವಾದುದರಿಂದ ಅದನ್ನು ತ್ಯಜಿಸದೆಯೇ ಅದಕ್ಕೆ ಆಶ್ರಯವಾಗಿರುವ ಕುದುರೆ ಮೊದಲಾದ (ಪ್ರಾಣಿಯನ್ನು ಸೂಚಿಸುವ) ಲಕ್ಷಣಾವೃತ್ತಿಯಿಂದ ಆ ವಿರೋಧವನ್ನು ಪರಿಹರಿಸುವ ಸಂಭವವಿರುವುದರಿಂದ ಅಜಹಲ್ಲಕ್ಷಣೆಯು ಸರಿಹೊಂದುತ್ತದೆ.

**ಅತ್ರ ತು ಪರೋಕ್ಷತ್ವ–ಅಪರೋಕ್ಷತ್ವಾದಿ–ವಿಶಿಷ್ಟ–ಚೈತನ್ಯ-ಏಕತ್ವಸ್ಯ ವಾಕ್ಯಾರ್ಥಸ್ಯ ವಿರುದ್ಧತ್ವಾತ್ ತದಪರಿತ್ಯಾಗೇನ ತತ್ಸಂ-ಬಂಧಿನಃ ಯಸ್ಯ ಕಸ್ಯಚಿದರ್ಥಸ್ಯ ಲಕ್ಷಿತತ್ವೇ ಅಪಿ ತದ್ವಿರೋಧ ಪರಿಹಾರ-ಅಸಂಭವಾತ್ ಅಜಹಲ್ಲಕ್ಷಣಾ ನ ಸಂಭವತ್ಯೇವ ||೧೬೬||**

೧೬೬. ಇಲ್ಲಾದರೋ ಪರೋಕ್ಷತ್ವ ಅಪರೋಕ್ಷತ್ವ ಮೊದಲಾದ ವಿಶೇಷಣಗಳನ್ನುಳ್ಳ ಚೈತನ್ಯಗಳ ಏಕತ್ವವೆಂಬ ವಾಕ್ಯಾರ್ಥವು ವಿರುದ್ಧವಾಗಿರುವುದರಿಂದ, ಅದನ್ನು ಬಿಡದೆಯೇ ಅವುಗಳಿಗೆ ಸಂಬಂಧಿಸಿದಂಥ ಮತ್ತಾವುದಾದರೂ ಅರ್ಥವನ್ನು ಲಕ್ಷಣೆಯಿಂದ ಕಲ್ಪಿಸಿದರೂ ಆ ವಿರೋಧಪರಿಹಾರವು ಅಸಂಭವವಾದುದರಿಂದ ಅಜಹಲ್ಲಕ್ಷಣೆಯು ಸರಿಹೊಂದುವುದೇ ಇಲ್ಲ.

ಅಜಹಲ್ಲಕ್ಷಣೆಯಲ್ಲಿ ವಾಚ್ಯಾರ್ಥವನ್ನುಳಿಸಿಕೊಂಡು ಹೆಚ್ಚಿಗೆ ಅರ್ಥವನ್ನು ಸೇರಿಸಿ ಕೊಳ್ಳಲಾಗುತ್ತದೆ. 'ತತ್ತ್ವಮಸಿ' ವಾಕ್ಯದಲ್ಲಿ ಆ ರೀತಿ ಮಾಡಿದರೂ ಪರೋಕ್ಷತ್ವ ಅಪರೋಕ್ಷತ್ವ ಮೊದಲಾದುವುಗಳಿಗಿರುವ ವಿರೋಧವು ಪರಿಹಾರವಾಗುವುದೇ ಇಲ್ಲ. ಆದ್ದರಿಂದ ಈ ಲಕ್ಷಣೆಯಿಂದಲೂ ಅರ್ಥಮಾಡಲು ಸಾಧ್ಯವಿಲ್ಲ.

**ನ ಚ ತತ್-ಪದಂ ತ್ವಂ-ಪದಂ ವಾ ಸ್ವಾರ್ಥ-ವಿರುದ್ಧಾಂಶ-ಪರಿತ್ಯಾಗೇನ ಅಂಶಾಂತರಸಹಿತಂ ತ್ವಂ-ಪದಾರ್ಥಂ ತತ್-ಪದಾರ್ಥ**

**ಲಕ್ಷಯತು, ಅತಃ ಕಥಂ ಪ್ರಕಾರಾಂತರೇಣ ಭಾಗಲಕ್ಷಣಾ-ಗೀಕರಣಮ್ ಇತಿ ವಾಚ್ಯಮ್ ॥೧೬೭॥**

೧೬೭. ಮತ್ತು, 'ತತ್-ಪದವಾಗಲಿ ಅಥವಾ ತ್ವಂ-ಪದವಾಗಲಿ ತನ್ನ ಕ್ಕೆ ವಿರುದ್ಧವಾದ ಅಂಶವನ್ನು ಕೈಬಿಟ್ಟು (ವಿರುದ್ಧವಲ್ಲದ) ಮತ್ತೊಂದು ದಿಂದ ಕೂಡಿ ತ್ವಂ-ಪದದ ಅಥವಾ ತತ್-ಪದದ ಅರ್ಥವನ್ನು ಲಕ್ಷಣಾ ಯಿಂದ ಸೂಚಿಸಲಿ! ಆದುದರಿಂದ ಬೇರೆ ರೀತಿಯಲ್ಲಿ ಭಾಗಲಕ್ಷಣೆಯನ್ನು ಗೆ ಒಪ್ಪಿಕೊಳ್ಳುವುದು?' ಎಂದು ಹೇಳಬಾರದು.

ತತ್-ಪದದ ಅರ್ಥವಾದ ಪರೋಕ್ಷತ್ವಾದಿ ಗುಣಗಳನ್ನುಳ್ಳ ಈಶ್ವರಚೈತನ್ಯದಲ್ಲಿ ೋಕ್ಷತ್ವಾದಿಗಳನ್ನು ತ್ಯಜಿಸಿ ಚೈತನ್ಯಾಂಶವನ್ನು ಮಾತ್ರ ಪರಿಗ್ರಹಿಸಿದರೆ ಅದು ತ್ವಂ ದ ಅರ್ಥವಾದ ಜೀವಚೈತನ್ಯಕ್ಕೆ ವಿರುದ್ಧವಾಗುವುದಿಲ್ಲ. ಹಾಗೆಯೇ ವಿಪರ್ಯಯ ತ್ವಂ-ಪದ ತತ್-ಪದಗಳ ವಿಷಯದಲ್ಲಿ ಕೂಡ. ಆದುದರಿಂದ ಭಾಗಲಕ್ಷಣೆಯನ್ನು ೀಕರಿಸುವ ಆವಶ್ಯಕತೆಯೇನಿದೆ? – ಇದು ಪೂರ್ವಪಕ್ಷಿಯ ಅಭಿಪ್ರಾಯ. ಇದನ್ನು ಂದಿನ ಕಂಡಿಕೆಯಲ್ಲಿ ನಿರಾಕರಿಸಿದೆ.

**ಏಕೇನ ಪದೇನ ಸ್ವಾರ್ಥಾಂಶ-ಪದಾರ್ಥಾಂತರ-ಉಭಯ-ಕ್ಷಣಾಯಾ ಅಸಂಭವಾತ್ ಪದಾಂತರೇಣ ತದರ್ಥಪ್ರತೀತೌ ಕ್ಷಣಯಾ ಪುನಃ ತತ್ಪ್ರತೀತಿ-ಅಪೇಕ್ಷಾ-ಅಭಾವಾಚ್ಚ ॥೧೬೮॥**

೧೬೮. ಒಂದೇ ಪದದಿಂದ ತನ್ನ ಅರ್ಥದ ಒಂದಂಶ ಮತ್ತು ಇನ್ನೊಂದು ದ ಅರ್ಥ-ಇವೆರಡೂ ಲಕ್ಷಣೆಯಿಂದ ತೋರುವುದು ಅಸಂಭವವಾದುದ ಲೂ, ಮತ್ತು, ಮತ್ತೊಂದು ಪದದಿಂದ ಆ ಅರ್ಥವು (ನೇರವಾಗಿಯೇ) ೀರುತ್ತಿರುವಾಗ ಲಕ್ಷಣಾವೃತ್ತಿಯಿಂದ ಪುನಃ ಅದರ ಜ್ಞಾನದ ಅಪೇಕ್ಷೆಯಿಲ್ಲ ವುದರಿಂದಲೂ (ಹಾಗೆ ಹೇಳಬಾರದು).

ಒಂದು ವಾಕ್ಯದಲ್ಲಿ ಪ್ರಯೋಗಿಸಿರುವ ಒಂದು ಶಬ್ದಕ್ಕೆ ಒಂದು ವಾಚ್ಯಾರ್ಥ ನಾ ಒಂದು ಲಕ್ಷ್ಯಾರ್ಥ ಹೊಳೆಯುತ್ತದೆಯೇ ವಿನಾ ಎರಡಲ್ಲ. ಎರಡನೆಯದಾಗಿ, – ಪದಕ್ಕೆ ಲಕ್ಷಣೆಯಿಂದ ಕಲ್ಪಿಸುತ್ತಿರುವ ಅರ್ಥವು ನೇರವಾಗಿಯೇ ತ್ವಂ-ಪದ

ಪ್ರಯೋಗದಿಂದ ತಿಳಿದುಬರುತ್ತಿದೆ. ಆದುದರಿಂದ ಅಜಹಲ್ಲಕ್ಷಣೆಯೂ ತತ್ತ್ವಮ ವಾಕ್ಯಾರ್ಥದಲ್ಲಿ ಸರಿಹೊಂದುವುದಿಲ್ಲ.

**ತಸ್ಮಾದ್ ಯಥಾ 'ಸೋಽಯಂ ದೇವದತ್ತಃ' ಇತಿ ವಾಕ್ಯ ತದರ್ಥೋ ವಾ ತತ್ಕಾಲ-ಏತತ್ಕಾಲ-ವಿಶಿಷ್ಟ-ದೇವದತ್ತ-ಲಕ್ಷಣಸ ವಾಕ್ಯಾರ್ಥಸ್ಯ ಅಂಶೇ ವಿರೋಧಾತ್, ವಿರುದ್ಧ-ತತ್ಕಾಲ-ಏತತ್ಕಾಲ ವಿಶಿಷ್ಟ-ಅಂಶಂ ಪರಿತ್ಯಜ್ಯ ಅವಿರುದ್ಧಂ ದೇವದತ್ತಾಂಶಮಾತ್ರಂ ಲಕ್ಷ ಯತಿ ತಥಾ ತತ್ತ್ವಮಸೀತಿ ವಾಕ್ಯಂ ತದರ್ಥೋ ವಾ ಪರೋಕ್ಷತ್ವ ಅಪರೋಕ್ಷತ್ವಾದಿ-ವಿಶಿಷ್ಟ-ಚೈತನ್ಯ-ಏಕತ್ವ-ಲಕ್ಷಣಸ್ಯ ವಾಕ್ಯಾರ್ಥಸ್ ಅಂಶೇ ವಿರೋಧಾತ್ ವಿರುದ್ಧ-ಪರೋಕ್ಷತ್ವ-ಅಪರೋಕ್ಷತ್ವ-ವಿಶಿಷ್ ಅಂಶಂ ಪರಿತ್ಯಜ್ಯ ಅವಿರುದ್ಧಮ್ ಅಖಂಡಚೈತನ್ಯಮಾತ್ರ ಲಕ್ಷಯತಿ ಇತಿ ॥ ೧೬೯ ॥**

೧೬೯. ಆದುದರಿಂದ ಹೇಗೆ, 'ಅವನೇ ಈ ದೇವದತ್ತನು' ಎಂ ವಾಕ್ಯವು ಅಥವಾ ಅದರ ಅರ್ಥವು, 'ಆ ಕಾಲ', 'ಈ ಕಾಲ' ಎಂ ವಿಶೇಷಣವನ್ನು ಹೊಂದಿರುವ ದೇವದತ್ತನ ರೂಪವಾದ ವಾಕ್ಯಾರ್ಥದ ವಿಷ ದಲ್ಲಿ ವಿರೋಧವಿರುವುದರಿಂದ, ವಿರುದ್ಧವಾಗಿರುವ 'ಆ ಕಾಲ', 'ಈ ಕಾ ಎಂಬ ವಿಶೇಷಾಂಶಗಳನ್ನು ಬಿಟ್ಟು, ಅವಿರುದ್ಧವಾದ ದೇವದತ್ತ ಎಂಬ ಭ ವನ್ನು ಮಾತ್ರ ಲಕ್ಷಿಸುತ್ತದೆಯೋ, ಹಾಗೆಯೇ, 'ತತ್ ತ್ವಮ್ ಅಸಿ' ಎ ವಾಕ್ಯವು ಅಥವಾ ಅದರ ಅರ್ಥವು ಪರೋಕ್ಷತ್ವ ಅಪರೋಕ್ಷತ್ವ ಮೊದಲ ವಿಶೇಷಣಗಳನ್ನು ಹೊಂದಿರುವ ಚೈತನ್ಯಗಳ ಐಕ್ಯವೆಂಬ ವಾಕ್ಯಾರ್ಥ ಅಂಶದಲ್ಲಿ ವಿರೋಧವಿರುವುದರಿಂದ, ಹೀಗೆ ವಿರುದ್ಧವಾದ ಪರೋಕ್ಷ ಅಪರೋಕ್ಷತ್ವ ಎಂಬ ವಿಶಿಷ್ಟಾಂಶಗಳನ್ನು ಕೈಬಿಟ್ಟು ಅವಿರುದ್ಧವಾದ ಅಖ ಚೈತನ್ಯವನ್ನು ಮಾತ್ರ ಸೂಚಿಸುತ್ತದೆ ಎನ್ನಬೇಕು.

### 'ಅಹಂ ಬ್ರಹ್ಮಾಸ್ಮಿ' ಮಹಾವಾಕ್ಯದ ಅರ್ಥ

**ಅಥ ಅಧುನಾ 'ಅಹಂ ಬ್ರಹ್ಮಾಸ್ಮಿ' (ಬೃ.ಉ.೧.೪.೧೦) ಅನುಭವ-ವಾಕ್ಯಾರ್ಥಃ ವರ್ಣ್ಯತೇ ॥ ೧೭೦ ॥**

೧೭೦. ಇನ್ನು ಈಗ, 'ನಾನು ಬ್ರಹ್ಮವಾಗಿದ್ದೇನೆ'(ಬೃ.ಉ.೧.೪.೧೦) ಬ ಅನುಭವವಾಕ್ಯದ ಅರ್ಥವು ವರ್ಣಿಸಲ್ಪಡುತ್ತದೆ.

ಅದ್ವೈತಸಂಪ್ರದಾಯದಲ್ಲಿ 'ತತ್ತ್ವಮಸಿ'ಯನ್ನು ಉಪದೇಶವಾಕ್ಯವೆಂದೂ ಹಂ ಬ್ರಹ್ಮಾಸ್ಮಿ'ಯನ್ನು ಅನುಭವವಾಕ್ಯವೆಂದೂ ಕರೆಯುತ್ತಾರೆ.

ಇಲ್ಲಿಯೂ ಕೂಡ ಅಹಮ್ ಎಂಬುದು ಜೀವಚೈತನ್ಯವನ್ನೂ ಬ್ರಹ್ಮವೆಂಬುದು ಹ್ಮಚೈತನ್ಯವನ್ನೂ ಸೂಚಿಸುವುದರಿಂದ, ಅವುಗಳ ಐಕ್ಯವನ್ನು ಭಾಗಲಕ್ಷಣೆಯಿಂದಲೇ, ದೆ ತತ್ತ್ವಮಸಿ ವಾಕ್ಯದ ವಿಷಯದಲ್ಲಿ ವಿವರಿಸಿದಂತೆಯೇ, ಗ್ರಹಿಸಬೇಕು.

**ಏವಮ್ ಆಚಾರ್ಯೇಣ ಅಧ್ಯಾರೋಪ-ಅಪವಾದ-ಪುರಸ್ಸರಂ ್-ತ್ವಮ್-ತದಾರ್ಥೌ ಶೋಧಯಿತ್ವಾ ವಾಕ್ಯೇನ ಅಖಂಡಾರ್ಥೇ ಕಬೋಧಿತೇ ಅಧಿಕಾರಿಣಃ ಅಹಂ ನಿತ್ಯ-ಶುದ್ಧ-ಬುದ್ಧ-ಮುಕ್ತ- -ಸ್ವಭಾವ-ಪರಮಾನಂದ-ಅನಂತ-ಅದ್ವಯಂ ಬ್ರಹ್ಮ ಅಸ್ಮಿ ಇತಿ ಂಡ-ಆಕಾರ-ಕಾರಿತಾ ಚಿತ್ತವೃತ್ತಿಃ ಉದೇತಿ ॥ ೧೭೧ ॥**

೧೭೧. ಹೀಗೆ[1], ಆಚಾರ್ಯನಿಂದ ಅಧ್ಯಾರೋಪ-ಅಪವಾದಗಳ ಲಕ ತತ್ ಮತ್ತು ತ್ವಮ್ ಪದಗಳ ಅರ್ಥಗಳು ಪರಿಶೋಧಿಸಲ್ಪಟ್ಟು ಪದೇಶಿಸಿದ) ವಾಕ್ಯದಿಂದ[2] ಅಖಂಡವಾದ ಅರ್ಥವು[3] ತಿಳಿಯಲ್ಪಡಲಾಗಿ, ಕಾರಿಗೆ[4] 'ನಾನು ನಿತ್ಯ[5] ಶುದ್ಧ[6] ಬುದ್ಧ[7] ಮುಕ್ತ[8] ಸತ್ಯ[9] ಸ್ವಭಾವವುಳ್ಳ, ಮಾನಂದವೂ[10] ಅನಂತವೂ[11] ಅದ್ವಯವೂ[12] ಆದ ಬ್ರಹ್ಮ[13]ವಾಗಿದ್ದೇನೆ' ನೀ (ರೂಪದ) ಅಖಂಡಾಕಾರವನ್ನು[14] ತಾಳಿದ ಚಿತ್ತವೃತ್ತಿಯು[15] ಟ್ಟುತ್ತದೆ.

1 ಭಾಗಲಕ್ಷಣೆಯ ಮೂಲಕ.

2 ಮಹಾವಾಕ್ಯದಿಂದ.

3 ಮೂರೂ ಪದಗಳಿಂದ ಸೂಚಿತವಾಗುತ್ತಿರುವ ಅರ್ಥವು ಒಂದೇ, ಅದು ಬ್ರಹ್ಮ ನ್ಯವನ್ನು ಹೇಳುತ್ತಿದೆ – ಎಂಬೀ ರೂಪದ ಅಖಂಡಾರ್ಥ.

4 ಕಂಡಿಕೆ ೬ ನ್ನು ನೋಡಿ.

5 ಶಾಶ್ವತವಾದ.

6 ಅವಿದ್ಯಾದಿ ದೋಷಗಳ ಸಂಬಂಧವಿಲ್ಲದ.

7 ಜಡಕ್ಕೆ ವಿರುದ್ಧವಾದ, ಸ್ವಪ್ರಕಾಶವುಳ್ಳ, ಜ್ಞಾನಸ್ವರೂಪವಾದ.

8 ಯಾವ ಉಪಾಧಿಯೂ ಇಲ್ಲದ್ದರಿಂದ ಸದಾ ಮುಕ್ತವಾದ.

9 ಶೂನ್ಯವಲ್ಲದ, ಅವಿನಾಶಿಯಾದ.

10 ವಿಷಯಸುಖದಿಂದಾಗುವ ಮನುಷ್ಯರ ಆನಂದದಿಂದ ಪ್ರಾರಂ ಚತುರ್ಮುಖ ಬ್ರಹ್ಮನ ಆನಂದದವರೆಗಿನ ಎಲ್ಲ ಆನಂದಗಳೂ ಕರ್ಮಜನ್ಯವಾದ ರಿಂದ ನಶ್ವರ. ಬ್ರಹ್ಮವು ಅವೆಲ್ಲವನ್ನೂ ಮೀರಿರುವುದರಿಂದಲೂ ಆನಂದಸ್ವರೂಪ ಆಗಿರುವುದರಿಂದಲೂ 'ಪರಮಾನಂದ'.

11 ದೇಶಕಾಲಾದಿ ಪರಿಚ್ಛೇದವಿಲ್ಲದ.

12 ತನಗಿಂತ ಬೇರೆಯಾದ ಎರಡನೆಯ ವಸ್ತುವಿಲ್ಲದ.

13 ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಚೈತನ್ಯ.

14 ಅಖಂಡಬ್ರಹ್ಮದ ರೂಪವನ್ನು.

15 ನೀರಿನಲ್ಲಿ ಅಲೆಯೇಳುವಂತೆ ಮನಸ್ಸಿನಲ್ಲಿ ಏಳುವ ಅಲೆಗಳನ್ನು ಚಿತ್ತವೃ ಎಂದು ಕರೆಯುತ್ತಾರೆ.

**ಸಾ ತು ಚಿತ್-ಪ್ರತಿಬಿಂಬ-ಸಹಿತಾ ಸತೀ ಪ್ರತ್ಯಗ್-ಅಭಿನ್ನವ ಅಜ್ಞಾತಂ ಪರಂ ಬ್ರಹ್ಮ ವಿಷಯೀಕೃತ್ಯ ತದ್ಗತ-ಅಜ್ಞಾನಮೇ ಬಾಧತೇ, ತದಾ ಪಟಕಾರಣ-ತಂತು-ದಾಹೇ ಪಟದಾಹವತ ಅಖಿಲಕಾರಣೇ ಅಜ್ಞಾನೇ ಬಾಧಿತೇ ಸತಿ ತತ್ಕಾರ್ಯಸ್ಯ ಅಖಿಲ ಬಾಧಿತತ್ವಾತ್ ತದಂತರ್ಭೂತ-ಅಖಂಡಾಕಾರ-ಕಾರಿತಾ ಚಿತ್ತವೃತ್ತಿ ಅಪಿ ಬಾಧಿತಾ ಭವತಿ ॥ ೧೭೨ ॥**

೧೭೨. ಆ (ಅಖಂಡಾಕಾರವೃತ್ತಿ)ಯಾದರೋ(ಯಾವಾಗ)ಚಿದ್ವಸ್ತುವಿ ಪ್ರತಿಬಿಂಬದಿಂದ ಕೂಡಿ ಪ್ರತ್ಯಗಾತ್ಮನಿಂದ ಬೇರೆಯಲ್ಲದ, (ಆದರೆ ಹಾ ತಿಳಿಯಲ್ಪಡದಿರುವ, ಪರಬ್ರಹ್ಮವನ್ನು ವಿಷಯವನ್ನಾಗಿ ಮಾಡಿಕೊಂಡು ಅದ

ಬಗೆಗೆ ಇರುವ ಅಜ್ಞಾನವನ್ನು ಹೋಗಲಾಡಿಸುತ್ತದೆಯೋ ಆಗ, ಬಟ್ಟೆಯ ಕಾರಣವಾದ ದಾರಗಳನ್ನು ಸುಟ್ಟರೆ ಬಟ್ಟೆಯು ಹೇಗೆ ಸುಟ್ಟುಹೋಗುತ್ತದೆಯೋ ಹಾಗೆ, ಎಲ್ಲ (ವಸ್ತುಗಳಿಗೂ ಉಪಾದಾನ-) ಕಾರಣವಾದ ಅಜ್ಞಾನವು ನಾಶವಾದಾಗ ಅದರ ಕಾರ್ಯವಾದ ಎಲ್ಲವೂ ನಾಶವಾಗುವುದರಿಂದ, ಅದರಲ್ಲಿಯೇ ಸೇರಿಹೋಗಿರುವ ಅಖಂಡಾಕಾರ-ರೂಪದ ಚಿತ್ತವೃತ್ತಿಯೂ ಕೂಡ ನಾಶವಾಗುತ್ತದೆ.

ಧರ್ಮರಾಜ ಅಧ್ವರೀಂದ್ರರ 'ವೇದಾಂತಪರಿಭಾಷಾ' ಮೊದಲಾದ ಗ್ರಂಥಗಳಲ್ಲಿ ಮನಸ್ಸು ಘಟಾದಿ ವಿಷಯಗಳನ್ನು ಅರಿಯುವ ಕ್ರಮವನ್ನು ಹೀಗೆ ವಿವರಿಸಿದೆ: ಚಿತ್ತವಸ್ತುವು ಕಣ್ಣು ಮೊದಲಾದ ಇಂದ್ರಿಯಗಳ ಮೂಲಕ ಹೊರಕ್ಕೆ ಹರಿದು ಘಟಾದಿ ವಸ್ತುಗಳನ್ನು ಸೇರಿ ಅವನ್ನು ಸುತ್ತುವರಿದು ಅವುಗಳ ಆಕಾರವನ್ನು ಪಡೆದು ಹಿಂದಿರುಗುತ್ತದೆ. ಇಂಥ ಆಕಾರವನ್ನು ಚಿತ್ತವೃತ್ತಿಯೆನ್ನುತ್ತಾರೆ. ಈ ಚಿತ್ತವೃತ್ತಿಯಲ್ಲಿ ಆತ್ಮಚೈತನ್ಯವು ಪ್ರತಿಬಿಂಬಿತವಾದಾಗ, 'ನಾನು ಘಟವನ್ನು ಅರಿಯುತ್ತಿದ್ದೇನೆ' ಅಥವಾ 'ಇದು ಘಟ' ಎಂಬ ಜ್ಞಾನ ಉಂಟಾಗುತ್ತದೆ. ಇದು ಘಟದ ಬಗೆಗೆ ಇದ್ದ ಅಜ್ಞಾನವನ್ನು ಹೋಗಲಾಡಿಸುತ್ತದೆ.

ಅಧಿಕಾರಿಯ ಮನಸ್ಸಿನಲ್ಲಿ ಮಹಾವಾಕ್ಯ-ಶ್ರವಣಾದಿಗಳಿಂದ ಉಂಟಾಗಿದ್ದ, ಅಖಂಡಾಕಾರವನ್ನು ತಾಳಿದ್ದ, ಚಿತ್ತವೃತ್ತಿಯು ಪ್ರತ್ಯಗಾತ್ಮನ ಪ್ರತಿಬಿಂಬದಿಂದ ಕೂಡಿ ಪ್ರತ್ಯಗಾತ್ಮನ ಜ್ಞಾನವನ್ನೂ, ಅದರಿಂದ ಬೇರೆಯಲ್ಲದ ಪರಬ್ರಹ್ಮದ ಜ್ಞಾನವನ್ನೂ, ಉಂಟುಮಾಡುತ್ತದೆ. ಈ ಐಕ್ಯಜ್ಞಾನವು ಉಂಟಾಗುವ ಸಮಕಾಲದಲ್ಲಿಯೇ ಪರಬ್ರಹ್ಮದ ಬಗೆಗೆ ಜೀವನಿಗಿದ್ದ ಅಜ್ಞಾನವೂ ಹೋಗಿಬಿಡುತ್ತದೆ. ಅಜ್ಞಾನವು ಯಾವಾಗ ನಷ್ಟವಾಗುವುದೋ ಆಗ ಆ ಅಜ್ಞಾನದ ಫಲವಾಗಿದ್ದ ಬಾಹ್ಯಪ್ರಪಂಚವು ನಷ್ಟವಾಗುವುದಲ್ಲದೆ ಆಂತರಿಕ ಪ್ರಪಂಚದ ಚಿತ್ತವೃತ್ತಿಯೂ ಸಹ ನಷ್ಟವಾಗುತ್ತದೆ. ಬ್ರಹ್ಮಾಕಾರವನ್ನು ತಾಳಿದ ಚಿತ್ತವೃತ್ತಿಯು ಬ್ರಹ್ಮಾತ್ಮೈಕ್ಯಜ್ಞಾನವನ್ನು ಉಂಟುಮಾಡಿದಮೇಲೂ ಉಳಿದುಬಿಟ್ಟರೆ ಅದ್ವೈತಕ್ಕೆ ಹಾನಿಯೆಂಬುದು ಸರ್ವವಿದಿತ ಮತ್ತು ಶಾಸ್ತ್ರವಿರುದ್ಧ.

**ತತ್ರ ಪ್ರತಿಬಿಂಬಿತಂ ಚೈತನ್ಯಮ್ ಅಪಿ ಯಥಾ ದೀಪಪ್ರಭಾ ಆದಿತ್ಯಪ್ರಭಾಽವಭಾಸನ-ಅಸಮರ್ಥಾ ಸತೀ ತಯಾ ಅಭಿಭೂತಾ ಭವತಿ, ತಥಾ ಸ್ವಯಂಪ್ರಕಾಶಮಾನ-ಪ್ರತ್ಯಗಭಿನ್ನ-ಪರಬ್ರಹ್ಮ-ಅವಭಾಸ-ಅನರ್ಹತಯಾ ತೇನ ಅಭಿಭೂತಂ ಸತ್, ಸ್ವ-ಉಪಾಧಿಭೂತ-**

**ಅಖಂಡವೃತ್ತೇಃ ಬಾಧಿತತ್ವಾದ್ ದರ್ಪಣ-ಅಭಾವೇ ಮುಖಪ್ರತಿ-ಬಿಂಬಸ್ಯ ಮುಖಮಾತ್ರತ್ವವತ್ ಪ್ರತ್ಯಗಭಿನ್ನ-ಪರಬ್ರಹ್ಮಮಾತ್ರಂ ಭವತಿ ॥ ೧೭೩ ॥**

೧೭೩. ಅಲ್ಲಿ[1] ಪ್ರತಿಬಿಂಬಿತವಾದ ಚೈತನ್ಯವೂ[2] ಕೂಡ, ದೀಪದ ಬೆಳಕು ಸೂರ್ಯನ ಬೆಳಕನ್ನು ಪ್ರಕಟಪಡಿಸಲು ಅಸಮರ್ಥವಾಗಿ ಅದರಿಂದಲೇ ಕಳೆಗುಂದುವಂತೆ, ಸ್ವಯಂಪ್ರಕಾಶವೂ ಪ್ರತ್ಯಗಾತ್ಮನಿಂದ ಬೇರೆಯಲ್ಲದ್ದೂ ಆದ ಪರಬ್ರಹ್ಮವನ್ನು ಪ್ರಕಟಪಡಿಸಲು ಅಸಮರ್ಥವಾಗಿ, ಅದರಿಂದಲೇ ಕಳೆಗುಂದಿ, ತನಗೆ ಉಪಾಧಿಯಾದ ಅಖಂಡಾಕಾರ (ಚಿತ್ತ) ವೃತ್ತಿಯು ನಷ್ಟಹೊಂದುವುದರಿಂದ—ಕನ್ನಡಿಯಿಲ್ಲದಾಗ ಮುಖದ ಪ್ರತಿಬಿಂಬವು ಮುಖವೇ ಆಗಿ ಉಳಿಯುವಂತೆ[3]—ಪ್ರತ್ಯಗಾತ್ಮನಿಗಿಂತ ಬೇರೆಯಲ್ಲದ ಪರಬ್ರಹ್ಮಮಾತ್ರವೇ ಆಗಿ ಉಳಿಯುತ್ತದೆ.

1 ಅಖಂಡಾಕಾರವನ್ನು ತಾಳಿರುವ ಚಿತ್ತವೃತ್ತಿಯಲ್ಲಿ.

2 ಪ್ರತ್ಯಗಾತ್ಮನೆಂಬ ಚೈತನ್ಯವೂ ಕೂಡ.

3 ಕನ್ನಡಿಯನ್ನು ತೆಗೆದಿಟ್ಟಾಗ ಅದರಲ್ಲಿದ್ದ ಮುಖದ ಪ್ರತಿಬಿಂಬವು ಏನಾಗುತ್ತದೆ? ಎಂದರೆ ಅದು ಬಿಂಬವಾದ ಮುಖದಲ್ಲಿಯೇ ಸೇರಿಹೋಗುತ್ತದೆ. ಹಾಗೆಯೇ ಅಖಂಡಾಕಾರಚಿತ್ತವೃತ್ತಿಯು ನಾಶವಾದಾಗ ಅದರಲ್ಲಿ ಪ್ರತಿಬಿಂಬಿತವಾಗಿದ್ದ ಚೈತನ್ಯವೂ ಕೂಡ ನಾಶವಾಗಿ ಮೂಲಚೈತನ್ಯವೊಂದೇ ಉಳಿದುಕೊಳ್ಳುತ್ತದೆ.

**ಏವಂ ಚ ಸತಿ, 'ಮನಸೈವಾನುದ್ರಷ್ಟವ್ಯಮ್' (ಬೃ.ಉ.೪.೪.೧೯), 'ಯನ್ಮನಸಾ ನ ಮನುತೇ' (ಕೇ.ಉ.೧.೬) ಇತ್ಯನಯೋಃ ಶ್ರುತ್ಯೋಃ ಅವಿರೋಧಃ ವೃತ್ತಿವ್ಯಾಪ್ಯತ್ವ-ಅಂಗೀಕಾರೇಣ ಫಲ-ವ್ಯಾಪ್ಯತ್ವ-ಪ್ರತಿಷೇಧ-ಪ್ರತಿಪಾದನಾತ್ ॥ ೧೭೪ ॥**

೧೭೪. ಹೀಗಿರಲು, '(ಇದನ್ನು) ಮನಸ್ಸಿನಿಂದಲೇ ಅರಿತುಕೊಳ್ಳಬೇಕು' (ಬೃ.ಉ.೪.೪.೧೯) ಮತ್ತು, 'ಯಾವುದನ್ನು ಮನಸ್ಸಿನಿಂದ ಚಿಂತಿಸಲಾಗುವುದಿಲ್ಲವೋ' (ಕೇ.ಉ. ೧.೬) ಎಂಬೀ ಶ್ರುತಿವಾಕ್ಯಗಳಿಗೆ ವಿರೋಧವಿರುವುದಿಲ್ಲ ; ಏಕೆಂದರೆ (ಪರಬ್ರಹ್ಮವು) (ಅಂತಃಕರಣದ) ವೃತ್ತಿಯಿಂದ ವ್ಯಾಪಿಸಲ್ಪಟ್ಟದೆಯೆಂಬುದನ್ನು ಒಪ್ಪಿದೆ. (ಆದರೆ) (ಅದರ) ಫಲದಿಂದ ವ್ಯಾಪಿಸಲ್ಪಟ್ಟದೆಯೆಂಬುದರ ನಿಷೇಧವನ್ನು ಸಾರಿದೆ.

ಶುದ್ಧವಾದ ಮನಸ್ಸಿನಿಂದ ಆತ್ಮನನ್ನು ಅರಿಯಬಹುದು ಎಂಬರ್ಥವನ್ನು ೂಡುವ ಹಲವು ಶ್ರುತಿವಾಕ್ಯಗಳಿವೆ. ಉದಾಹರಣೆಗೆ: 'ಏಷ ಸರ್ವೇಷು ಭೂತೇಷು ೂಢೋಽಽತ್ಮಾ ನ ಪ್ರಕಾಶತೇ । ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ೂಕ್ಷ್ಮದರ್ಶಿಭಿಃ ॥', 'ಎಲ್ಲ ಜೀವಿಗಳಲ್ಲಿಯೂ ಹುದುಗಿರುವ ಈ ಆತ್ಮನು ಪ್ರಕಟ ಾಗುವುದಿಲ್ಲ. ಆದರೆ ಸೂಕ್ಷ್ಮದರ್ಶಿಗಳು ಏಕಾಗ್ರವಾದ ಸೂಕ್ಷ್ಮವಾದ ಬುದ್ಧಿಯಿಂದ ತ್ಮನನ್ನು) ಕಾಣುತ್ತಾರೆ' (ಕ.ಉ. ೩.೧೨); 'ಮನಸೈವೇದಮಾಪ್ತವ್ಯಮ್', ದು ಮನಸ್ಸಿನಿಂದಲೇ ಹೊಂದಲ್ಪಡತಕ್ಕದ್ದು' (ಕ.ಉ. ೪.೦೧); 'ಧಾತುಪ್ರಸಾದಾ ಹಿಮಾನಮಾತ್ಮನಃ' (ಕ.ಉ. ೨.೨೦); 'ಅಧ್ಯಾತ್ಮಯೋಗಾಧಿಗಮೇನ ದೇವಂ ತ್ವಾ ಧೀರೋ ಹರ್ಷಶೋಕೌ ಜಹಾತಿ', 'ಅಧ್ಯಾತ್ಮಯೋಗಪ್ರಾಪ್ತಿಯಿಂದ ದೇವ ನ್ನರಿತುಕೊಂಡು ವಿವೇಕಿಯು ಹರ್ಷಶೋಕಗಳನ್ನು ಬಿಟ್ಟುಬಿಡುತ್ತಾನೆ' .ಉ. ೨.೧೨).

ಹಾಗೆಯೇ ಆತ್ಮನು ಮನಸ್ಸಿಗೆ ನಿಲುಕದವನು ಎಂಬ ವಾಕ್ಯಗಳೂ ಇವೆ; ಯತೋ ವಾಚೋ ನಿವರ್ತಂತೇ, ಅಪ್ರಾಪ್ಯ ಮನಸಾ ಸಹ', 'ಯಾವುದರಿಂದ ಾಕ್ಕುಗಳು ಮನಸ್ಸಿನೊಂದಿಗೆ (ಅದನ್ನು) ಹೊಂದಲಾರದೇ ಹಿಂತಿರುಗುವುವೋ' .ಉ. ೨.೪); 'ಅವಿಕಲ್ಪೋ ಹ್ಯಯಮಾತ್ಮಾ ಅವಾಙ್ಮನೋಗೋಚರತ್ವಾತ್', ಈ ಆತ್ಮನು ವಿಕಲ್ಪರಹಿತನು; ಏಕೆಂದರೆ ವಾಕ್ಕು-ಮನಸ್ಸುಗಳಿಗೆ ಅಗೋಚರನು' .ಉ.ತಾ. ೨).

ಈ ಶ್ರುತಿವಾಕ್ಯಗಳಿಗಿರುವ ಪರಸ್ಪರ ವಿರೋಧವನ್ನು ಹೋಗಲಾಡಿಸುವುದು ೇಗೆ? ಚಿತ್ತವು ಬಾಹ್ಯವಸ್ತುವಿನ ಆಕಾರವನ್ನು ತಳೆದು ವೃತ್ತಿರೂಪದಿಂದ ಪರಿಣತ ದಾಗ ಅದರಲ್ಲಿ ಆತ್ಮಚೈತನ್ಯವು ಪ್ರತಿಬಿಂಬಿಸಿ ಆ ವಸ್ತುವಿನ ಬಗ್ಗೆ ಇದ್ದ ಅಜ್ಞಾನ ನ್ನು ಹೋಗಲಾಡಿಸಿ ಜ್ಞಾನವನ್ನು ಉಂಟುಮಾಡುತ್ತದೆ. ಇಲ್ಲಿ, ಬಾಹ್ಯವಸ್ತುವು ತವಾದುದರಿಂದ ಇದು ಸಾಧ್ಯ. ಆದರೆ ಬ್ರಹ್ಮವಸ್ತುವಿನ ವಿಷಯದಲ್ಲಿ ಈ ಕ್ರಮ ಲ್ಪ ಬೇರೆಯಾಗುತ್ತದೆ. ಚಿತ್ತವು ಬ್ರಹ್ಮವಸ್ತುವನ್ನು ವ್ಯಾಪಿಸಬಲ್ಲದು. ಬ್ರಹ್ಮಾಕಾರ ತ್ತಿಯನ್ನುಂಟುಮಾಡಬಲ್ಲುದು. ಆದರೆ, ಬ್ರಹ್ಮವೇ ಸ್ವತಃ ಜ್ಞಾನಸ್ವರೂಪವಾದುದ ದ ಈ ಚಿತ್ತವೃತ್ತಿಯು ಅದರ ಬಗ್ಗೆ ಇದ್ದ ಅಜ್ಞಾನವನ್ನು ಹೋಗಲಾಡಿಸಬಲ್ಲುದೇ ಾ ಅದರಲ್ಲಿ ಪ್ರತಿಬಿಂಬಿತವಾದ ಆತ್ಮಚೈತನ್ಯದ ಮೂಲಕ ಜ್ಞಾನವನ್ನುಂಟು ಾಡಲಾರದು. ಮನಸ್ಸಿನಿಂದ ಆತ್ಮವಸ್ತುವನ್ನು ಅರಿಬಹುದು ಎಂದು ಹೇಳುವ ತಿವಾಕ್ಯಗಳು ಬ್ರಹ್ಮವನ್ನು ಚಿತ್ತವೃತ್ತಿಯು ವ್ಯಾಪಿಸಿ ಅದರ ಬಗ್ಗೆ ಇದ್ದ ಅಜ್ಞಾನ ನ್ನು ಕಳೆಯಬಹುದು ಎಂಬ ದೃಷ್ಟಿಯಿಂದ ಹೇಳಿದ್ದು, ಬ್ರಹ್ಮವು ಮನಸ್ಸಿಗೆ ಅತೀತ

ವೆಂಬ ವಾಕ್ಯಗಳು ಮನೋವೃತ್ತಿಯು ಬ್ರಹ್ಮಜ್ಞಾನವನ್ನು ಉಂಟುಮಾಡಲಾರದೆಂ
ದೃಷ್ಟಿಕೋಣದಿಂದ ಹೇಳಿದ್ದು, ಹೀಗೆ ಈ ವಿರೋಧವನ್ನು ಪರಿಹರಿಸಬಹುದು.

**ತದುಕ್ತಮ್—**

**'ಫಲವ್ಯಾಪ್ಯತ್ವಮೇವಾಸ್ಯ ಶಾಸ್ತ್ರಕೃದ್ಭಿರ್ನಿವಾರಿತಮ್ ।'**

**'ಬ್ರಹ್ಮಣ್ಯಜ್ಞಾನನಾಶಾಯ ವೃತ್ತಿವ್ಯಾಪ್ತಿರಪೇಕ್ಷಿತಾ ॥'**

**ಇತಿ (ಪಂಚದಶೀ ೭.೯೦, ೯೨) ॥೧೭೫॥**

೧೭೫. ಅದನ್ನು ಹೀಗೆ ಹೇಳಿದೆ: 'ಇದು[1] ಫಲದ ವ್ಯಾಪ್ತಿಗೆ ಒ
ಪಟ್ಟದೆಯೆಂಬುದನ್ನು ಮಾತ್ರ ಶಾಸ್ತ್ರಕಾರರು ನಿರಾಕರಿಸುತ್ತಾರೆ[2]; ಬ್ರಹ್ಮ
ವಿಷಯದಲ್ಲಿರುವ ಅಜ್ಞಾನದ ನಾಶಕ್ಕಾಗಿ (ಮಾತ್ರ) ವೃತ್ತಿವ್ಯಾಪ್ತಿಯು
ಅಪೇಕ್ಷಿತವಾಗಿದೆ' (ಪಂಚದಶೀ ೭.೯೦.೯೨).

1 ಬ್ರಹ್ಮಚೈತನ್ಯವು.

2 ಅಂತಃಕರಣದ ಅಥವಾ ಚಿತ್ತದ ವೃತ್ತಿಯು ಬ್ರಹ್ಮವನ್ನು ವ್ಯಾಪಿಸಬ
ದೆಂಬುದು.

**'ಸ್ವಯಂ ಪ್ರಕಾಶಮಾನತ್ವಾತ್ ನಾಭಾಸ ಉಪಯುಜ್ಯತೇ**
**ಇತಿ ಚ (ಪಂಚದಶೀ ೭.೯೨) ॥೧೭೬॥**

೧೭೬. ಮತ್ತು (ಹೀಗೂ ಹೇಳಿದೆ): 'ಸ್ವಯಂಪ್ರಕಾಶವಾಗಿರುವು
ರಿಂದ ಚಿದಾಭಾಸವು ಉಪಯುಕ್ತವಾಗುವುದಿಲ್ಲ' (ಪಂಚದಶೀ ೭.೯೨).

ಇತರ, ಜಡವಸ್ತುಗಳ, ಜ್ಞಾನವಾಗಬೇಕಾದರೆ ಚಿತ್ತವೃತ್ತಿಯೊಂದಿಗೆ ಅದರ
ಪ್ರತಿಫಲಿತವಾಗುವ ಚಿದಾಭಾಸನೂ ಬೇಕು. ಆದರೆ ಬ್ರಹ್ಮದ ಜ್ಞಾನವಾಗಬೇಕಾದ
ಬ್ರಹ್ಮವು ಸ್ವಯಂ ಪ್ರಕಾಶವಾದುದರಿಂದ, ಅದರ ಬಗ್ಗೆ ಇದ್ದ ಅಜ್ಞಾನವು ಹೋದ
ಸಾಕು, ಅದನ್ನು ಬೆಳಗಿ ತೋರಿಸಲು ಚಿದಾಭಾಸನ ಅವಶ್ಯಕತೆಯಿಲ್ಲ. ಗಡಿಗೆಯನ
ಅರಿಯಲು ಕಣ್ಣು ಮತ್ತು ದೀಪ ಎರಡೂ ಬೇಕು. ಆದರೆ ಗಡಿಗೆಯಲ್ಲಿ ಮುಚ್ಚಿ
ದೀಪವನ್ನು ಕಾಣಲು ಗಡಿಗೆಯನ್ನು ತೆಗೆದರೆ ಸಾಕು; ಮತ್ತೊಂದು ದೀಪವನ
ತರುವ ಆವಶ್ಯಕತೆಯಿಲ್ಲ.

**ಜಡ-ಪದಾರ್ಥ-ಆಕಾರ-ಕಾರಿತ-ಚಿತ್ತವೃತ್ತೇಃ ವಿಶೇಷಃ ಅಸ್ತಿ ||೧೭೭||**

೧೭೭. ಜಡಪದಾರ್ಥದ ಆಕಾರವನ್ನು ತಾಳಿರುವ ಚಿತ್ತವೃತ್ತಿಯ ವಿಷಯದಲ್ಲಿ ವಿಶೇಷವಿದೆ.

ಮುಂದಿನ ಕಂಡಿಕೆಯಲ್ಲಿ ಇದನ್ನು ವಿವರಿಸಿದೆ.

**ತಥಾಹಿ—'ಅಯಂ ಘಟಃ' ಇತಿ ಘಟಾಕಾರ-ಆಕಾರಿತ-ಚಿತ್ತವೃತ್ತಿಃ ಅಜ್ಞಾತಂ ಘಟಂ ವಿಷಯೀಕೃತ್ಯ ತದ್ಗತ-ಅಜ್ಞಾನ-ನಿರಸನ-ಪುರಸ್ಸರಂ-ಸ್ವಗತ-ಚಿದಾಭಾಸೇನ ಜಡಂ ಘಟಮಪಿ ಭಾಸಯತಿ ||೧೭೮||**

೧೭೮. ಹೇಗೆಂದರೆ—'ಇದು ಗಡಿಗೆ' ಎಂಬ, ಗಡಿಗೆಯ ಆಕಾರವನ್ನು ತಾಳಿರುವ ಚಿತ್ತವೃತ್ತಿಯು, (ಇದುವರೆವಿಗೂ) ಅರಿಯಲ್ಪಡದ ಗಡಿಗೆಯನ್ನು ವಿಷಯವಾಗಿ ಮಾಡಿಕೊಂಡು, ಅದರ ಬಗೆಗೆ ಇದ್ದ ಅಜ್ಞಾನವನ್ನು ಹೋಗಲಾಡಿಸುವುದರ ಮೂಲಕ ತನ್ನಲ್ಲಿರುವ ಚಿದಾಭಾಸದಿಂದ ಜಡವಾಗಿದ್ದರೂ(ಆ) ಗಡಿಗೆಯನ್ನು ಪ್ರಕಟಪಡಿಸುತ್ತದೆ.

**ತದುಕ್ತಮ್—**

**'ಬುದ್ಧಿ-ತತ್ಸ್ಥ-ಚಿದಾಭಾಸೌ ದ್ವಾವಪಿ ವ್ಯಾಪ್ನುತೋ ಘಟಮ್।**
**ತತ್ರಾಜ್ಞಾನಂ ಧಿಯಾ ನಶ್ಯೇದ್ ಆಭಾಸೇನ ಘಟಃ ಸ್ಫುರೇತ್ ||'**

**ಇದಿ (ಪಂಚದಶೀ ೭.೯೧) ||೧೭೯||**

೧೭೯. ಅದನ್ನು ಹೀಗೆ ಹೇಳಿದೆ: 'ಬುದ್ಧಿ ಮತ್ತು ಅದರಲ್ಲಿರುವ ಚಿದಾಭಾಸ—ಇವೆರಡೂ ಗಡಿಗೆಯನ್ನು ವ್ಯಾಪಿಸುತ್ತವೆ. ಅವೆರಡರಲ್ಲಿ ಬುದ್ಧಿ-ವೃತ್ತಿಯಿಂದ ಅಜ್ಞಾನವು ನಾಶವಾಗುವುದು. ಚಿದಾಭಾಸನಿಂದ ಗಡಿಗೆಯು ತೋರಿಕೊಳ್ಳುವುದು.' (ಪಂಚದಶೀ ೭.೯೧).

**ಯಥಾ ದೀಪ-ಪ್ರಭಾಮಂಡಲಮ್ ಅಂಧಕಾರಗತಂ ಘಟ-ಪಟಾದಿಕಂ ವಿಷಯೀಕೃತ್ಯ ತದ್ಗತ-ಅಂಧಕಾರ-ನಿರಸನ-ಪುರಸ್ಸರಂ ಸ್ವಪ್ರಭಯಾ ತದಪಿ ಭಾಸಯತಿ ಇತಿ ॥೧೮೧॥**

೧೮೦. ಹೇಗೆ ದೀಪದ ಬೆಳಕಿನ ಮಂಡಲವು ಕತ್ತಲಲ್ಲಿರುವ ಗಡಿಗೆ ಬಟ್ಟೆ ಮೊದಲಾದುವನ್ನು ವಿಷಯವಾಗಿ ಮಾಡಿಕೊಂಡು ಅವುಗಳಲ್ಲಿರುವ ಕತ್ತಲೆಯನ್ನು ಹೋಗಲಾಡಿಸುವುದರ ಮೂಲಕ ತನ್ನ ಬೆಳಕಿನಿಂದ ಆ ವಸ್ತುವನ್ನೂ ಪ್ರಕಟಪಡಿಸುವುದೋ ಹಾಗೆ ಎಂದರಿಯಬೇಕು.

### ಆತ್ಮಸಾಕ್ಷಾತ್ಕಾರದ ಸಾಧನಗಳು

### ಶ್ರವಣ

**ಏವಂಭೂತ-ಸ್ವರೂಪ-ಚೈತನ್ಯ-ಸಾಕ್ಷಾತ್ಕಾರ-ಪರ್ಯಂತಂ ಶ್ರವಣ-ಮನನ-ನಿದಿಧ್ಯಾಸನ-ಸಮಾಧಿ-ಅನುಷ್ಠಾನಸ್ಯ ಅಪೇಕ್ಷಿತತ್ವಾತ್ ತೇ ಅಪಿ ಪ್ರದರ್ಶ್ಯಂತೇ ॥೧೮೧॥**

೧೮೧. ಹೀಗಿರುವ ನಮ್ಮ ಸ್ವರೂಪವಾದ ಚೈತನ್ಯದ ಸಾಕ್ಷಾತ್ಕಾರವಾಗುವವರೆಗೆ ಶ್ರವಣ ಮನನ ನಿದಿಧ್ಯಾಸನ ಸಮಾಧಿ-ಇವುಗಳ ಅನುಷ್ಠಾನವು ಬೇಕಾಗಿರುವುದರಿಂದ ಅವುಗಳನ್ನೂ ತೋರಿಸಿಕೊಡಲಾಗುವುದು.

**ಶ್ರವಣಂ ನಾಮ ಷಡ್ವಿಧ-ಲಿಂಗೈಃ ಅಶೇಷ-ವೇದಾಂತಾನಾಮ್ ಅದ್ವಿತೀಯ-ವಸ್ತುನಿ ತಾತ್ಪರ್ಯ-ಅವಧಾರಣಮ್ ॥೧೮೨॥**

೧೮೨. ಶ್ರವಣವೆಂದರೆ ಆರು ವಿಧದ ಲಿಂಗಗಳ[1] ಮೂಲಕ ಎಲ್ಲ ವೇದಾಂತಗಳಿಗೂ[2] ಅದ್ವಿತೀಯ ವಸ್ತುವಾದ (ಬ್ರಹ್ಮದಲ್ಲಿ) ತಾತ್ಪರ್ಯವಿದೆ[3] ಎಂದು ನಿಶ್ಚಯಿಸುವುದು.

1 'ಲೀನಮ್ ಅರ್ಥಂ ಗಮಯತಿ ಇತಿ ಲಿಂಗಃ', 'ಹುದುಗಿರುವ ಅರ್ಥವನ್ನು ತಿಳಿಸಿಕೊಡುವುದರಿಂದ (ಇದಕ್ಕೆ) ಲಿಂಗವೆಂದು (ಹೆಸರು)'. ಗುರುತು, ಚಿಹ್ನೆ ಎಂದರ್ಥ. ಇದನ್ನು ಮುಂದಿನ ಕಂಡಿಕೆಗಳಲ್ಲಿ ವಿವರಿಸಿದೆ.

2 ವೇದಾಂತದ ಅಥವಾ ಉಪನಿಷತ್ತುಗಳ ವಾಕ್ಯಗಳಿಗೆ.

3 ತಾತ್ಪರ್ಯವೆಂದರೆ 'ಅದನ್ನೇ ಮುಖ್ಯವಾಗಿ ಹೇಳುವುದು' ಎಂದರ್ಥ.

ಶ್ರವಣವೆಂದರೆ ಸುಮ್ಮನೆ ಉಪನಿಷದ್ವಾಕ್ಯಗಳನ್ನು ಕಿವಿಗಳಿಂದ ಕೇಳುವುದು ಎಂದರ್ಥವಲ್ಲ. ಅದನ್ನು ಯುಕ್ತಿಯುಕ್ತವಾಗಿ ವಿಚಾರಮಾಡಿ ಅರ್ಥವನ್ನು ಮೇಲೆ ಹೇಳಿದಂತೆ ನಿಶ್ಚಯಿಸುವುದು.

**ಲಿಂಗಾನಿ ತು ಉಪಕ್ರಮ-ಉಪಸಂಹಾರ-ಅಭ್ಯಾಸ-ಅಪೂರ್ವತಾ-ಫಲ-ಅರ್ಥವಾದ-ಉಪಪತ್ತಿ-ಆಖ್ಯಾನಿ ॥೧೮೩॥**

೧೮೩. ಲಿಂಗಗಳೆಂದರೆ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ (ಮತ್ತು) ಉಪಪತ್ತಿ ಎಂಬ ಹೆಸರುಳ್ಳವು.

ಉಪಕ್ರಮ-ಉಪಸಂಹಾರಗಳೆರಡೂ ಕೂಡಿ ಒಂದೇ ಲಿಂಗವೆಂದು ಪರಿಗಣಿಸಲಾಗಿದೆ. ವೇದಾಂತವಾಕ್ಯದ ತಾತ್ಪರ್ಯವನ್ನು ನಿರ್ಧರಿಸುವಾಗ ಈ ಆರನ್ನೂ ಅನ್ವಯಿಸಬೇಕು.

**ತದುಕ್ತಮ್—**

**ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ ।**
**ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥೧೮೪॥**

೧೮೪. ಅದನ್ನು ಹೀಗೆ ಹೇಳಿದೆ: 'ತಾತ್ಪರ್ಯವನ್ನು ನಿರ್ಣಯಿಸುವುದರಲ್ಲಿ ಉಪಕ್ರಮ ಉಪಸಂಹಾರ ಅಭ್ಯಾಸ ಅಪೂರ್ವತೆ ಫಲ ಅರ್ಥವಾದ ಮತ್ತು ಉಪಪತ್ತಿ ಇವು ಲಿಂಗ.'

**ಪ್ರಕರಣ-ಪ್ರತಿಪಾದ್ಯಸ್ಯ ಅರ್ಥಸ್ಯ ತದಾದ್ಯಂತಯೋಃ ಉಪಪಾದನಮ್ ಉಪಕ್ರಮ-ಉಪಸಂಹಾರೌ । ಯಥಾ ಛಾಂದೋಗ್ಯೇ ಷಷ್ಠಾಧ್ಯಾಯೇ ಪ್ರಕರಣ-ಪ್ರತಿಪಾದ್ಯಸ್ಯ ಅದ್ವಿತೀಯವಸ್ತುನಃ, 'ಏಕಮೇವಾದ್ವಿತೀಯಮ್' (೬.೨.೧) ಇತ್ಯಾದೌ, 'ಐತದಾತ್ಮ್ಯಮಿದಂ ಸರ್ವಮ್' (೬.೮.೭) ಇತಿ ಅಂತೇ ಚ ಪ್ರತಿಪಾದನಮ್ ॥೧೮೫॥**

೧೮೫. ಉಪಕ್ರಮ-ಉಪಸಂಹಾರಗಳೆಂದರೆ : ಪ್ರಕರಣದಲ್ಲಿ ಪ್ರತಿಪಾದಿಸುವ ಅರ್ಥವನ್ನು ಅದರ ಪ್ರಾರಂಭದಲ್ಲೂ ಕಡೆಯಲ್ಲೂ ಹೇಳುವುದು. (ಇದು) ಹೇಗೆಂದರೆ: ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಪ್ರಕರಣದ (ವಿಷಯವಾಗಿ) ನಿರೂಪಿಸಿರುವ ಅದ್ವಿತೀಯ ಬ್ರಹ್ಮವಸ್ತುವನ್ನು ಪ್ರಾರಂಭದಲ್ಲಿ, ‘ ಏಕವೂ ಅದ್ವಿತೀಯವೂ (ಆದದ್ದು) ’ (೬.೨.೧) ಎಂದೂ, ‘ ಇದೆಲ್ಲವೂ ಅದನ್ನೇ ಆತ್ಮವಾಗಿ ಹೊಂದಿದೆ ’ (೬.೮.೭) ಎಂದು ಕಡೆಯಲ್ಲಿಯೂ ಹೇಳಿರುವುದು.

**ಪ್ರಕರಣ-ಪ್ರತಿಪಾದ್ಯಸ್ಯ ವಸ್ತುನಃ ತನ್ಮಧ್ಯೇ ಪೌನಃಪುನ್ಯೇನ ಪ್ರತಿಪಾದನಮ್ ಅಭ್ಯಾಸಃ । ಯಥಾ ತತ್ರ ಏವ ಅದ್ವಿತೀಯವಸ್ತುನಿ ಮಧ್ಯೇ ‘ ತತ್ತ್ವಮಸಿ ’ ಇತಿ ನವಕೃತ್ವಃ ಪ್ರತಿಪಾದನಮ್ ॥೧೮೬॥**

೧೮೬. ಅಭ್ಯಾಸವೆಂದರೆ ಪ್ರಕರಣದಲ್ಲಿ ನಿರೂಪಿಸಿರುವ ವಸ್ತುವನ್ನು ಕುರಿತು ಆ ಪ್ರಕರಣದ ನಡುವೆಯೇ ಮತ್ತೆ ಮತ್ತೆ ಅದನ್ನು ಪ್ರತಿಪಾದಿಸುವುದು. ಉದಾಹರಣೆಗೆ : ಅಲ್ಲಿಯೇ, ಆ ಅದ್ವಿತೀಯ ಬ್ರಹ್ಮವಸ್ತುವಿನ (ವಿಷಯದಲ್ಲಿ), ನಡುವೆ, ‘ ಅದು ನೀನಾಗಿರುವೆ ’ ಎಂದು ಒಂಬತ್ತು ಸಲ ಪ್ರತಿಪಾದಿಸಿರುವುದು.

ಅಭ್ಯಾಸವೆಂದರೆ ಪುನರುಚ್ಚಾರಣೆ. ಇದನ್ನು ಪದಶಃ ಮಾಡಬಹುದು ಅಥವಾ ಅರ್ಥಶಃ ಮಾಡಬಹುದು. ತತ್ತ್ವಮಸಿ-ವಾಕ್ಯದ ವಿಷಯದಲ್ಲಿ ಪದಶಃ ಅಭ್ಯಾಸವನ್ನು ಮಾಡಿದೆ.

**ಪ್ರಕರಣ-ಪ್ರತಿಪಾದ್ಯಸ್ಯ ಅದ್ವಿತೀಯ-ವಸ್ತುನಃ ಪ್ರಮಾಣಾಂತರ-ಅವಿಷಯೀಕರಣಮ್ ಅಪೂರ್ವತಾ । ಯಥಾ ತತ್ರ ಏವ ಅದ್ವಿತೀಯ-ವಸ್ತುನಃ ಮಾನಾಂತರ-ಅವಿಷಯೀಕರಣಮ್ ॥೧೮೭॥**

೧೮೭. ಅಪೂರ್ವತೆಯೆಂದರೆ ಪ್ರಕರಣದಲ್ಲಿ ನಿರೂಪಿಸಿದ ಅದ್ವಿತೀಯ ಬ್ರಹ್ಮವಸ್ತುವು ಮತ್ತೊಂದು ಪ್ರಮಾಣಕ್ಕೆ ವಿಷಯವಾಗದಿರುವುದು. ಹೇಗೆಂದರೆ : ಅಲ್ಲಿಯೇ (ಆ) ಅದ್ವಿತೀಯ-ಬ್ರಹ್ಮ-ವಸ್ತುವು ಮತ್ತೊಂದು ಪ್ರಮಾಣದಿಂದ ತಿಳಿದುಬರದಿರುವುದು.

ಇತರ ಪ್ರಮಾಣಗಳಿಂದ ಗೊತ್ತಾಗದ, ಇತರ ಪ್ರಕರಣಗಳಲ್ಲಿ ಸಿಗದ, ವಿಷಯು ದ್ದರೆ ಅದು ಅಪೂರ್ವವೆನಿಸುತ್ತದೆ. ಉಪನಿಷತ್ತುಗಳನ್ನು ಹೊರತು ಮತ್ತಾವುದ ದಲೂ ನಮಗೆ ಪರಬ್ರಹ್ಮದ ಸ್ವರೂಪವು ತಿಳಿದುಬರುವುದಿಲ್ಲ.

**ಫಲಂ ತು ಪ್ರಕರಣ-ಪ್ರತಿಪಾದ್ಯಸ್ಯ ಆತ್ಮಜ್ಞಾನಸ್ಯ ತದನು- ಷ್ಠಾನಸ್ಯ ವಾ ತತ್ರ ತತ್ರ ಶ್ರೂಯಮಾಣಂ ಪ್ರಯೋಜನಮ್ । ಯಥಾ ತತ್ರ ' ಆಚಾರ್ಯವಾನ್ ಪುರುಷೋ ವೇದ, ತಸ್ಯ ತಾವ- ದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ '(೬.೧೪.೨) ತಿ ಅದ್ವಿತೀಯವಸ್ತು-ಜ್ಞಾನಸ್ಯ ತತ್ಪ್ರಾಪ್ತಿಃ ಪ್ರಯೋಜನಂ ಶ್ರೂಯತೇ ೧೮೮॥**

೧೮೮. ಫಲವೆಂದರೆ ಪ್ರಕರಣದಲ್ಲಿ ಪ್ರತಿಪಾದಿಸಲ್ಪಟ್ಟ ಆತ್ಮಜ್ಞಾನಕ್ಕೆ ಥವಾ ಅದರ ಅನುಷ್ಠಾನಕ್ಕೆ[1] ಅಲ್ಲಲ್ಲಿ ಹೇಳಿರುವ ಪ್ರಯೋಜನ, ಉದಾ ರಣೆಗೆ: ಅಲ್ಲಿ, ' ಆಚಾರ್ಯನನ್ನು ಪಡೆದ ಪುರುಷನೇ[2] ಅರಿತುಕೊಳ್ಳುತ್ತಾನೆ. ವನಿಗೆ ಎಲ್ಲಿಯವರೆಗೆ (ದೇಹದಿಂದ) ಮೋಕ್ಷವಾಗುವುದಿಲ್ಲವೋ ಅಲ್ಲಿಯವರೆಗೇ ಳಂಬ '[3] (೬.೧೪.೨) ಎಂದು ಅದ್ವಿತೀಯ ಬ್ರಹ-ವಸ್ತುವಿನ ಜ್ಞಾನಕ್ಕೆ[4] ವನ್ನು ಪಡೆಯುವುದೆಂಬ ಪ್ರಯೋಜನವನ್ನು ಹೇಳಿರುತ್ತದೆ.

1 ಶ್ರವಣಾದಿಗಳ ಅನುಷ್ಠಾನವಾಗಬಹುದು ಅಥವಾ ಕ್ರಮೇಣ ಆತ್ಮಜ್ಞಾನಕ್ಕೆ ದೊಯ್ಯುವ ಉಪಾಸನೆಗಳಾಗಬಹುದು.

2 ಆಚಾರ್ಯನಿಂದ ಪಡೆದರೆ ಮಾತ್ರ ವಿದ್ಯೆಯು ಪೂರ್ಣ ಫಲಕಾರಿಯಾಗುವುದು.

3 ಪ್ರಾರಬ್ಧಕರ್ಮವಶದಿಂದ ಉಂಟಾದ ದೇಹವಿರುವವರೆಗೆ ವಿಳಂಬ. ದೇಹ ದ್ದ ಮೇಲೆ ಮುಕ್ತಿಯು ಖಂಡಿತ.

4 ಇಲ್ಲಿ ಜ್ಞಾನವೆಂದರೆ ಅನುಭೂತಿ, ಅನುಭವ.

**ಪ್ರಕರಣ-ಪ್ರತಿಪಾದ್ಯಸ್ಯ ತತ್ರ ತತ್ರ ಪ್ರಶಂಸನಮ್ ಅರ್ಥವಾದಃ ಯಥಾ ತತ್ರೈವ ' ಉತ ತಮ್ ಆದೇಶಮ್ ಅಪ್ರಾಕ್ಷ್ಯಃ ಯೇನ ಶ್ರುತಂ ಶ್ರುತಂ ಭವತಿ, ಅಮತಂ ಮತಮ್, ಅವಿಜ್ಞಾತಂ**

**ವಿಜ್ಞಾತಮ್' (೬.೧.೩) ಇತಿ ಅದ್ವಿತೀಯ-ವಸ್ತು-ಪ್ರಶಂಸನಮ್ ||೧೮೯||**

೧೮೯. ಅರ್ಥವಾದವೆಂದರೆ ಪ್ರಕರಣದಲ್ಲಿ ಪ್ರತಿಪಾದಿಸಿರುವ (ವಿಷಯ ವನ್ನು) ಅಲ್ಲಲ್ಲಿಯೇ ಪ್ರಶಂಸನೆ ಮಾಡುವುದು. ಉದಾಹರಣೆಗೆ: ಅಲ್ಲಿಯೇ, 'ಯಾವುದರಿಂದ ಅಶ್ರುತವು ಶ್ರುತವಾಗುವುದೊ[1], ಅಮತವು ಮತವಾಗು ವುದೊ[2] ಆ ಆದೇಶವನ್ನು ಕೇಳಿದೆಯ ?' (೬.೧.೩) (ಎಂದು ಹೇಳಿರುತ್ತದೆ).

1 ಇದುವರೆಗೆ ಕೇಳಿರದ ವಿಷಯವನ್ನು ಕೇಳಿದಂತಾಗುವುದೊ.

2 ಇದುವರೆಗೆ ಅರಿತಿರದ ವಿಷಯುವನ್ನು ಅರಿತಂತಾಗುವುದೊ.

ಅರ್ಥವಾದವೆಂದರೆ ಹೊಗಳಿಕೆಯ ಮಾತು. ವೇದಗಳಲ್ಲಿ ಅರ್ಥವಾದಗಳನ್ನು ಅನೇಕ ಕಡೆ ಕಾಣುತ್ತೇವೆ. ಅವುಗಳ ಉದ್ದೇಶ, ವಿಧಿಸಿರುವ ಅಂಶಗಳನ್ನು ಹೊಗಳುವುದು ಅಥವಾ ನಿಷೇಧಿಸಿರುವ ಅಂಶಗಳನ್ನು ತೆಗಳುವುದು; ತನ್ಮೂಲಕ ಆಸ್ತಿಕನು ನಿಷಿದ್ಧವಾದುದನ್ನು ಬಿಟ್ಟು ವಿಹಿತವಾದುದನ್ನು ಸ್ವೀಕರಿಸುವುದು.

**ಪ್ರಕರಣ-ಪ್ರತಿಪಾದ್ಯ-ಅರ್ಥಸಾಧನೇ ತತ್ರ ತತ್ರ ಶ್ರೂಯ ಮಾಣಾ ಯುಕ್ತಿಃ ಉಪಪತ್ತಿಃ । ಯಥಾ ತತ್ರ, 'ಯಥಾ ಸೋಮ್ಯ, ಏಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್, ವಾಚಾರಂಭಣಂ ವಿಕಾರೋ ನಾಮಧೇಯಮ್, ಮೃತ್ತಿಕಾ ಇತ್ಯೇವ ಸತ್ಯಮ್ (೬.೧.೪) ಇತ್ಯಾದೌ ಅದ್ವಿತೀಯ-ವಸ್ತು-ಸಾಧನೇ ವಿಕಾರಸ್ಯ ವಾಚಾರಂಭಣ-ಮಾತ್ರತ್ವೇ ಯುಕ್ತಿಃ ಶ್ರೂಯತೇ ||೧೯೦||**

೧೯೦. ಉಪಪತ್ತಿ ಎಂದರೆ ಪ್ರಕರಣದಲ್ಲಿ ಪ್ರತಿಪಾದಿಸಿರುವ (ವಿಷಯದ) ಅರ್ಥವನ್ನು ಸಾಧಿಸಲು ಅಲ್ಲಲ್ಲಿ ಹೇಳಿರುವ (ತರ್ಕ ಅಥವಾ) ಯುಕ್ತಿ. ಅಥವಾ ಉದಾಹರಣೆಗೆ, ಅಲ್ಲಿ 'ಹೇಗೆ, ಸೋಮ್ಯನೆ, ಒಂದು ಮಣ್ಣು ಮುದ್ದೆಯಿಂದ ಮಣ್ಣಿನಿಂದ ಮಾಡಿದ್ದೆಲ್ಲ ತಿಳಿಯಲ್ಪಟ್ಟದ್ದಾಗುವುದೋ-(ಏಕೆಂದರೆ) ವಸ್ತುವಿನ ಪರಿಣಾಮವು ಮಾತನ್ನು ಅವಲಂಬಿಸಿರುವ ಕೇವಲ ಹೆಸರೇ....' (೬.೧.೪) ಇತ್ಯಾದಿ (ವಾಕ್ಯ)ದಲ್ಲಿ ಅದ್ವಿತೀಯ ಬ್ರಹ್ಮ-ವಸ್ತುವನ್ನು ಸಾಧಿಸುವುದರಲ್ಲಿ

ಕಾರವು (ಅಥವಾ ಪರಿಣಾಮವು) ಕೇವಲ ಹೆಸರೆಂಬ ವಿಷಯದಲ್ಲಿ ಯುಕ್ತಿ ನ್ನು ಹೇಳಿದೆ.

ದೃಷ್ಟಾಂತಸಹಿತವಾದ ತರ್ಕವೇ ಉಪಪತ್ತಿ. ಮಣ್ಣು ಕಾರಣವಸ್ತು. ಮಡಕೆ ಡಿಕೆ, ಶರಾವ ಇತ್ಯಾದಿಗಳೆಲ್ಲವೂ ಅದರ ಕಾರ್ಯ ಅಥವಾ ಪರಿಣಾಮ. ಮಡಿಕೆ ಡಿಕೆ ಮೊದಲಾದುವೆಲ್ಲ ನಿಜವಾಗಿ ಮಣ್ಣೇ. ಅವುಗಳ ನಾಮ (ಹೆಸರು) ಮತ್ತು ಪ (ಆಕಾರ) ತಾತ್ಕಾಲಿಕ, ಅಶಾಶ್ವತ. ಕಾರ್ಯವಸ್ತುಗಳಲ್ಲಿ ನಾವು ನಿಜವಾಗಿ ಯಬೇಕಾದದ್ದು ಕಾರಣವಸ್ತುವನ್ನೇ. ಹಾಗೆಯೇ ಈ ಜಗತ್ತಿನಲ್ಲಿ ಕಂಡುಬರುವ ಲ್ಲ ವಸ್ತುಗಳೂ ಮೂಲತಃ ಬ್ರಹ್ಮವಸ್ತುವೇ. ಅದೊಂದೇ ಸತ್ಯ. ನಾಮರೂಪಾತ್ಮಕ ದ ಈ ಜಗತ್ತು ಮಿಥ್ಯೆ. ಇದೇ ಛಾಂದೋಗ್ಯವಾಕ್ಯದ ಸಾರಾಂಶ.

### ಮನನ ಮತ್ತು ನಿದಿಧ್ಯಾಸನ

**ಮನನಂ ತು ಶ್ರುತಸ್ಯ ಅದ್ವಿತೀಯ-ವಸ್ತುನಃ ವೇದಾಂತ-ಅನು ಣ-ಯುಕ್ತಿಭಿಃ ಅನವರತಮ್ ಅನುಚಿಂತನಮ್ ॥೧೯೧॥**

೧೯೧. ಮನನವೆಂದರೆ (ವೇದಗಳಿಂದ ಮತ್ತು ಆಚಾರ್ಯನಿಂದ ಕೇಳಿದ) ದ್ವಿತೀಯ-ಬ್ರಹ್ಮ-ವಸ್ತುವನ್ನು ವೇದಾಂತಸಮ್ಮತವಾದ ಯುಕ್ತಿಗಳ ಮೂಲಕ ಂತರವಾಗಿ ಚಿಂತಿಸುವುದು.

ಮನನವೆಂದರೆ ಚಿಂತಿಸುವುದು, ಆಲೋಚಿಸುವುದು ಎಂದರ್ಥ. ಆದರೆ ಇಲ್ಲಿ ನನಶಬ್ದವನ್ನು ಪಾರಿಭಾಷಿಕವಾಗಿ ಬಳಸಿದೆ. ಇದರಲ್ಲಿ ಗಮನಿಸಬೇಕಾದ ಅಂಶಗಳು ೂರು: (೧) ಈ ಮನನಕ್ಕೆ ವಿಷಯವಾದದ್ದು ಶ್ರುತಿಯಿಂದ ಮತ್ತು ಆಚಾರ್ಯ ದ ಉಪದಿಷ್ಟವಾದ ಅದ್ವಿತೀಯ ಬ್ರಹ್ಮವಸ್ತು; (೨) ಷಡ್ವಿಧಲಿಂಗಗಳಿಂದ ನಿರ್ಣ ಸಿದ ಇದನ್ನು ಶ್ರುತಿಗಳಿಗೆ ವಿರುದ್ಧವಲ್ಲದ, ಶ್ರುತಿಗಳಿಗೆ ಅನುಗುಣವಾದ, ತರ್ಕದಿಂದ ಷಿಸಿಕೊಳ್ಳಬೇಕು. ಶ್ರುತಿಗಳಿಂದಲೇ ತಿಳಿಯಬೇಕಾದ ವಿಷಯಗಳಲ್ಲಿ ಪುರುಷ ದ್ಧಿಯನ್ನು ಅವಲಂಬಿಸಿರುವ ತರ್ಕಗಳ ಮೂಲಕ ನಿರ್ಣಯವು ಸಾಧ್ಯವಿಲ್ಲವೆಂಬು ನ್ನು 'ತರ್ಕಾಪ್ರತಿಷ್ಠಾನಾದ್ವಾ . . .' (ಬ್ರ.ಸೂ. ೨.೧.೧೧) ಎಂಬ ಸೂತ್ರದಲ್ಲಿ ತಿಪಾದಿಸಲಾಗಿದೆ. ಮನುವೂ ಕೂಡ, 'ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾ-ರೋಧಿನಾ । ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥ (ಮ.ಸ್ಮೃ.

೧೨-೧೦೬) 'ಋಷಿಗಳಿಂದ ಉಪದೇಶಿಸಲ್ಪಟ್ಟ ಧರ್ಮವನ್ನು ವೇದಶಾಸ್ತ್ರ ಗಳಿಗೆ ವಿರುದ್ಧವಲ್ಲದ ತರ್ಕದ ಮೂಲಕ ಅರಿತು ಯಾರು ಅನುಸಂಧಾನ ಮಾಡುವನೋ ಅವನೇ ಧರ್ಮವನ್ನು ಅರಿತವನು, ಮತ್ತೊಬ್ಬನಲ್ಲ' ಎಂದು ಹೇಳಿರು ತ್ತಾನೆ. ಇಲ್ಲಿ 'ಧರ್ಮ'ವೆಂಬುದು ಬ್ರಹ್ಮವನ್ನು ಸೂಚಿಸುತ್ತದೆ; (೩) ಚಿಂತನವನ್ನು ಅನವರತವಾಗಿ, ನಿರಂತರವಾಗಿ ಮಾಡಬೇಕು. ದಕ್ಷಸ್ಮೃತಿಯು ಸಂನ್ಯಾಸಿಯ ದಿನ ಚರಿಯ ಬಗ್ಗೆ ಹೇಳಿರುವ ಮಾತನ್ನು ಇಲ್ಲಿ ಸ್ಮರಿಸುವುದು ಉಚಿತ: 'ಆಸುಪ್ತೇರಾ ಮೃತೇಃ ಕಾಲಂ ನಯೇದ್ವೇದಾಂತಚಿಂತಯಾ। ದದ್ಯಾನ್ನಾವಸರಂ ಕಿಂಚಿತ್ ಕಾಮಾ ದೀನಾಂ ಮನಾಗಪಿ ॥', 'ನಿದ್ದೆಯು ಬರುವವರೆಗೆ, ಮರಣಪರ್ಯಂತ, ವೇದಾಂತ ಚಿಂತನೆಯಲ್ಲಿ ಕಾಲವನ್ನು ಕಳೆಯಬೇಕು. ಕಾಮಾದಿಗಳಿಗೆ ಸ್ವಲ್ಪವೂ ಅವಕಾಶವನ್ನು ಕೊಡಬಾರದು.'

**ವಿಜಾತೀಯ – ದೇಹಾದಿಪ್ರತ್ಯಯರಹಿತ – ಅದ್ವಿತೀಯವಸ್ತು – ಸಜಾತೀಯ-ಪ್ರತ್ಯಯ-ಪ್ರವಾಹಃ ನಿದಿಧ್ಯಾಸನಮ್ ॥೧೯೨॥**

೧೯೨. (ಪರಬ್ರಹ್ಮಕ್ಕಿಂತ) ಬೇರೆಯಾದ ದೇಹಾದಿಗಳ ಆಲೋಚನೆ ಯಿಲ್ಲದ, ಅದ್ವಿತೀಯಬ್ರಹ್ಮವಸ್ತುವಿಗೆ ಸದೃಶವಾದ ಆಲೋಚನೆಯ ಪ್ರವಾಹವೇ ನಿದಿಧ್ಯಾಸನ.

ನಿದಿಧ್ಯಾಸನವೆಂದರೆ ಧ್ಯಾನ. ಪತಂಜಲಿಗಳು ಧ್ಯಾನವನ್ನು 'ತತ್ರ ಪ್ರತ್ಯಯೈಕ ತಾನತಾ ಧ್ಯಾನಮ್'[2], '(ನಾಭಿಚಕ್ರಾದಿ) ಸ್ಥಾನಗಳಲ್ಲಿ (ಧ್ಯೇಯವಸ್ತುವನ್ನು ಕುರಿತ) ಜ್ಞಾನದ ಸದೃಶಪ್ರವಾಹವೇ ಧ್ಯಾನ' (ಯೋ. ಸೂ. ೩.೨) ಎಂದು ನಿರ್ವಚನ ಮಾಡಿರು ತ್ತಾರೆ. ಮುಂದುಮುಂದಿನ ಚಿತ್ತವೃತ್ತಿಯು ಹಿಂದಹಿಂದಿನದಕ್ಕೆ ಸದೃಶವಾಗಿದ್ದರೆ ಮಾತ್ರ ಅದು ಏಕತಾನವಾಗುತ್ತದೆ. ಇಂತಹ ರೀತಿಯಲ್ಲಿರುವ ಪ್ರವಾಹವಾಗಿ ಧ್ಯಾನ ವೆನ್ನಿಸಿಕೊಳ್ಳುತ್ತದೆ. ಈ ಧ್ಯಾನವು ನಿದಿಧ್ಯಾಸನವಾಗಬೇಕಾದರೆ ಚಿತ್ತವು ದೇಹ ಇಂದ್ರಿಯ ವಿಷಯ ವಸ್ತುಗಳು ಮೊದಲಾದ ಬ್ರಹ್ಮಭಿನ್ನವಸ್ತುಗಳನ್ನು ತ್ಯಜಿಸಿ ಕೇವಲ ಪರಬ್ರಹ್ಮನ ಆಕಾರವನ್ನು ಪಡೆದು ಸತತವಾಗಿ ಹರಿಯಬೇಕು.

### ಸವಿಕಲ್ಪಕ ಮತ್ತು ನಿರ್ವಿಕಲ್ಪಕ ಸಮಾಧಿಗಳು

**ಸಮಾಧಿಃ ದ್ವಿವಿಧಃ-ಸವಿಕಲ್ಪಕಃ ನಿರ್ವಿಕಲ್ಪಕಶ್ಚ ಇತಿ ॥೧೯೩॥**

೧೯೩. ಸಮಾಧಿಯು ಸವಿಕಲ್ಪಕ ಮತ್ತು ನಿರ್ವಿಕಲ್ಪಕ ಎಂದು ಎರಡು ಧ.

ಪತಂಜಲಿಗಳು (ಯೋ.ಸೂ. ೩.೩) ಸಮಾಧಿಯನ್ನು ಹೀಗೆ ವರ್ಣಿಸಿರುತ್ತಾರೆ: ತದೇವ ಅರ್ಥಮಾತ್ರ ನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ', 'ಆ ಧ್ಯಾನವೇ ೇವಲ ಧ್ಯೇಯವಸ್ತುವು ತೋರುತ್ತಿರುವಾಗ (ಮತ್ತು) ತನ್ನ ಸ್ವರೂಪವನ್ನು ಕಳೆದು ೂಂಡಂತೆ ಇರುವಾಗ ಸಮಾಧಿ (ಯೆನ್ನಿಸುವುದು).' ಧ್ಯಾನದ ಪರಿಪಕ್ವಾವಸ್ಥೆಯೇ ಮಾಧಿ. ಧ್ಯಾನದಲ್ಲಿ ತನ್ನ, ಧ್ಯೇಯವಸ್ತುವಿನ ಮತ್ತು ಧ್ಯಾನಕ್ರಮದ ಪರಿವೆಯಿರು ದೆ. ಸಮಾಧಿಯಲ್ಲಾದರೋ ತನ್ನ ಮತ್ತು ಧ್ಯಾನಕ್ರಮದ ಅರಿವು ಮರೆತಂತೆ, ್ಯೇಯವಸ್ತುವೊಂದೇ ಚಿತ್ರಪಟಲದಲ್ಲಿರುವಂತೆ, ಅನುಭವಕ್ಕೆ ಬರುವುದು.

**ತತ್ರ ಸವಿಕಲ್ಪಕೋ ನಾಮ ಜ್ಞಾತೃ-ಜ್ಞಾನಾದಿ-ವಿಕಲ್ಪಲಯ-ಅನಪೇಕ್ಷಯಾ ಅದ್ವಿತೀಯ-ವಸ್ತುನಿ ತದಾಕಾರ-ಆಕಾರಿತಾಯಾಃ ಚಿತ್ತವೃತ್ತೇಃ ಅವಸ್ಥಾನಮ್ ॥೧೯೪॥**

೧೯೪. ಅವುಗಳಲ್ಲಿ ಸವಿಕಲ್ಪಕವೆಂದರೆ ಜ್ಞಾತೃ ಜ್ಞಾನ ಮೊದಲಾದ ಕಲ್ಪಗಳ ಲಯವನ್ನು ಅಪೇಕ್ಷಿಸದೆ, ಅದ್ವಿತೀಯ-ಬ್ರಹ್ಮ-ವಸ್ತುವಿನಲ್ಲಿ, ಅದರ ಕಾರವನ್ನು ಹೊಂದಿರುವ ಚಿತ್ತವೃತ್ತಿಯು ನೆಲೆನಿಲ್ಲುವುದು.

ವಿಕಲ್ಪವೆಂದರೆ ವಿಭಾಗಗಳ ವಿಶೇಷ ಕಲ್ಪನೆ. ಸವಿಕಲ್ಪಕ ಸಮಾಧಿಯಲ್ಲಿ ಚಿತ್ತವು ರಿಯುವ ಕರ್ತೃವಾದ ತನ್ನ, ಮತ್ತು ಅರಿವಿನ, ಭಾವನೆಗಳ ಸಹಿತವಾಗಿಯೇ ದ್ವಿತೀಯ ಬ್ರಹ್ಮವಸ್ತುವಿನಲ್ಲಿ ನೆಲೆ ನಿಂತಿರುತ್ತದೆ. ಬ್ರಹ್ಮವಸ್ತುವು ಪ್ರಧಾನ, ಜ್ಞಾತೃಜ್ಞಾನಗಳು ಗೌಣ. ಆದ್ದರಿಂದ ತಾತ್ಕಾಲಿಕವಾಗಿ ಅವೆರಡೂ ಮರೆಯಲ್ಪಟ್ಟಂತೆ ರುತ್ತವೆ. ಆದರೆ ನಿಜವಾಗಿ ಲಯಹೊಂದಿರುವುದಿಲ್ಲ.

ಈ ಸಮಾಧಿಯನ್ನು ಸಂಪ್ರಜ್ಞಾತಸಮಾಧಿಯೆಂದೂ ಕರೆಯುವುದುಂಟು.

**ತದಾ ಮೃನ್ಮಯ-ಗಜಾದಿ-ಭಾನೇ ಅಪಿ ಮೃದ್ಭಾನವತ್ ದ್ವೈತ-ಭಾನೇ ಅಪಿ ಅದ್ವೈತಂ ವಸ್ತು ಭಾಸತೇ ॥೧೯೫॥**

೧೯೫. ಆಗ, ಮಣ್ಣಿನಿಂದ ಮಾಡಲ್ಪಟ್ಟ (ಬೊಂಬೆಯ) ಆನೆ ಮೊದ ಾದುವು ಕಂಡುಬರುತ್ತಿದ್ದರೂ (ಜೊತೆಜೊತೆಯಲ್ಲಿಯೇ) ಮಣ್ಣೂ ಕಂಡು

ಬರುವಂತೆ ದ್ವೈತಪ್ರಪಂಚವು ಕಂಡುಬರುತ್ತಿದ್ದರೂ (ಜೊತೆಯಲ್ಲಿಯೇ) ಅದ್ವೈತಬ್ರಹ್ಮವಸ್ತುವೂ ಕಂಡುಬರುತ್ತಿರುತ್ತದೆ.

ಮಣ್ಣಿನಿಂದ ಮಾಡಿದ ಆನೆಯನ್ನು ಕಂಡಾಗ ಬುದ್ಧಿವಂತನಾರೂ ಅದನ್ನೇ ನಿಜವಾದ ಆನೆಯೆಂದು ಭಾವಿಸುವುದಿಲ್ಲ. ಆನೆಯೆಂಬ ಹೆಸರು ಮತ್ತು ಆನೆಯೆಂಬ ಪ್ರಾಣಿಯ ಆಕಾರ ಅದಕ್ಕಿದ್ದರೂ ಈ ನಾಮ-ರೂಪಗಳು ವಾಚಾರಂಭಣ ಮಾತ್ರವೇ, ಅದು ನಿಜವಾಗಿ ಮಣ್ಣೇ ಎಂದು ಅರ್ಥವಾಗುತ್ತದೆ. ಹಾಗೆಯೇ ನಾಮರೂಪಾತ್ಮಕ ವಾದ ಜಗತ್ತಾಗಲಿ ಜ್ಞಾತೃ ಜ್ಞಾನ ಜ್ಞೇಯ ಎಂಬ ತ್ರಿಪುಟಿಯಾಗಲಿ ಕಂಡುಬರು ತ್ತಿದ್ದರೂ ಅದರೊಡನೆಯೇ ಬ್ರಹ್ಮವಸ್ತುವಿನ ಅನುಭವವೂ ಸಹ ಆಗುತ್ತಿರುತ್ತದೆ.

**ತದುಕ್ತಮ್—**

**'ದೃಶಿಸ್ವರೂಪಂ ಗಗನೋಪಮಂ ಪರಂ**
**ಸಕೃದ್ವಿಭಾತಂ ತ್ವಜಮೇಕಮಕ್ಷರಮ್ ।**
**ಅಲೇಪಕಂ ಸರ್ವಗತಂ ಯದದ್ವಯಂ**
**ತದೇವ ಚಾಹಂ ಸತತಂ ವಿಮುಕ್ತ ಓಮ್ ॥'**
**ಇತಿ (ಉ.ಸಾ.೧೦.೧) ॥೧೯೬॥**

೧೯೬. ಅದನ್ನು ಹೀಗೆ ಹೇಳಿದೆ: ಜ್ಞಾನಸ್ವರೂಪವೂ[1] ಆಕಾಶಸದೃಶವೂ[2] ಅತ್ಯುತ್ಕೃಷ್ಟವೂ ಒಮ್ಮೆಗೇ ಪ್ರಕಾಶಿಸುವುದೂ[3] ಜನ್ಮರಹಿತವೂ ಏಕವೂ[4] ಅವಿ ನಾಶಿಯೂ[5] ಲೇಪರಹಿತವೂ[6] ಸರ್ವಗತವೂ ಆದ ಯಾವ ಅದ್ವಯ-ಬ್ರಹ್ಮ-ವಸ್ತು ವಿರುವುದೋ ಅದೇ ನಾನು. (ಆದುದರಿಂದ ನಾನು) ಸದಾ ಮುಕ್ತನಾಗಿಯೇ[7] ಇದ್ದೇನೆ. ಓಮ್[8]'. (ಉ.ಸಾ.೧೦.೧)

1 ಅದು ದೃಕ್‌ಸ್ವರೂಪವೇ ಹೊರತು ದೃಶ್ಯಸ್ವರೂಪವಲ್ಲ. ದ್ರಷ್ಟಾರನು ಆತ್ಮನು, ಆದುದರಿಂದ ಜ್ಞಾನಸ್ವರೂಪನು.

2 ನಿರ್ಗುಣವೂ, ನಿರಾಕಾರವೂ, ಸರ್ವವ್ಯಾಪಿಯೂ ಆದ ಬ್ರಹ್ಮವಸ್ತುವಿಗೆ ಪ್ರಾಯಶಃ ಆಕಾಶವೊಂದೇ ಉಪಮೆ.

3 ಯಾವಾಗಲೂ ಸ್ಪಷ್ಟವಾಗಿ ಪ್ರಕಾಶಿಸುತ್ತಿರುವ, ಬ್ರಹ್ಮಜ್ಞಾನವು ಸ್ವಲ್ಪಸ್ವಲ್ಪ ವಾಗಿ ಉಂಟಾಗುವುದಿಲ್ಲ ಅಜ್ಞಾನವು ನಷ್ಟವಾದಾಗ ಒಮ್ಮೆಗೇ ಉಂಟಾಗುತ್ತದೆ, ಮೋಡವು ಚದರಿದಾಗ ಸೂರ್ಯನು ಪ್ರಕಾಶಿಸುವಂತೆ.

4 ತನಗೆ ಎರಡನೆಯದಿಲ್ಲದ.

5 ಜನ್ಮವಿಲ್ಲದ್ದರಿಂದ ನಾಶವೂ ಇಲ್ಲದ.

6 ಕರ್ಮದ ಅಥವಾ ಪುಣ್ಯಪಾಪಗಳ ಸಂಬಂಧವಿಲ್ಲದ.

7 ಬ್ರಹ್ಮಕ್ಕೆ ಎಂದಿಗೂ ಸಂಸಾರಬಂಧನವಿಲ್ಲ. ನಾನು ಬ್ರಹ್ಮವೇ ಆದುದರಿಂದ ನಗೂ ಎಂದಿಗೂ ಸಂಸಾರ ಬಂಧನವಿರಲಿಲ್ಲ. ಬಂಧನವೂ ಮಿಥ್ಯೆಯೇ.

8 ಓಂಕಾರವನ್ನು, ಅದು ಪರಬ್ರಹ್ಮನ ಪ್ರತೀಕವೆಂಬುದನ್ನೂ ಪರಬ್ರಹ್ಮದ ಪಾಸನೆಗೆ ಅದು ಸಾಧನವೆಂಬುದನ್ನೂ ಸೂಚಿಸಲು, ಪ್ರಯೋಗಿಸಿದೆ.

**ನಿರ್ವಿಕಲ್ಪಕಸ್ತು ಜ್ಞಾತೃ - ಜ್ಞಾನಾದಿ - ವಿಕಲ್ಪಲಯ - ಪೇಕ್ಷಯಾ ಅದ್ವಿತೀಯ-ವಸ್ತುನಿ ತದಾಕಾರ-ಆಕಾರಿತಾಯಾಃ ಚಿತ್ತವೃತ್ತೇಃ ಅತಿತರಾಮ್ ಏಕೀಭಾವೇನ ಅವಸ್ಥಾನಮ್ ॥೧೯೭॥**

೧೯೭. ನಿರ್ವಿಕಲ್ಪಕವಾದರೋ ಜ್ಞಾತೃ ಜ್ಞಾನ ಮೊದಲಾದ ವಿಕಲ್ಪಗಳ ಯವನ್ನು ಅಪೇಕ್ಷಿಸಿ, ಅದ್ವಿತೀಯಬ್ರಹ್ಮವಸ್ತುವಿನಲ್ಲಿ, ಅದರ ಆಕಾರವನ್ನು ಹೊಂದಿರುವ ಚಿತ್ತವೃತ್ತಿಯು ಅತ್ಯಂತವಾಗಿ ಏಕೀಭಾವದಿಂದ ನೆಲೆನಿಲ್ಲುವುದು.

ಇದನ್ನು ಅಸಂಪ್ರಜ್ಞಾತಸಮಾಧಿ ಎಂದೂ ಕರೆಯುತ್ತಾರೆ. ಇದರಲ್ಲಿ ಜ್ಞಾತೃ ೊದಲಾದ ಭೇದಗಳು ಕರಗಿಹೋಗಿರುತ್ತವೆ. ಬ್ರಹ್ಮವಸ್ತುವೊಂದೇ ಅನುಭವಕ್ಕೆ ರುತ್ತಿರುತ್ತದೆ.

**ತದಾ ತು ಜಲಾಕಾರ-ಕಾರಿತ-ಲವಣ-ಅನವಭಾಸೇನ ಜಲ- ಮಾತ್ರ-ಅವಭಾಸವತ್ ಅದ್ವಿತೀಯವಸ್ತು-ಆಕಾರ-ಆಕಾರಿತ-ಚಿತ್ತ- ವೃತ್ತಿ-ಅನವಭಾಸೇನ ಅದ್ವಿತೀಯ-ವಸ್ತುಮಾತ್ರಮ್ ಅವಭಾಸತೇ ॥೧೯೮॥**

೧೯೮. ಆಗಲಾದರೋ, ನೀರಿನ ಆಕಾರವನ್ನು ಪಡೆದಿರುವುದರಿಂದ ುಪ್ಪು ಕಾಣದೇ ಹೋಗಿ ನೀರು ಮಾತ್ರ ಕಾಣುವಂತೆ, ಅದ್ವಿತೀಯ-ಬ್ರಹ್ಮ-

ವಸ್ತುವಿನ ಆಕಾರವನ್ನು ಪಡೆದು ಚಿತ್ತವೃತ್ತಿಯು ಕಾಣದೆ ಹೋಗಿ ಅದ್ವಿತೀಯ-ಬ್ರಹ್ಮ-ವಸ್ತುವು ಮಾತ್ರವೇ ತೋರಿಕೊಳ್ಳುತ್ತದೆ.

ನಿರ್ವಿಕಲ್ಪಕ ಸಮಾಧಿಯಲ್ಲಿ ಬ್ರಹ್ಮದವರೆಗೆ ಕರೆದೊಯ್ದ ಚಿತ್ತವೃತ್ತಿಯು ಸ್ವತಃ ಅದೃಶ್ಯವಾಗಿ ಬ್ರಹ್ಮವೊಂದೇ ಉಳಿಯುತ್ತದೆ.

**ತತಶ್ಚ ಅಸ್ಯ ಸುಷುಪ್ತೇಶ್ಚ ಅಭೇದಶಂಕಾ ನ ಭವತಿ । ಉಭಯತ್ರ ವೃತ್ತಿ-ಅಭಾನೇ ಸಮಾನೇ ಅಪಿ ತತ್ಸದ್ಭಾವ-ಅಸದ್ಭಾವ-ಮಾತ್ರೇಣ ಅನಯೋಃ ಭೇದ-ಉಪಪತ್ತೇಃ ॥೧೯೯॥**

೧೯೯. ಆದುದರಿಂದ ಇದಕ್ಕೂ ಸುಷುಪ್ತಿಗೂ ಭೇದವಿಲ್ಲವೆಂಬ ಸಂಶಯವು ಉಂಟಾಗಲಾರದು. ಎರಡರಲ್ಲಿಯೂ ವೃತ್ತಿಯು ಕಂಡುಬರುತ್ತಿಲ್ಲವೆಂಬುದು ಸಮಾನವಾದರೂ ಅದು (ಒಂದರಲ್ಲಿ) ಇರುವುದು, (ಮತ್ತೊಂದರಲ್ಲಿ) ಇಲ್ಲ ಎಂಬ ಕಾರಣದಿಂದಲೇ ಇವೆರಡರ ಭೇದವು ಸಂಗತವಾಗುತ್ತದೆ.

ಸುಷುಪ್ತಿಯಲ್ಲಿಯೂ ಜ್ಞಾತೃ ಜ್ಞಾನ ಜ್ಞೇಯ ಎಂಬ ವಿಭಾಗಗಳಿರುವುದಿಲ್ಲ, ಚಿತ್ತವೃತ್ತಿಗಳಿರುವುದಿಲ್ಲ; ಆದುದರಿಂದ ಅದಕ್ಕೂ ನಿರ್ವಿಕಲ್ಪಕಸಮಾಧಿಗೂ ವ್ಯತ್ಯಾಸವೇನು? ಅದನ್ನೇ ಇಲ್ಲಿ ವಿವರಿಸುತ್ತಿರುವುದು.

ನಿರ್ವಿಕಲ್ಪಕಸಮಾಧಿಯಲ್ಲಿ ಚಿತ್ತವೃತ್ತಿಯು ಕಂಡುಬರದಿರುವುದಕ್ಕೆ ಕಾರಣ ಅದು ಬ್ರಹ್ಮಾಕಾರವನ್ನು ಪಡೆದಿರುವುದು. ಉಪ್ಪು ನೀರಿನಲ್ಲಿ ಕರಗಿರುವುದರಿಂದ ಕಾಣದಾದರೂ ಇದ್ದೇ ಇರುತ್ತದೆಯಲ್ಲವೆ? ಆದರೆ ಸುಷುಪ್ತಿಯಲ್ಲಿ ಚಿತ್ತವೃತ್ತಿಯು ಕಂಡುಬರದಿರುವುದಕ್ಕೆ ಅದಿಲ್ಲದಿರುವುದೇ ಕಾರಣ. ಗ್ರಹಿಸಲು ಯೋಗ್ಯವಾದ ಯಾವ ವಸ್ತುವೂ ಆ ಅವಸ್ಥೆಯಲ್ಲಿ ಇಲ್ಲದಿರುವುದರಿಂದ ಚಿತ್ತವು ತನ್ನ ಕಾರಣವಾದ ಅಜ್ಞಾನದಲ್ಲಿ ತಾತ್ಕಾಲಿಕವಾಗಿ ಲಯಹೊಂದಿರುತ್ತದೆ3

ಪತಂಜಲಿಯು ತನ್ನ ಯೋಗಸೂತ್ರಗಳಲ್ಲಿ (೧.೧೦) ಸುಷುಪ್ತಿಯಲ್ಲಿಯೂ ತಮಸ್ಸನ್ನು ಅವಲಂಬಿಸಿರುವ ಚಿತ್ತವೃತ್ತಿಗಳಿರುತ್ತವೆ ಎಂದು ಹೇಳಿರುವುದನ್ನು ಇಲ್ಲಿ ಗಮನಿಸಿ ವೇದಾಂತದ ಅಭಿಪ್ರಾಯದೊಂದಿಗೆ ಹೋಲಿಸಬಹುದು.

### ಯಮಾದಿ ಅಷ್ಟಾಂಗಗಳು

**ಅಸ್ಯ ಅಂಗಾನಿ ಯಮ-ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರ-ಧಾರಣಾ-ಧ್ಯಾನ-ಸಮಾಧಯಃ ॥೨೦೦॥**

೨೦೦ ಇದರ ಅಂಗಗಳಾವುವೆಂದರೆ: ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣಾ ಧ್ಯಾನ ಸಮಾಧಿಗಳು.

1 ನಿರ್ವಿಕಲ್ಪಕ ಸಮಾಧಿಗೆ ಕರೆದೊಯ್ಯುವ ಯೋಗಸೂತ್ರಗಳು ೨.೨೯ ನೋಡಿ.

**ತತ್ರ ' ಅಹಿಂಸಾ – ಸತ್ಯ–ಅಸ್ತೇಯ - ಬ್ರಹ್ಮಚರ್ಯ – ಅಪರಿಗ್ರಹಾಃ ಯಮಾಃ ' ॥೨೦೧॥**

೨೦೧. ಅವುಗಳಲ್ಲಿ 'ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹ–ಇವು ಯಮಗಳು'.

ಯೋಗಸೂತ್ರ ೨.೩೦ ನೋಡಿ. ಹಿಂಸೆಯೇ ಮೊದಲಾದ ನಿಷಿದ್ಧಕರ್ಮಗಳಿಂದ ಗಿಯನ್ನು ಯಮಿಸುವುದರಿಂದ, ನಿವರ್ತಿಸುವುದರಿಂದ, ಇವನ್ನು ಯಮ ಎಂದು ದಿದೆ.

ಕರ್ಮದಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಯಾರಿಗೂ ಯಾವಾಗಲೂ ಶವನ್ನುಂಟುಮಾಡದಿರುವುದು ಅಹಿಂಸೆ. ಪ್ರತ್ಯಕ್ಷ ಅನುಮಾನ ಮತ್ತು ಆಗಮ ಪ್ರಮಾಣಗಳಿಂದ ಅರಿತಿದ್ದನ್ನು ಇತರರಿಗೆ ತಿಳಿಸುವಾಗ ಮಾತು ಮನಸ್ಸುಗಳು ದಾಗುವಿಕೆಯೇ ಸತ್ಯ. ತನಗೆ ಸೇರದ ವಸ್ತುಗಳನ್ನು ತೆಗೆದುಕೊಳ್ಳುವುದು, ಶಾಸ್ತ್ರ ತವಲ್ಲದ ವಸ್ತುವನ್ನು ಶಾಸ್ತ್ರವು ವಿಧಿಸಿಲ್ಲದ ರೀತಿಯಲ್ಲಿ ಸ್ವೀಕರಿಸುವುದು—ಇವು ಯ ಅಥವಾ ಕಳ್ಳತನ; ಅದನ್ನು ಮಾಡದಿರುವುದು ಅಸ್ತೇಯ. ಕರ್ಮದಿಂದಲೂ, ತಿನಿಂದಲೂ, ಮನಸ್ಸಿನಿಂದಲೂ ಎಲ್ಲ ಜೀವಿಗಳ ವಿಷಯದಲ್ಲಿಯೂ ಮೈಥುನವನ್ನು ರ್ಜಿಸುವುದು ಬ್ರಹ್ಮಚರ್ಯ. ಸಮಾಧಿಯ ಅಭ್ಯಾಸಕ್ಕೆ ಉಪಯುಕ್ತವಲ್ಲದ ವಸ್ತುನ್ನು ಸ್ವೀಕಾರಮಾಡದಿರುವುದು ಅಪರಿಗ್ರಹ.

**' ಶೌಚ–ಸಂತೋಷ–ತಪಃ–ಸ್ವಾಧ್ಯಾಯ–ಈಶ್ವರಪ್ರಣಿಧಾನಾನಿ ನಿಯಮಾಃ ' ॥೨೦೨॥**

೨೦೨. ಶೌಚ ಸಂತೋಷ ತಪಸ್ಸು ಸ್ವಾಧ್ಯಾಯ ಈಶ್ವರಪ್ರಣಿಧಾನ—ವು ನಿಯಮಗಳು.

ಯೋಗಸೂತ್ರ ೨.೩೨ ನೋಡಿ. ಜನ್ಮಕಾರಣಗಳಾದ ಕಾಮ್ಯಕರ್ಮಗಳಿಂದ ರ್ತಿಸಿ ಮೋಕ್ಷಕಾರಣವಾದ ನಿಷ್ಕಾಮಧರ್ಮದಲ್ಲಿ ನಿಯಮಿಸುವುದರಿಂದ ಅಥವಾ ರಿಸುವುದರಿಂದ ಇವನ್ನು ನಿಯಮ ಎಂದು ಕರೆದಿದೆ.

ಸ್ನಾನಾದಿಗಳಿಂದ ದೇಹವನ್ನೂ ಭಾವಶುದ್ಧಿಯಿಂದ ಮನಸ್ಸನ್ನೂ ಶುಚಿಪಡಿಸುವುದೇ ಶೌಚ. ತಾನಾಗಿ ಸಿಕ್ಕಿದುದರಲ್ಲಿ ತೃಪ್ತಿಯನ್ನು ಪಡೆಯುವುದು ಸಂತೋಷ. ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸುವುದು ಉಪವಾಸ ಮಾಡುವುದು ಇತ್ಯಾದಿಗಳು ತಪಸ್ಸು. ಗೀತೆಯಲ್ಲಿ (೧೭.೧೪.೧೬) ಹೇಳಿರುವ ತ್ರಿವಿಧ ತಪಸ್ಸೂ ಆಗಬಹುದು. ಪ್ರಣವಜಪ, ಉಪನಿಷದ್‌ಗ್ರಂಥಪಠನ—ಇವೇ ಸ್ವಾಧ್ಯಾಯ. ಈಶ್ವರನನ್ನು ಕುರಿತ ಬಾಹ್ಯ ಮತ್ತು ಮಾನಸಿಕಪೂಜೆಯೇ ಈಶ್ವರ ಪ್ರಣಿಧಾನ.

**ಕರಚರಣಾದಿ – ಸಂಸ್ಥಾನವಿಶೇಷ – ಲಕ್ಷಣಾನಿ ಪದ್ಮ–ಸ್ವಸ್ತಿಕ–ಆದೀನಿ ಆಸನಾನಿ ॥೨೦೩॥**

೨೦೩. ಕೈ ಕಾಲು ಮೊದಲಾದ (ಅವಯವಗಳನ್ನು) ವಿಶೇಷರೀತಿಯಲ್ಲಿ ಇರಿಸಿಕೊಳ್ಳುವ ಲಕ್ಷಣಗಳನ್ನುಳ್ಳ ಪದ್ಮಾಸನ ಸ್ವಸ್ತಿಕಾಸನ ಮೊದಲಾದುವೇ ಆಸನಗಳು.

ಪತಂಜಲಿಗಳು 'ಸ್ಥಿರಸುಖಮ್ ಆಸನಮ್' (ಯೋ.ಸೂ. ೨.೪೬) ಎಂದಷ್ಟೇ ಹೇಳಿರುತ್ತಾರೆ. ಯಾವ ಅಂಗವಿನ್ಯಾಸದಲ್ಲಿ ಸ್ಥಿರವಾಗಿ ಸುಖವಾಗಿ ಬಹುಕಾಲ ಬ್ರಹ್ಮ ಚಿಂತನವನ್ನು ಮಾಡಬಹುದೋ ಅದೇ 'ಆಸನ'. ಧ್ಯಾನಕ್ಕೆ ಅನುಕೂಲವಾದ ಆಸನಗಳನ್ನು ಇಲ್ಲಿ ಗ್ರಹಿಸಬೇಕು. ಪದ್ಮಾಸನ-ಸ್ವಸ್ತಿಕಾಸನಗಳಲ್ಲದೇ ಭದ್ರಾಸನ–ವೀರಾಸನಗಳನ್ನೂ ಅಭ್ಯಸಿಸಬಹುದು.

**ರೇಚಕ-ಪೂರಕ-ಕುಂಭಕ-ಲಕ್ಷಣಾಃ ಪ್ರಾಣನಿಗ್ರಹ-ಉಪಾಯಾಃ ಪ್ರಾಣಾಯಾಮಾಃ ।೨೦೪॥**

೨೦೪. ಪ್ರಾಣಾಯಾಮಗಳೆಂದರೆ ರೇಚಕ[1] ಪೂರಕ[2] ಕುಂಭಕ[3] ಎಂಬ ಲಕ್ಷಣಗಳನ್ನುಳ್ಳ, ಪ್ರಾಣಶಕ್ತಿಯನ್ನು ನಿಗ್ರಹಿಸುವ, ಉಪಾಯಗಳು.

1 ಉಸಿರನ್ನು ಬಿಡುವುದು.

2 ಉಸಿರನ್ನು ತೆಗೆದುಕೊಳ್ಳುವುದು.

3 ಉಸಿರನ್ನು ಕಟ್ಟುವುದು.

ಮನಸ್ಸಿನ ಪ್ರಕ್ಷೋಭೆ-ಶಾಂತಿಗಳಿಗೂ ಉಸಿರಾಟದ ವಿಷಮ-ಸಮ-ಸ್ಥಿತಿಗಳಿಗೂ ನಿಕಟಸಂಬಂಧವಿರುವುದು ನಮ್ಮ ಅನುಭವಕ್ಕೆ ಬಂದಿರುವ ವಿಷಯ. ಉಸಿರಿನ ನಿಯಂತ್ರಣದ ಮೂಲಕ ಮನೋನಿಯಂತ್ರಣವು ಪ್ರಾಣಾಯಾಮದ ಮೂಲತತ್ತ್ವ. ಪೂರಕ-ಕುಂಭಕ-ರೇಚಕಗಳು ೧೬ : ೬೪ : ೩೨ ಎಂಬ ಕಾಲ ಪ್ರಮಾಣದಲ್ಲಿರಬೇಕು.

ಹಠಯೋಗ ಗ್ರಂಥಗಳಲ್ಲಿ ಆಸನಪ್ರಾಣಾಯಾಮಗಳನ್ನು ವಿಸ್ತಾರವಾಗಿ ವಿವರಿಸಿದೆ.

**ಇಂದ್ರಿಯಾಣಾಂ ಸ್ವ-ಸ್ವ-ವಿಷಯೇಭ್ಯಃ ಪ್ರತ್ಯಾಹರಣಂ ಪ್ರತ್ಯಾಹಾರಃ ||೨೦೫||**

೨೦೫. ಇಂದ್ರಿಯಗಳನ್ನು ತಮ್ಮ ತಮ್ಮ ವಿಷಯಗಳಿಂದ ಹಿಂದಿರುಗಿಸುವುದೇ ಪ್ರತ್ಯಾಹಾರ.

ಯೋ. ಸೂ. ೨.೫೪ನ್ನು ನೋಡಿ.

ಜೇನುಹುಳುಗಳು ತಮ್ಮ ರಾಣಿಯನ್ನು ಅನುಸರಿಸಿ ಗೂಡಿನಿಂದ ಹೊರಹಾರುವಂತೆ ಅಥವಾ ಗೂಡಿನೊಳಕ್ಕೆ ಪ್ರವೇಶಿಸುವಂತೆ ಇಂದ್ರಿಯಗಳು ಕೂಡ ಮನಸ್ಸನ್ನು ಅನುಸರಿಸಿ ವಿಷಯವಸ್ತುಗಳೊಡನೆ ಸಂಪರ್ಕಹೊಂದುತ್ತವೆ. ಅದು ಹಿಂದಿರುಗಿದಾಗ ತಾವೂ ಹಿಂದಿರುಗುತ್ತವೆ. ಇಂದ್ರಿಯಗಳ ಮೂಲಕ ಹೊರಕ್ಕೆ ಹರಿದುಹೋಗುತ್ತಿರುವ ಮನಸ್ಸನ್ನು ಹಿಂದಿರುಗಿಸಿ ಆತ್ಮವಸ್ತುವಿನಲ್ಲಿ ನಿಲ್ಲಿಸುವುದೇ ಪ್ರತ್ಯಾಹಾರ. ಈ ಅವಸ್ಥೆಯಲ್ಲಿ ಇಂದ್ರಿಯಗಳು ಕೂಡ ಹಿಂದಿರುಗಿ ಮನಸ್ಸಿನಲ್ಲಿ ಲೀನವಾಗಿರುತ್ತವೆ.

**ಅದ್ವಿತೀಯ-ವಸ್ತುನಿ ಅಂತರಿಂದ್ರಿಯ-ಧಾರಣಂ ಧಾರಣಾ ||೨೦೬||**

೨೦೬. ಅಂತಃಕರಣವನ್ನು ಅದ್ವಿತೀಯ-ಬ್ರಹ್ಮ-ವಸ್ತುವಿನಲ್ಲಿ ಹಿಡಿದು ನಿಲ್ಲಿಸುವುದೇ ಧಾರಣೆ.

**ತತ್ರ ಅದ್ವಿತೀಯ-ವಸ್ತುನಿ ವಿಚ್ಛಿದ್ಯ ವಿಚ್ಛಿದ್ಯ ಅಂತರಿಂದ್ರಿಯ-ವೃತ್ತಿ-ಪ್ರವಾಹಃ ಧ್ಯಾನಮ್ ||೨೧೭||**

೨೦೭. ಆ ಅದ್ವಿತೀಯಬ್ರಹ್ಮವಸ್ತುವಿನಲ್ಲಿ ಚಿತ್ತವೃತ್ತಿಯನ್ನು ತಡೆದು ತಡೆದು ಹರಿಯಿಸುವುದೇ ಧ್ಯಾನ.

ಏಕಾಗ್ರತಾಶಕ್ತಿಯು ಇನ್ನೂ ಬೆಳೆಯದಿರುವುದರಿಂದ ಚಿತ್ತವೃತ್ತಿಯು ಅಡೆತಡೆಯಿಲ್ಲದೆ ನಿರಂತರವಾಗಿ ಹರಿಯಲಾರದು. ಅದು ನಿರಂತರವಾಗಿ ಹರಿದಾಗ ಸಮಾಧಿಯಾಗುತ್ತದೆ.

**ಸಮಾಧಿಸ್ತು ಉಕ್ತಃ ಸವಿಕಲ್ಪಕಃ ಏವ ॥೨೦೮॥**

೨೦೮. ಹಿಂದೆ ಹೇಳಿದ ಸವಿಕಲ್ಪಕವೇ ಸಮಾಧಿ.

ಕಂಡಿಕೆ ೧೯೪, ೧೯೫ ನೋಡಿ.

### ಸಮಾಧಿಯ ವಿಘ್ನಗಳು ಮತ್ತು ಪರಿಹಾರ

**ಏವಮ್ ಅಸ್ಯ ಅಂಗಿನಃ ನಿರ್ವಿಕಲ್ಪಕಸ್ಯ ಲಯ-ವಿಕ್ಷೇಪ-ಕಷಾಯ-ರಸಾಸ್ವಾದ-ಲಕ್ಷಣಾಃ ಚತ್ವಾರಃ ವಿಘ್ನಾಃ ಸಂಭವಂತಿ ॥೨೦೯॥**

೨೦೯. ಹೀಗೆ ಇದನ್ನು[1] ಅಂಗವಾಗಿ ಹೊಂದಿರುವ ನಿರ್ವಿಕಲ್ಪಕ ಸಮಾಧಿಗೆ ಲಯ ವಿಕ್ಷೇಪ ಕಷಾಯ ಮತ್ತು ರಸಾಸ್ವಾದ ಎಂಬ[2] ಲಕ್ಷಣಗಳುಳ್ಳ ನಾಲ್ಕು ವಿಘ್ನಗಳು ಸಂಭವಿಸುತ್ತವೆ.

1 ಯಮಾದಿ ಎಂಟನ್ನು.

2 ಇವನ್ನು ಮುಂದಿನ ಕಂಡಿಕೆಗಳಲ್ಲಿ ವಿವರಿಸಿರುತ್ತದೆ.

**ಲಯಃ ತಾವತ್ ಅಖಂಡವಸ್ತು-ಅನವಲಂಬೇನ ಚಿತ್ತವೃತ್ತೇಃ ನಿದ್ರಾ ॥೨೧೦॥**

೨೧೦. ಮೊದಲನೆಯದಾಗಿ, ಲಯವೆಂದರೆ ಅಖಂಡ-ಬ್ರಹ್ಮವಸ್ತುವನ್ನು ಅವಲಂಬಿಸಲಾಗದೆ ಚಿತ್ತವೃತ್ತಿಯು ನಿದ್ರೆಯನ್ನು (ಹೊಂದುವುದು).

ಶಬ್ದಾದಿವಿಷಯಗಳಿಂದ ಹಿಂತೆಗೆಯಲ್ಪಟ್ಟ ಚಿತ್ತವು ಅಖಂಡಬ್ರಹ್ಮವಸ್ತುವನ್ನು ಅವಲಂಬಿಸಲು–ಸೋಮಾರಿತನದಿಂದಾಗಲಿ, ಪ್ರಯತ್ನದಿಂದಾಗಲಿ ಶ್ರಮದಿಂದಾಗಲಿ–ಅಸಮರ್ಥವಾದಾಗ ನಿದ್ರೆಯನ್ನು ಹೊಂದುತ್ತದೆ. ಇದೇ ‘ಲಯ’.

**ಅಖಂಡವಸ್ತು ಅನವಲಂಬೇನ ಚಿತ್ತವೃತ್ತೇಃ ಅನ್ಯಾವಲಂಬನಂ ಕ್ಷೇಪಃ ॥೨೧೧॥**

೨೧೧. ಅಖಂಡ–ಬ್ರಹ್ಮ–ವಸ್ತುವನ್ನು ಅವಲಂಬಿಸಲಾಗದೆ ಚಿತ್ತ ೃತ್ತಿಯು ಇತರ (ವಸ್ತುಗಳನ್ನು) ಅವಲಂಬಿಸುವುದು ವಿಕ್ಷೇಪ.

ಬ್ರಹ್ಮವನ್ನು ಚಿಂತಿಸಲಾಗದ ಚಿತ್ತವು ಮತ್ತೆ ಬಾಹ್ಯ ವಿಷಯವಸ್ತುಗಳ ಕಡೆಗೆ ಡುವುದೇ ' ವಿಕ್ಷೇಪ '.

**ಲಯ–ವಿಕ್ಷೇಪ–ಅಭಾವೇ ಅಪಿ ಚಿತ್ತವೃತ್ತೇಃ ರಾಗಾದಿ ಾಸನಯಾ ಸ್ತಬ್ಧೀಭಾವಾತ್ ಅಖಂಡ-ವಸ್ತು-ಅನವಲಂಬನಂ ಷಾಯಃ ॥೨೧೨॥**

೨೧೨. ಲಯವಿಕ್ಷೇಪಗಳಿಲ್ಲದಿದ್ದರೂ ಕೂಡ ಚಿತ್ತವೃತ್ತಿಯು ರಾಗಾದಿಗಳ ಂಸ್ಕಾರದ ಫಲವಾಗಿ ಸ್ತಬ್ಧವಾಗುವುದರ ಮೂಲಕ ಅಖಂಡ–ಬ್ರಹ್ಮ–ವಸ್ತು ನ್ನು ಅವಲಂಬಿಸದಿರುವುದು ಕಷಾಯ.

ಲಯವಿಕ್ಷೇಪಗಳನ್ನು ಗೆಲ್ಲುವಷ್ಟು ಮುಂದೆ ಹೋಗಿದ್ದರೂ ಸಾಧಕನು ಕಷಾಯ ' ಕ್ಕೊಳಗಾಗಬಹುದು. ಹೊರಗಣ ವಿಷಯವಸ್ತುಗಳಿಂದ ಅಥವಾ ಳಗಣ ಮನೋರಥಗಳಿಂದ ಉಂಟಾದ ರಾಗಾದಿ ಸಂಸ್ಕಾರಗಳು ಈ ದಶೆಯಲ್ಲಿ ದ್ಬುದ್ಧವಾಗಿ ಮುನ್ನಡೆಯನ್ನು ತಡೆಯಬಹುದು ; ರಾಜನನ್ನು ನೋಡಲು ಮನೆ ಂದ ಹೊರಟು ಬಂದಿರುವವನು ಅರಮನೆಯೊಳಕ್ಕೆ ಪ್ರವೇಶಿಸಿದ ಮೇಲೆ ದ್ವಾರ ಾಲಕನಿಂದ ತಡೆಯಲ್ಪಟ್ಟು ನಿಂತಹಾಗೆ !

**ಅಖಂಡವಸ್ತು–ಅನವಲಂಬನೇನ ಅಪಿ ಚಿತ್ತವೃತ್ತೇಃ ಸವಿ ಲ್ಪಕ–ಆನಂದ–ಆಸ್ವಾದನಂ ರಸಾಸ್ವಾದಃ । ಸಮಾಧಿ–ಆರಂಭೆ– ಮಯೋಃ ಸವಿಕಲ್ಪಕ–ಆನಂದ–ಆಸ್ವಾದನಂ ವಾ ॥೨೧೩॥**

೨೧೩. ಅಖಂಡ-ಬ್ರಹ್ಮ-ವಸ್ತುವನ್ನು ಅವಲಂಬಿಸದಿದ್ದರೂ ಕೂಡ ಚಿತ್ತ ತ್ತಿಯು ಸವಿಕಲ್ಪಕ ಸಮಾಧಿಯ ಆನಂದವನ್ನು ರುಚಿ ನೋಡುವುದು ರಸಾ ್ವಾದ. ಅಥವಾ (ನಿರ್ವಿಕಲ್ಪಕ) ಸಮಾಧಿಯ ಪ್ರಾರಂಭದಲ್ಲಿ ಸವಿಕಲ್ಪಕ ಸಮಾಧಿಯ) ಆನಂದವನ್ನು ರುಚಿ ನೋಡುವುದು.

ಸವಿಕಲ್ಪಕ ಸಮಾಧಿಯ ಆನಂದವನ್ನನುಭವಿಸಿದಮೇಲೆ, ಅದಕ್ಕಿಂತ ಉತ್ಕೃಷ್ಟವಾದ ಬ್ರಹ್ಮಾನಂದವನ್ನು ಕೊಡುವ ನಿರ್ವಿಕಲ್ಪಕ ಸಮಾಧಿಯನ್ನು ಪಡೆಯಲು ಪ್ರಯತ್ನಿಸಿ, ಅದು ಸಾಧ್ಯವಾಗದ್ದರಿಂದ ಮತ್ತೆ ಸವಿಕಲ್ಪಕದ ರುಚಿಯನ್ನು ನೋಡುವುದು 'ರಸಾಸ್ವಾದ'. ಅಥವಾ ನಿರ್ವಿಕಲ್ಪಕ ಸಮಾಧಿಯನ್ನು ಪಡೆಯಲು ಪ್ರಯತ್ನಿಸುತ್ತಾ ಮೊದಲ ಹೆಜ್ಜೆಯಾಗಿ ಸವಿಕಲ್ಪಕ ಸಮಾಧಿಯನ್ನು ಪಡೆದಾಗ ಅದರ ಆನಂದವನ್ನನುಭವಿಸಿ ಅದರಲ್ಲೇ ಮೋಹಗೊಂಡು ನಿಲ್ಲುವುದು 'ರಸಾಸ್ವಾದ'.

**ಅನೇನ ವಿಘ್ನಚತುಷ್ಟಯೇನ ವಿರಹಿತಂ ಚಿತ್ತಂ ನಿರ್ವಾತ-ದೀಪವತ್ ಅಚಲಂ ಸತ್ ಅಖಂಡ-ಚೈತನ್ಯ-ಮಾತ್ರಮ್ ಅವತಿಷ್ಠತೇ ಯದಾ ತದಾ ನಿರ್ವಿಕಲ್ಪಕಃ ಸಮಾಧಿಃ ಇತಿ ಉಚ್ಯತೇ ॥೨೧೪॥**

೨೧೪. ಈ ನಾಲ್ಕು ವಿಘ್ನಗಳಿಂದ ಬಿಡಲ್ಪಟ್ಟ ಚಿತ್ತವು ಗಾಳಿಯಿಲ್ಲದ (ಪ್ರದೇಶದಲ್ಲಿಟ್ಟ) ದೀಪದಂತೆ ಅಲ್ಲಾಡದೆ ಅಖಂಡಚೈತನ್ಯಮಾತ್ರವೇ ಆಗಿ ಯಾವಾಗ ನೆಲೆ ನಿಲ್ಲುವುದೋ ಆಗ (ಅದು) ನಿರ್ವಿಕಲ್ಪಸಮಾಧಿ ಎಂದು ಹೇಳಲ್ಪಡುತ್ತದೆ.

**ತದುಕ್ತಮ್—**

**'ಲಯೇ ಸಂಬೋಧಯೇಚ್ಚಿತ್ತಂ ವಿಕ್ಷಿಪ್ತಂ ಶಮಯೇತ್ಪುನಃ ।**
**ಸಕಷಾಯಂ ವಿಜಾನೀಯಾತ್ ಶಮಪ್ರಾಪ್ತಂ ನ ಚಾಲಯೇತ್ ॥**
**ನಾಸ್ವಾದಯೇದ್ರಸಂ ತತ್ರ ನಿಸ್ಸಂಗಃ ಪ್ರಜ್ಞಯಾ ಭವೇತ್'**

**(ಗೌಡಪಾದಕಾರಿಕಾ ೩.೪೪-೪೫) ಇತಿ,**

**'ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ' (ಗೀತಾ ೬.೧೯) ಇತಿ ಚ ॥೨೧೫॥**

೨೧೫. ಅದನ್ನು ಹೀಗೆ ಹೇಳಿದೆ: 'ಚಿತ್ತವು (ಸುಷುಪ್ತಿಯಲ್ಲಿ) ಲಯ ಹೊಂದಿದರೆ ಅದನ್ನು ಎಚ್ಚರಗೊಳಿಸಬೇಕು[1]. ವಿಕ್ಷೇಪ ಹೊಂದಿದರೆ ಮತ್ತೆ ಶಾಂತಗೊಳಿಸಬೇಕು. (ಈ ಎರಡು ಅವಸ್ಥೆಗಳ ನಡುವೆ ಚಿತ್ತವು) ಕಷಾಯದಿಂದ ಕೂಡಿದೆಯೆಂದು ಅರಿಯಬೇಕು. ಶಾಂತವಾದ ಮನಸ್ಸನ್ನು ಮತ್ತೆ ಅಲುಗಾಡಿಸಬಾರದು. ಅಲ್ಲಿ ಸುಖವನ್ನು ಸವಿಯಕೂಡದು. ಪ್ರಜ್ಞೆಯಿಂದ ಅಸಂಗ

ಾಗಿರಬೇಕು' (ಗೌಡಪಾದಕಾರಿಕಾ ೩.೪೪,೪೫); 'ಗಾಳಿಯಿಲ್ಲದ ಪ್ರದೇಶ ಲ್ಲಿರುವ ದೀಪವು ಹೇಗೆ ಅಲ್ಲಾಡುವುದಿಲ್ಲವೊ ಅದರಂತೆ ಇದು[3] ಇರುತ್ತದೆ ೦ಬುದು ಉಪಮಾನ.' (ಗೀತಾ ೬. ೧೯).

1 ಜ್ಞಾನಾಭ್ಯಾಸದಿಂದ ಮತ್ತು ವೈರಾಗ್ಯದಿಂದ ಎಚ್ಚರಗೊಳಿಸಬೇಕು.

2 ವಿಷಯವಸ್ತುಗಳ ಕಡೆಗೆ ತಿರುಗಿಸಬಾರದು.

3 ಯೋಗಿಯ ಮನಸ್ಸು.

### ಜೀವನ್ಮುಕ್ತನ ಲಕ್ಷಣಗಳು

**ಅಥ ಜೀವನ್ಮುಕ್ತಲಕ್ಷಣಮ್ ಉಚ್ಯತೇ ॥೨೧೬॥**

೨೧೬. ಇನ್ನು ಮೇಲೆ[1] ಜೀವನ್ಮುಕ್ತನ ಲಕ್ಷಣವನ್ನು ಹೇಳಲಾಗುತ್ತದೆ.

1 ಸಾಧನಗಳನ್ನು ನಿರೂಪಿಸಿದಮೇಲೆ.

ನಿರ್ವಿಕಲ್ಪಕ ಸಮಾಧಿಯಲ್ಲಿ ಅವಿದ್ಯೆಯನ್ನು ನಾಶಪಡಿಸಿಕೊಂಡ ಮೇಲೆ ಬ್ರಹ್ಮ ಾಕ್ಷಾತ್ಕಾರವಾಗುತ್ತದೆ. ಆಗ ಪ್ರಾರಬ್ಧಕರ್ಮವು ಮುಗಿದುಹೋಗಿದ್ದರೆ ದೇಹವು ದ್ದುಹೋಗಿ ಕೂಡಲೇ ಮುಕ್ತಿಯಾಗುತ್ತದೆ. ಪ್ರಾರಬ್ಧವು ಇನ್ನೂ ಉಳಿದಿದ್ದರೆ ದು ತಾನಾಗಿಯೇ ನಾಶವಾಗಬೇಕಾದುದರಿಂದ, ಅದಿರುವವರೆಗೂ ದೇಹವೂ ಳಿಯುವುದರಿಂದ, ಜೀವನ್ಮುಕ್ತಾವಸ್ಥೆಯು ಪ್ರಾಪ್ತವಾಗುತ್ತದೆ.

**ಜೀವನ್ಮುಕ್ತೋ ನಾಮ ಸ್ವಸ್ವರೂಪ-ಅಖಂಡಬ್ರಹ್ಮ-ಜ್ಞಾನೇನ ದಜ್ಞಾನ-ಬಾಧನದ್ವಾರಾ ಸ್ವಸ್ವರೂಪ-ಅಖಂಡಬ್ರಹ್ಮಣಿ ಸಾಕ್ಷಾ ೃತೇ ಅಜ್ಞಾನ - ತತ್ಕಾರ್ಯ - ಸಂಚಿತಕರ್ಮ - ಸಂಶಯ - ಪರ್ಯಯಾದೀನಾಮ್ ಅಪಿ ಬಾಧಿತತ್ವಾತ್ ಅಖಿಲ-ಬಂಧ- ಹಿತಃ ಬ್ರಹ್ಮನಿಷ್ಠಃ ॥೨೧೭॥**

೨೧೭. ಜೀವನ್ಮುಕ್ತನೆಂದರೆ ತನ್ನ ಸ್ವರೂಪವೇ ಆಗಿರುವ ಅಖಂಡ ಬ್ರಹ್ಮ ಸ್ತುವಿನ ಜ್ಞಾನದ ಮೂಲಕ, ಅದರ ವಿಷಯದಲ್ಲಿದ್ದ ಅಜ್ಞಾನವು ಹೋಗಲಾಡಿ ಸ್ಪಡಲು, ತನ್ನ ಸ್ವರೂಪವೇ ಆಗಿರುವ ಅಖಂಡ ಬ್ರಹ್ಮವಸ್ತುವು ಸಾಕ್ಷಾತ್ಕರಿಸ ಡಲು, ಅಜ್ಞಾನ ಮತ್ತು ಅದರ ಕಾರ್ಯ[1] ಸಂಚಿತಕರ್ಮ[2] ಸಂಶಯ[3]

ವಿಪರ್ಯಯ[4] ಮೊದಲಾದವು[5] ಕೂಡ ಹೋಗಿರುವುದರಿಂದ ಎಲ್ಲ ಬಂಧನಗಳಿಂದಲೂ[6] ಬಿಡಲ್ಪಟ್ಟಿರುವ ಬ್ರಹ್ಮನಿಷ್ಠನು[7].

1 ಸ್ಥೂಲ ಸೂಕ್ಷ್ಮ ಪ್ರಪಂಚಗಳು. ಅಥವಾ ಸಂಚಿತಕರ್ಮವೇ ಮೊದಲಾದುವನ್ನು ಇಲ್ಲಿ ಗ್ರಹಿಸಬಹುದು.

2 ಕರ್ಮವು ಮೂರು ವಿಧ: ನಿಧಿಯಂತೆ ಕೂಡಿಹಾಕಿಕೊಂಡಿರುವ, ಇನ್ನೂ ಫಲವನ್ನು ಕೊಟ್ಟಿಲ್ಲದ ಕರ್ಮವು ಸಂಚಿತಕರ್ಮ; ಫಲವನ್ನು ಕೊಡುತ್ತಿರುವ, ಈ ಜನ್ಮಕ್ಕೆ ಕಾರಣವಾಗಿರುವ ಕರ್ಮವು ಪ್ರಾರಬ್ಧಕರ್ಮ; ಈಗ ಮಾಡುವ, ಮುಂದೆ ಫಲಕೊಡುವ ಕರ್ಮವು ಆಗಾಮೀ ಅಥವಾ ಕ್ರಿಯಮಾಣ ಕರ್ಮ. ಬ್ರಹ್ಮಜ್ಞಾನವು ಸಂಚಿತ ಮತ್ತು ಆಗಾಮಿಕರ್ಮಗಳನ್ನು ನಿಷ್ಫಲವಾಗಿ ಮಾಡುತ್ತದೆ. ಆದರೆ ಪ್ರಾರಬ್ಧವನ್ನು ಅನುಭವಿಸಿಯೇ ತೀರಬೇಕು.

3 ದೇಹಾತಿರಿಕ್ತನಾದ ಆತ್ಮನಿರುವನೊ ಇಲ್ಲವೋ? ಜೀವಾತ್ಮನು ಪರಮಾತ್ಮನಿಗಿಂತ ಭಿನ್ನನೊ ಅಭಿನ್ನನೊ? ಎಂಬಂಥ ಸಂಶಯು.

4 ದೇಹಾದಿಗಳೇ ಆತ್ಮನೆಂಬ ಭ್ರಮೆ.

5 ಬಾಹ್ಯಪ್ರಪಂಚವು ಸತ್ಯವೆಂಬ ತಿಳಿವಳಿಕೆ.

6 ಕರ್ತೃತ್ವ ಭೋಕ್ತೃತ್ವ ಸುಖ ದುಃಖ ಮೊದಲಾದ ಎಲ್ಲ ಬಂಧನಗಳಿಂದಲೂ.

7 ವೇದಾಂತದಿಂದ ತಿಳಿದು ಬರುವ ಬ್ರಹ್ಮವನ್ನೇ ತನ್ನ ಆತ್ಮನೆಂದು ಸಾಕ್ಷಾತ್ಕರಿಸಿಕೊಂಡು ಅದರಲ್ಲೇ ನೆಲೆನಿಂತಿರುವವನು.

**'ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥'**

(ಮುಂ. ಉ. ೨.೨.೮) ಇತ್ಯಾದಿಶ್ರುತೇಃ ॥೨೧೮॥

೨೧೮. 'ಆ ಪರಾವರನನ್ನು[1] ಸಾಕ್ಷಾತ್ಕರಿಸಿದಾಗ ಇವನ ಹೃದಯ ಗ್ರಂಥಿಯು[2] ಒಡೆದುಹೋಗುತ್ತದೆ, ಎಲ್ಲ ಸಂಶಯಗಳೂ[3] ಕತ್ತರಿಸಲ್ಪಡುತ್ತವೆ ಮತ್ತು (ಇವನ) ಕರ್ಮಗಳು[4] ನಾಶವಾಗುತ್ತವೆ' (ಮುಂ. ಉ ೨.೨.೮) —ಇದೇ ಮೊದಲಾದ[5] ಶ್ರುತಿಯಿಂದ (ಹೀಗೆ ತಿಳಿದು ಬರುತ್ತದೆ).

1 ಇಲ್ಲಿ ಬ್ರಹ್ಮವಸ್ತುವನ್ನು ಪರಾವರ ಎಂದು ಕರೆದಿದೆ. ಪರ ಎಂದರೆ ಉತ್ಕೃಷ್ಟವಾದದ್ದು, ಅವರ ಎಂದರೆ ನಿಕೃಷ್ಟವಾದದ್ದು. ಬ್ರಹ್ಮವು ಕಾರಣರೂಪದಿಂದ 'ಪರ' ಮತ್ತು ಕಾರ್ಯರೂಪದಿಂದ 'ಅವರ'.

2 ಅಹಂಕಾರವು. ಗ್ರಂಥಿಯೆಂದರೆ ಗಂಟು ಶುದ್ಧಚೈತನ್ಯವನ್ನು ಜಡವಾದ ದೇಹದೊಡನೆ ಗಂಟುಹಾಕಿರುವುದು ಈ ಅಹಂಕಾರವೇ. ಅಥವಾ ಬುದ್ಧಿಯನ್ನು ಆಶ್ರಯಿಸಿರುವ ಕಾಮಗಳು ಬೇಕಾದರೂ ಆಗಬಹುದು.

3 ಕಣ್ಣಿಗೆ ಕಾಣುವ ಮತ್ತು ಕಾಣದ ವಿಷಯಗಳ ಬಗೆಗೆ ಉಂಟಾಗುವ ಎಲ್ಲ ರೀತಿಯ ಸಂಶಯಗಳು.

4 ಸಂಚಿತ ಮತ್ತು ಆಗಾಮೀ ಕರ್ಮಗಳು.

5 ಇತರ ಶ್ರುತಿಗಳು: 'ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ । ಅಥ ಮರ್ತ್ಯೋಽಮೃತೋ ಭವತ್ಯೇತಾವದ್ಧ್ಯನುಶಾಸನಮ್ ॥', 'ಯಾವಾಗ ಹೃದಯದ ಗಂಟುಗಳೆಲ್ಲ ಇಲ್ಲಿಯೇ ನಾಶವಾಗುವುವೋ ಆಗ ಮರ್ತ್ಯನು ಅಮೃತನಾಗುವನು; ಇಷ್ಟೇ ಉಪದೇಶವು.' (ಕ.ಉ. ೬.೧೫)

'ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ', '(ಭೂಮವಸ್ತುವಿನ) ಸ್ಮೃತಿಯನ್ನು ಪಡೆದಾಗ ಎಲ್ಲ ಗಂಟುಗಳಿಂದಲೂ ಬಿಡುಗಡೆಯಾಗುತ್ತದೆ.' (ಛಾಂ. ಉ. ೭.೨೬.೨).

'ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ । ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥', 'ಇವನ ಹೃದಯದಲ್ಲಿರುವ ಕಾಮಗಳೆಲ್ಲ ಯಾವಾಗ ಬಿಟ್ಟುಹೋಗುವುವೋ ಆಗ (ಈ) ಮನುಷ್ಯನು ಅಮೃತನಾಗುತ್ತಾನೆ, ಮತ್ತು ಈ ಶರೀರದಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ.' (ಬೃ.ಉ. ೪.೪.೭)

'ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ, ಬ್ರಹ್ಮೈವ ಭವತಿ ನಾಸ್ಯಾಬ್ರಹ್ಮವಿತ್ಕುಲೇ ಭವತಿ । ತರತಿ ಶೋಕಂ ತರತಿ ಪಾಪ್ಮಾನಂ, ಗುಹಾಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ॥', 'ಯಾವನು ಆ ಪರಬ್ರಹ್ಮವನ್ನು ತಿಳಿದುಕೊಳ್ಳುವನೋ ಅವನು ಬ್ರಹ್ಮವೇ ಆಗುವನು. ಇವನ ಕುಲದಲ್ಲಿ ಬ್ರಹ್ಮವನ್ನರಿಯದವನು ಹುಟ್ಟುವುದೇ ಇಲ್ಲ. (ಇವನು) ಶೋಕವನ್ನು ದಾಟುತ್ತಾನೆ, ಪಾಪವನ್ನು ದಾಟುತ್ತಾನೆ, ಹೃದಯ ಗ್ರಂಥಿಗಳಿಂದ ಬಿಡುಗಡೆಹೊಂದಿ ಅಮೃತನಾಗುತ್ತಾನೆ.' (ಮುಂ. ಉ. ೩.೨.೯).

ಅಯಂ ತು ವ್ಯುತ್ಥಾನ-ಸಮಯೇ ಮಾಂಸ-ಶೋಣಿತ-ಮೂತ್ರಪುರೀಷಾದಿ-ಭಾಜನೇನ ಶರೀರೇಣ, ಆಂಧ್ಯ-ಮಾಂದ್ಯ-

**ಅಪಟುತ್ವಾದಿ-ಭಾಜನೇನ ಇಂದ್ರಿಯ-ಗ್ರಾಮೇಣ, ಅಶನಾಯಾ-ಪಿಪಾಸಾ–ಶೋಕ–ಮೋಹಾದಿ-ಭಾಜನೇನ ಅಂತಃಕರಣೇನ ಚ, ಪೂರ್ವ-ಪೂರ್ವವಾಸಯಾ ಕ್ರಿಯಮಾಣಾನಿ ಕರ್ಮಾಣಿ, ಭುಜ್ಯಮಾನಾನಿ ಜ್ಞಾನ-ಅವಿರುದ್ಧ-ಆರಬ್ಧಫಲಾನಿ ಚ, ಪಶ್ಯನ್ ಅಪಿ ಬಾಧಿತತ್ವಾತ್ ಪರಮಾರ್ಥತಃ ನ ಪಶ್ಯತಿ। ಯಥಾ ಇಂದ್ರಜಾಲಮ್ ಇತಿ ಜ್ಞಾನವಾನ್ ತದಿಂದ್ರ-ಜಾಲಂ ಪಶ್ಯನ್ ಅಪಿ ಪರಮಾರ್ಥಮ್ ಇದಮ್ ಇತಿ ನ ಪಶ್ಯತಿ ॥೨೧೯॥**

೨೧೯. ಇವನಾದರೋ (ಸಮಾಧಿಯನ್ನು) ಬಿಟ್ಟದ್ದ ಸಮಯದಲ್ಲಿ ಮಾಂಸ ರಕ್ತ ಮೂತ್ರ ಪುರೀಷಾದಿಗಳಿಗೆ ಆಶ್ರಯವಾದ ಶರೀರದಿಂದಲೂ, ಕುರುಡು ಮಂದತ್ವ ಅಸಾಮರ್ಥ್ಯ ಮೊದಲಾದುವುಗಳಿಗೆ ಆಶ್ರಯವಾದ ಇಂದ್ರಿಯ ಸಮೂಹದಿಂದಲೂ ಮತ್ತು ಹಸಿವು ಬಾಯಾರಿಕೆ ಶೋಕ ಮೋಹ ಇತ್ಯಾದಿಗಳಿಗೆ ಆಶ್ರಯವಾದ ಅಂತಃಕರಣದಿಂದಲೂ, ಹಿಂದು ಹಿಂದಿನ ಸಂಸ್ಕಾರಕ್ಕೆ ಅನುಗುಣವಾಗಿ ಮಾಡಲ್ಪಡುವ ಕರ್ಮಗಳನ್ನೂ, ಜ್ಞಾನಕ್ಕೆ ವಿರುದ್ಧವಲ್ಲದ ಪ್ರಾರಬ್ಧದ ಫಲಗಳನ್ನೂ ನೋಡುತ್ತಿದ್ದರೂ–ಅವು ನಿವೃತ್ತವಾಗಿರುವುದರಿಂದ–ಪರಮಾರ್ಥವಾಗಿ ನೋಡುವುದಿಲ್ಲ. ಇದು ಯಕ್ಷಿಣಿ ಎಂಬ ಜ್ಞಾನವುಳ್ಳವನು ಆ ಯಕ್ಷಣಿಯನ್ನು ನೋಡುತ್ತಿದ್ದರೂ ಪರಮಾರ್ಥಕವಾಗಿ ಇದು ಸತ್ಯ ಎಂದು ಹೇಗೆ ನೋಡುವುದಿಲ್ಲವೋ ಹಾಗೆ.

ವಿದೇಹಮುಕ್ತನಿಗೆ ಜ್ಞಾನಸಮಕಾಲದಲ್ಲಿಯೇ ದೇಹಪಾತವಾಗಿಬಿಡುತ್ತದೆ. ಜೀವನ್ಮುಕ್ತನಿಗೆ ಪ್ರಾರಬ್ಧಕರ್ಮವು ಇನ್ನೂ ಮುಗಿದಿಲ್ಲವಾದುದರಿಂದ ದೇಹವು ಬದುಕಿರುತ್ತದೆ. ಅವನಿಗೆ ಈ ದೇಹವು ಕಂಡುಬರುತ್ತಿದೆಯೇ? ಇತರರಂತೆ ಅವನೂ ಆಹಾರ ಸ್ವೀಕಾರಾದಿ ವ್ಯವಹಾರದಲ್ಲಿ ತೊಡಗಿರುವುದನ್ನು ನೋಡುವೆವಲ್ಲ? ಅವನಿಗೆ ದೇಹಾದ್ಯಭಿಮಾನವಿನ್ನೂ ಇದ್ದರೆ ನಮ್ಮಂತೆಯೇ ಬದ್ಧನೇ ಹೊರತು ಜೀವನ್ಮುಕ್ತನಲ್ಲವಲ್ಲ?—ಇಂಥ ಸಂಶಯಗಳನ್ನು ಇಲ್ಲಿ ಪರಿಹಾರ ಮಾಡಿರುತ್ತದೆ.

ಪೂರ್ವಜನ್ಮದ ಸಂಸ್ಕಾರಗಳ ಫಲವಾಗಿ. ಪ್ರಾರಬ್ಧಕರ್ಮದ ವಶದಿಂದ–ಬಿಲ್ಲಿನಿಂದ ಈಗಾಗಲೇ ಬಿಡಲ್ಪಟ್ಟಿರುವ ಬಾಣವು ತನ್ನ ಗುರಿಯ ಕಡೆಗೆ ಧಾವಿಸುವಂತೆ–ಶರೀರ ಇಂದ್ರಿಯ ಮನಸ್ಸುಗಳು ಕೆಲಸಮಾಡುತ್ತಿದ್ದರೂ, ಜೀವನ್ಮುಕ್ತನಿಗೆ ಅವುಗಳಲ್ಲಿ

ಹಂಕಾರ ಮಮಕಾರ ರೂಪದ ಅಭಿಮಾನವಿಲ್ಲ. ಯಕ್ಷಿಣಿಯಿಂದಾದ ಗಿಡ ಮರ ಆನೆ ದಲಾದುವನ್ನು ನಾವು ನೋಡುತ್ತಿದ್ದರೂ ಅವು ನಿಜವಲ್ಲವೆಂಬ ಜ್ಞಾನವು ಹೇಗೆ ಗಡಲೇ ಇರುವುದೋ ಹಾಗೆಯೇ ಇವು ಅವನಿಗೆ ಕಾಣುತ್ತಿದ್ದರೂ ಪರಮಾರ್ಥತಃ ವು ನಿಜವಲ್ಲ ಎಂಬ ಜ್ಞಾನವೂ ಸಹ ಇರುತ್ತದೆ. ಆದುದರಿಂದ ಅಜ್ಞಾನಿಗಳು ಅವು ಂದ ಬಂಧನಕ್ಕೆ ಒಳಗಾಗುವಂತೆ ಇವನು ಅವುಗಳಿಂದ ಬಂಧನಕ್ಕೊಳಗಾಗುವುದಿಲ್ಲ.

**'ಸಚಕ್ಷುಃ ಅಚಕ್ಷುಃ ಇವ, ಸಕರ್ಣಃ ಅಕರ್ಣಃ ಇವ' ಇತ್ಯಾದಿ-ತೇಃ ॥೨೨೦॥**

೨೨೦. 'ಕಣ್ಣಿದ್ದರೂ ಕಣ್ಣಿಲ್ಲದವನಂತೆ, ಕಿವಿಯಿದ್ದರೂ ಕಿವಿಯಿಲ್ಲದವ ತೆ'-ಇದೇ ಮೊದಲಾದ ಶ್ರುತಿಯಿಂದ (ಹೀಗೆ ತಿಳಿದು ಬರುತ್ತದೆ).

ಇಂದ್ರಿಯ-ವಿಷಯಗಳಲ್ಲಿ ಅವನಿಗೆ ಆಸಕ್ತಿಯಿರುವುದಿಲ್ಲ ಎಂದರ್ಥ. ಇದು ವ ಶ್ರುತಿಯೆಂದು ತಿಳಿದುಬಂದಿಲ್ಲ.

**ಕ್ತಂ ಚ—**

**'ಸುಷುಪ್ತವಜ್ಜಾಗ್ರತಿ ಯೋ ನ ಪಶ್ಯತಿ**
**ದ್ವಯಂ ಚ ಪಶ್ಯನ್ನಪಿ ಚಾದ್ವಯತ್ವತಃ ।**
**ತಥಾ ಚ ಕುರ್ವನ್ನಪಿ ನಿಷ್ಕ್ರಿಯಶ್ಚ ಯಃ**
**ಸ ಆತ್ಮವಿನ್ನಾನ್ಯ ಇತೀಹ ನಿಶ್ಚಯಃ ॥**
**ಇತಿ (ಉ. ಸಾ. ೧೦-೧೩) ॥೨೨೧॥**

೨೨೧. ಮತ್ತು ಹೀಗೆಯೂ ಹೇಳಿದೆ: 'ಯಾವನು ಅದ್ವಯಬ್ರಹ್ಮ ಕ್ಷಾತ್ಕಾರದ ಫಲವಾಗಿ, ಜಾಗ್ರದವಸ್ಥೆಯಲ್ಲಿ ದ್ವೈತಪ್ರಪಂಚವನ್ನು ನೋಡು ದ್ದರೂ ಸುಷುಪ್ತಿಯಲ್ಲಿರುವವನಂತೆ, ಅದನ್ನು ನೋಡುವುದಿಲ್ಲವೋ,[1] ಗೆಯೇ, (ಕರ್ಮಗಳನ್ನು) ಮಾಡುತ್ತಿದ್ದರೂ[2] ನಿಷ್ಕ್ರಿಯನೋ ಅವನೇ ವಿದನು, ಮತ್ತೊಬ್ಬನಲ್ಲ[3] ಎಂಬಿದು ಇಲ್ಲಿ[4] ನಿರ್ಧಾರಿತವಾದ ಅರ್ಥ.' . ಸಾ. ೧೦.೧೩)

1 ಹಿಂದಿನ ವಾಸನೆಗಳ ಫಲವಾಗಿ ದ್ವೈತಪ್ರಪಂಚವು ಕಾಣುತ್ತಿದ್ದರೂ, ಜೊತೆ ಜೊತೆಯಲ್ಲಿಯೇ ಅದು ಅದ್ವಯಬ್ರಹ್ಮವೆಂಬುದನ್ನೂ ನೋಡುತ್ತಿರುವುದರಿಂದ, ಅದನ್ನು ನಿಜವೆಂದು ಭಾವಿಸುವುದಿಲ್ಲ.

2 ಶರೀರಪೋಷಣೆಗೆ ಅವಶ್ಯಕವಾದಷ್ಟು ಕರ್ಮಗಳನ್ನು ಮಾಡುತ್ತಿದ್ದರೂ.

3 ಶಾಸ್ತ್ರಾರ್ಥವನ್ನರಿತಿದ್ದರೂ ತಾನು ಜ್ಞಾತೃ ಕರ್ತೃ ಇತ್ಯಾದಿ ಅಭಿಮಾನ ವುಳ್ಳವನು.

4 ವೇದಾಂತಶಾಸ್ತ್ರದಲ್ಲಿ.

**ಅಸ್ಯ ಜ್ಞಾನಾತ್ ಪೂರ್ವಂ ವಿದ್ಯಮಾನಾನಾಮ್ ಏವ ಆಹಾರ-ವಿಹಾರಾದೀನಾಮ್ ಅನುವೃತ್ತಿವತ್ ಶುಭವಾಸನಾನಾಮ್ ಏವ ಅನುವೃತ್ತಿಃ ಭವತಿ ಶುಭ-ಅಶುಭಯೋಃ ಔದಾಸೀನ್ಯಂ ವಾ ||೨೨೨||**

೨೨೨. ಇವನಿಗೆ ಜ್ಞಾನಕ್ಕೆ ಮುಂಚೆಯೇ ಇದ್ದ ಆಹಾರ ವಿಹಾರಾದಿಗಳು (ಜ್ಞಾನಾನಂತರವೂ) ಅನುವರ್ತಿಸಿಕೊಂಡು ಬರುವಂತೆ ಶುಭಸಂಸ್ಕಾರಗಳೇ ಅನುವರ್ತಿಸಿಕೊಂಡು ಬರುತ್ತವೆ ; ಅಥವಾ, (ಅವನು) ಶುಭ ಅಶುಭ ಎರಡರ ಬಗ್ಗೆಯೂ ಉದಾಸೀನನಾಗಿರುತ್ತಾನೆ:

ಪ್ರಕೃತಿಸಹಜವಾದ ಆಹಾರವಿಹಾರಾದಿಗಳು ದೇಹವಿರುವವರೆಗೂ ಇರುವುದ ರಿಂದ ಜೀವನ್ಮುಕ್ತಿಯಾದಮೇಲೂ ಅವು ಅನುವರ್ತಿಸಿಕೊಂಡು ಬರುತ್ತವೆ. ಸಾಧನಾ ವಸ್ಥೆಯಲ್ಲಿ ಮಾಡಿದ ತಪಸ್ಸಿನ ಫಲವಾಗಿ ಅಶುಭ ಸಂಸ್ಕಾರಗಳು ನಾಶವಾಗಿರುತ್ತವೆ. ಜ್ಞಾನಸಹಕಾರಿಯಾದುದರಿಂದ ಶುಭಸಂಸ್ಕಾರಗಳು ಇರುತ್ತವೆ. ಆದುದರಿಂದ ಆತ್ಮ ವಿದನಾದ ಜೀವನ್ಮುಕ್ತನು ಸಹಜವಾಗಿಯೇ ಶುಭಕಾರ್ಯದಲ್ಲಿ ಪ್ರವೃತ್ತನಾಗುತ್ತಾನೆ. ಅಥವಾ ಶುಭವಿದ್ದಮೇಲೆ ಅಶುಭವೂ ಇರಬೇಕೆಂದು ಹೇಳಿದರೆ ಅವನು ಇವೆರಡರ ಬಗೆಗೂ ಉದಾಸೀನನಾಗಿರುತ್ತಾನೆ.

**ತದುಕ್ತಮ್—**

**‘ ಬುದ್ಧಾದ್ವೈತಸತತ್ತ್ವಸ್ಯ ಯಥೇಷ್ಟಾಚರಣಂ ಯದಿ ।**
**ಶುನಾಂ ತತ್ತ್ವದೃಶಾಂ ಚೈವ ಕೋ ಭೇದೋಽಶುಚಿಭಕ್ಷಣೇ ॥’**
**(ನೈಷ್ಕರ್ಮ್ಯಸಿದ್ಧಿಃ ೪.೬೨) ಇತಿ,**

'ಬ್ರಹ್ಮವಿತ್ತ್ವಂ ತಥಾ ಮುಕ್ತ್ವಾ ಸ ಆತ್ಮಜ್ಞೋ ನ ಚೇತರಃ' (ಉಪದೇಶ-ಸಾಹಸ್ರೀ ೧೨.೧೩) ಇತಿ ಚ ||೨೨೩||

೨೨೩. ಅದನ್ನು ಹೀಗೆ ಹೇಳಿದೆ: 'ಅದ್ವೈತ ತತ್ತ್ವವನ್ನರಿತವನು ಮನಬಂದಂತೆ ಆಚರಿಸುವುದಾದರೆ, ನಾಯಿಗಳಿಗೂ ತತ್ತ್ವವೇತ್ತರಿಗೂ-ಅಶುಚಿಯಾದ (ಪದಾರ್ಥಗಳನ್ನು) ತಿನ್ನುವುದರಲ್ಲಿ-ವ್ಯತ್ಯಾಸವೇನಿದ್ದೀತು?' (ನೈಷ್ಕರ್ಮ್ಯಸಿದ್ಧಿ ೪. ೬೨)

ಮತ್ತು : 'ಹಾಗೆಯೇ (ತಾನು) ಬ್ರಹ್ಮವಿದನೆಂಬ (ಅಭಿಮಾನವನ್ನು) ಬಿಟ್ಟವನೇ ಆತ್ಮಜ್ಞಾನಿಯು, ಮತ್ತೊಬ್ಬನಲ್ಲ.' (ಉಪದೇಶಸಾಹಸ್ರೀ ೧೨ ೧೩)

ಬ್ರಹ್ಮಜ್ಞಾನಿಯು ವಿಧಿನಿಷೇಧಗಳನ್ನು ಮೀರಿರುವುದರಿಂದ ಮನಬಂದಂತೆ ಆಚರಿಸುತ್ತಾನೆಯೆ? ಪಾಪಕರ್ಮಗಳನ್ನು ಮಾಡುತ್ತಾನೆಯೆ? ಅವನು ಪಾಪಕರ್ಮಗಳನ್ನು ಮಾಡಿದರೂ ಪಾಪದಿಂದ ಲಿಪ್ತನಾಗನು ಎಂಬ ಶ್ರುತಿಸ್ಮೃತಿವಾಕ್ಯಗಳಿವೆಯಲ್ಲ? ಉದಾಹರಣೆಗೆ: ನ ಮಾತೃವಧೇನ ನ ಪಿತೃವಧೇನ, 'ಮಾತೃಹತ್ಯೆಯಿಂದಾಗಲೀ ಪಿತೃಹತ್ಯೆಯಿಂದಾಗಲೀ (ಅವನಿಗೆ ಪಾಪವಿಲ್ಲ)' (ಕೌ. ಉ. ೩.೧); 'ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ | ಹತ್ವಾಽಪಿ ಸ ಇಮಾಂಲ್ಲೋಕಾನ್ ನ ಹಂತಿ ನ ನಿಬಧ್ಯತೇ ||', 'ಯಾವನಿಗೆ ತಾನು ಕರ್ತೃ ಎಂಬ ಅಭಿಮಾನವಿರುವುದಿಲ್ಲವೋ ಯಾವನ ಬುದ್ಧಿಯು (ರಾಗದ್ವೇಷಾದಿಗಳಿಂದ) ಲಿಪ್ತವಾಗಿಲ್ಲವೋ ಅವನು ಈ ಜನರನ್ನು ಕೊಂದರೂ ಕೊಲ್ಲುವುದಿಲ್ಲ ಮತ್ತು ಬಂಧಿಸಲ್ಪಡುವುದಿಲ್ಲ' (ಗೀತಾ. ೧೮.೧೭). ಈ ಸಂಶಯವನ್ನು ಇಲ್ಲಿ ಪರಿಹರಿಸಿರುತ್ತಾರೆ.

ಈ ಶ್ರುತಿಸ್ಮೃತಿವಾಕ್ಯಗಳನ್ನು ಬ್ರಹ್ಮಜ್ಞಾನದ ಸ್ತುತಿಗಾಗಿ ಹೇಳಿದೆಯೇ ಹೊರತು ಅವನು ಅಂಥ ಕಾರ್ಯಗಳನ್ನು ಮಾಡುತ್ತಾನೆ ಎಂದಲ್ಲ. ಯಥೇಷ್ಟಾಚರಣವು ಅಜ್ಞಾನದಿಂದ ಉಂಟಾಗುತ್ತದೆ. ಆದುದರಿಂದ ಅಜ್ಞಾನವು ನಷ್ಟವಾಗಿರುವ ಬ್ರಹ್ಮಜ್ಞಾನಿಗೆ ಯಥೇಷ್ಟಾಚರಣವು ಸಾಧ್ಯವೇ ಇಲ್ಲ. ಇದನ್ನೇ ನೈಷ್ಕರ್ಮ್ಯಸಿದ್ಧಿಯಲ್ಲಿ (೪.೬೩) ಹೀಗೆ ಸಾಧಿಸಿರುತ್ತದೆ: 'ಅಧರ್ಮಾಜ್ಜಾಯತೇಽಜ್ಞಾನಂ ಯಥೇಷ್ಟಾಚರಣಂ ತತಃ | ಧರ್ಮಕಾರ್ಯೇ ಕಥಂ ತತ್ಸ್ಯಾತ್ ಯತ್ರ ಧರ್ಮೋ ವಿನಶ್ಯತಿ ||', ಅಧರ್ಮದಿಂದ ಅಜ್ಞಾನವುಂಟಾಗುತ್ತದೆ. ಅದರಿಂದ ಮನಬಂದಂತೆ ಆಚರಣೆಯಾದಗುತ್ತದೆ. ಧರ್ಮದ ಫಲವಾಗಿರುವ (ಜ್ಞಾನಾವಸ್ಥೆಯಲ್ಲಿ)—ಎಲ್ಲಿ ಧರ್ಮವೂ ನಾಶಿಸಿಹೋಗಿರುವುದೋ (ಅಂಥ ಅವಸ್ಥೆಯಲ್ಲಿ)—ಅದು ಹೇಗೆ ತಾನೆ ಸಾಧ್ಯ?'

ಶ್ರೀಶಂಕರಭಗವತ್ಪಾದರು ತಮ್ಮ ಐತರೇಯೋಪನಿಷತ್-ಭಾಷ್ಯದಲ್ಲಿ ಹೇಳಿರುವುದನ್ನು ಇಲ್ಲಿ ಸ್ಮರಿಸುವುದು ಉಚಿತ: 'ಯಥಾಕಾಮಿತ್ವಂ ತು ವಿದುಷಃ ಅತ್ಯಂತಮ್ ಅಪ್ರಾಪ್ತಮ್, ಅತ್ಯಂತ-ಮೂಢವಿಷಯತ್ವೇನ ಅವಗಮಾತ್। ತಥಾ ಶಾಸ್ತ್ರಚೋದಿತ-ಮಪಿ ಕರ್ಮ ಆತ್ಮವಿದಃ ಅಪ್ರಾಪ್ತಂ ಗುರುಭಾರತಯಾ ಅವಗಮ್ಯತೇ। ಕಿಮುತ ಅತ್ಯಂತ-ಅವಿವೇಕ-ನಿಮಿತ್ತಂ ಯಥಾಕಾಮಿತ್ವಮ್?', 'ಸ್ವೇಚ್ಛಾಚಾರವು ಜ್ಞಾನಿಗೆ ಅತ್ಯಂತವಾಗಿ ಒದಗುವುದೇ ಇಲ್ಲ; ಏಕೆಂದರೆ ಅದು ಅತ್ಯಂತ ಮೂಢರ ವಿಷಯದಲ್ಲಿ ಮಾತ್ರ ಕಂಡುಬರುತ್ತದೆ. ಹಾಗೆಯೇ ಕರ್ಮವು ಶಾಸ್ತ್ರದಿಂದ ವಿಹಿತವಾಗಿದ್ದರೂ ಕೂಡ ಆತ್ಮಜ್ಞಾನಿಗೆ ಅತ್ಯಂತ ಭಾರವಾಗಿ ಕಂಡುಬರುವುದರಿಂದ, (ಅವನ ಮಟ್ಟಿಗೆ) ಇಲ್ಲ. ಇನ್ನು ಅತ್ಯಂತ ಅವಿವೇಕದಿಂದುಂಟಾದ ಸ್ವೇಚ್ಛಾಚಾರವು (ಅವನಿಗಿಲ್ಲವೆಂದು) ಹೇಳುವುದೇನಿದೆ?'

**ತದಾನೀಮ್ ಅಮಾನಿತ್ವಾದೀನಿ ಜ್ಞಾನಸಾಧನಾನಿ ಅದ್ವೇಷ್ಟೃತ್ವಾದಯಃ ಸದ್ಗುಣಾಶ್ಚ ಅಲಂಕಾರವತ್ ಅನುವರ್ತಂತೇ ॥೨೨೪॥**

೨೨೪. ಆಗ ಅಮಾನಿತ್ವವೇ ಮೊದಲಾದ[1] ಜ್ಞಾನಸಾಧನಗಳೂ ಮತ್ತು ದ್ವೇಷಿಸದಿರುವುದೇ ಮೊದಲಾದ[2] ಸದ್ಗುಣಗಳೂ ಅಲಂಕಾರದಂತೆ[3] ಅನುವರ್ತಿಸಿ ಕೊಂಡು ಬರುತ್ತವೆ.

1 ಗೀತಾ ೧೩. ೭–೧೧ ರವರೆಗೆ ಹೇಳಿರುವ ಹತ್ತೊಂಬತ್ತು ಸಾಧನಗಳು. ಇವು ಜ್ಞಾನಕ್ಕೆ ಸಾಧನಗಳಾದುದರಿಂದ 'ಜ್ಞಾನ'ಎಂದು ಕರೆಯಲ್ಪಟ್ಟವೆ.

2 ಗೀತಾ ೧೨. ೧೩–೧೯ ರವರೆಗೆ ಹೇಳಿರುವ ಭಕ್ತನ ಲಕ್ಷಣಗಳು.

3 ಜ್ಞಾನವನ್ನು ಪಡೆಯಲು ಸಹಕಾರಿಯಾಗಿರುವ ಸಾಧನಗಳೂ ಜ್ಞಾನವನ್ನು ಪಡೆದಮೇಲೆ ವ್ಯಕ್ತವಾಗುವ ಗುಣಗಳೂ ಬ್ರಹ್ಮಜ್ಞಾನಿಯ ವಿಷಯದಲ್ಲಿ ಸಹಜವಾಗಿಯೇ ವ್ಯಕ್ತವಾಗಿರುತ್ತವೆ. ಅವು ಅವನಿಗೆ ಅಲಂಕಾರವಿದ್ದಂತೆಯೇ ಹೊರತು ಆವಶ್ಯಕವಲ್ಲ.

**ತದುಕ್ತಮ್—**

**'ಉತ್ಪನ್ನಾತ್ಮಾವಬೋಧಸ್ಯ ಹ್ಯದ್ವೇಷ್ಟೃತ್ವಾದಯೋ ಗುಣಾಃ।**
**ಅಯತ್ನತೋ ಭವಂತ್ಯಸ್ಯ ನ ತು ಸಾಧನರೂಪಿಣಃ ॥'**

**(ನೈಷ್ಕರ್ಮ್ಯಸಿದ್ಧಿಃ ೪.೬೯) ಇತಿ ॥೨೨೫॥**

೨೨೫. ಅದನ್ನು ಹೀಗೆ ಹೇಳಿದೆ: 'ಆತ್ಮಜ್ಞಾನವುಂಟಾಗಿರುವವನಿಗೆ ೇಷಿಸದಿರುವುದೇ ಮೊದಲಾದ ಗುಣಗಳು ಪ್ರಯತ್ನವಿಲ್ಲದೆಯೇ ಲಭಿಸಿರು ವೆ; ಸಾಧನಗಳ ರೂಪದಿಂದ ಇರುವುದಿಲ್ಲ.' (ನೈಷ್ಕರ್ಮ್ಯಸಿದ್ಧಿ ೪.೬೯)

ಭಗವದ್ಗೀತೆಯ ಸ್ಥಿತಪ್ರಜ್ಞಲಕ್ಷಣದ (೨. ೫೪-೭೨) ಮೇಲೆ ವ್ಯಾಖ್ಯಾನ ಡುವಾಗ ಶ್ರೀಶಂಕರಭಗವತ್ಪಾದರು ಉಪೋದ್ಘಾತರೂಪವಾಗಿ ಹೇಳಿರುವ ತನ್ನು ಇಲ್ಲಿ ಸ್ಮರಿಸಬಹುದು: 'ಸರ್ವತ್ರ ಏವ ಹಿ ಅಧ್ಯಾತ್ಮಶಾಸ್ತ್ರೇ ಕೃತಾರ್ಥ- ಣಾನಿ ಯಾನಿ ತಾನಿ ಏವ ಸಾಧನಾನಿ ಉಪದಿಶ್ಯಂತೇ ಯತ್ನಸಾಧ್ಯತ್ವಾತ್ । ನಿ ಯತ್ನಸಾಧ್ಯಾನಿ ಸಾಧನಾನಿ ಲಕ್ಷಣಾನಿ ಚ ಭವಂತಿ ತಾನಿ ।', 'ಅಧ್ಯಾತ್ಮ ಸ್ತ್ರದಲ್ಲಿ ಎಲ್ಲೆಡೆಯೂ ಯಾವವು ಸಿದ್ಧಪುರುಷನ ಸಹಜಲಕ್ಷಣಗಳೋ ಅವನ್ನೇ ಸನಗಳನ್ನಾಗಿಯೂ ಉಪದೇಶಿಸಿರುತ್ತದೆ; ಏಕೆಂದರೆ (ಅವನ್ನು) ಪ್ರಯತ್ನದಿಂದ ಸಬಹುದು. ಹಾಗೆಯೇ ಯಾವವು ಪ್ರಯತ್ನದಿಂದ ಸಾಧಿಸಲ್ಪಡುವವೋ ಅವು ಯನಂತರ) ಸಹಜಲಕ್ಷಣಗಳೂ ಆಗುತ್ತವೆ.

ಅದುದರಿಂದ ದ್ವೇಷಿಸದಿರುವುದು ಮೊದಲಾದ ಗುಣಗಳನ್ನು ಸಾಧನಾವಸ್ಥೆಯಲ್ಲಿ ಯತ್ನಪೂರ್ವಕವಾಗಿ ಅಭ್ಯಾಸ ಮಾಡಬೇಕಾಗಿದ್ದರೂ ಸಿದ್ಧಪುರುಷನಲ್ಲಿ ಅವು ಸಹಜ ಲಕ್ಷಣಗಳಾಗಿರುತ್ತವೆ.

## ವಿದೇಹಮುಕ್ತಿ

**ಕಿಂ ಬಹುನಾ? ಅಯಂ ದೇಹಯಾತ್ರಾಮಾತ್ರಾರ್ಥಮ್ ಚ್ಛಾ-ಅನಿಚ್ಛಾ-ಪರೇಚ್ಛಾ-ಪ್ರಾಪಿತಾನಿ ಸುಖ-ದುಃಖ-ಲಕ್ಷಣಾನಿ ಬ್ಧ-ಫಲಾನಿ ಅನುಭವನ್ ಅಂತಃಕರಣ-ಆಭಾಸಾದೀನಾಮ್ ಭಾಸಕಃ ಸನ್, ತದವಸಾನೇ ಪ್ರತ್ಯಗಾನಂದ-ಪರಬ್ರಹ್ಮಣಿ ಪ್ರಾಣೇ ತೇ ಸತಿ, ಅಜ್ಞಾನ-ತತ್ಕಾರ್ಯ-ಸಂಸ್ಕಾರಾಣಾಮಪಿ ವಿನಾಶಾತ್ ಮ-ಕೈವಲ್ಯಮ್ ಆನಂದೈಕರಸಮ್ ಅಖಿಲ-ಭೇದ-ಪ್ರತಿಭಾಸ- ತಮ್ ಅಖಂಡಬ್ರಹ್ಮ ಅವತಿಷ್ಠತೇ ॥೨೨೬॥**

೨೨೬. ಹೆಚ್ಚು ಹೇಳುವುದರಿಂದೇನು?[1] ಇವನು ಕೇವಲ ದೇಹರಕ್ಷಣೆ [2] (ತನ್ನ) ಇಷ್ಟದಿಂದ (ಅಥವಾ) ಇಷ್ಟವಿಲ್ಲದೆ (ಅಥವಾ) ಇತರರ ಇಷ್ಟ ಪ್ರಾಪ್ತವಾದ ಸುಖದುಃಖರೂಪದ ಪ್ರಾರಬ್ಧಫಲಗಳನ್ನು[3] ಅನುಭವಿಸುತ್ತ [4]

ಚಿತ್ತದ ಆಭಾಸವೇ ಮೊದಲಾದುವನ್ನು ಬೆಳಗುವವನಾಗಿ[5], ಆ (ಪ್ರಾರಬ್ಧವು) ಮುಗಿದ ಮೇಲೆ ಪ್ರತ್ಯಗಾನಂದವಾದ ಪರಬ್ರಹ್ಮದಲ್ಲಿ ಪ್ರಾಣವು ಲಯಹೊಂದಲಾಗಿ, ಅಜ್ಞಾನವೂ ಅದರ ಕಾರ್ಯಗಳೂ ಸಂಸ್ಕಾರಗಳೂ[6] ನಾಶಹೊಂದುವುದರಿಂದ[7], ಪರಮಕೈವಲ್ಯವೂ[8] ಆನಂದೈಕರಸವೂ[9] ಎಲ್ಲ ರೀತಿಯ ತೋರ್ಕೆಯ ಭೇದಗಳಿಂದ ರಹಿತವಾದುದೂ[10] ಆದ ಅಖಂಡಬ್ರಹ್ಮವೇ ಆಗಿ ಉಳಿಯುತ್ತಾನೆ.

1 ಹೇಳಬೇಕಾದ್ದನ್ನೆಲ್ಲ ಈಗಾಗಲೆ ಸಾಕಷ್ಟು ವಿಸ್ತಾರವಾಗಿಯೇ ತಿಳಿಸಿರುವುದರಿಂದ.

2 ಭಿಕ್ಷಾಟನಾದಿಗಳಿಂದ ದೇಹವನ್ನು-ಪ್ರಾರಬ್ಧವು ಮುಗಿಯುವವರೆಗೂ-ಪೋಷಿಸುವುದಕ್ಕಾಗಿ. ಪ್ರಾರಬ್ಧಕ್ಷಯವಾದರೇನೇ ವಿದೇಹಮುಕ್ತಿ. ಅದಕ್ಕಾಗಿ ದೇಹರಕ್ಷಣೆ ಅಗತ್ಯ.

3 ಪ್ರಾರಬ್ಧವು ಮೂರು ವಿಧ: ತನ್ನ ಇಷ್ಟದಂತೆ ಮಾಡುವ ಭಿಕ್ಷಾಟನಾದಿಗಳು. ಸಮಾಧಿಯಲ್ಲಿರುವಾಗ ಶಿಷ್ಯಾದಿಗಳು ದೇಹಪೋಷಣೆಗಾಗಿ ಕೊಡುವ ಆಹಾರ ಸ್ವೀಕಾರವೇ ಮೊದಲಾದವು. ಇವು ಇತರರ ಇಷ್ಟದಂತೆ ನಡೆಯತಕ್ಕವು. ಅಕಸ್ಮಾತ್ತಾಗಿ ಒದಗುವ ಮುಳ್ಳುಚುಚ್ಚುವುದೇ ಮೊದಲಾದವು, ತನ್ನಿಷ್ಟವಿಲ್ಲದೆ ಬರತಕ್ಕವು.

4 ಅನುಭವವಿದ್ದರೂ ಅವುಗಳಲ್ಲಿ ಆಸಕ್ತಿಯಾಗಲಿ ಅಭಿಮಾನವಾಗಲಿ ಇರುವುದಿಲ್ಲ.

5 ಚಿತ್ತವೃತ್ತಿಗಳನ್ನೂ ಅವುಗಳಲ್ಲಿ ಪ್ರತಿಬಿಂಬಿತವಾಗುವ ಚೈತನ್ಯವನ್ನೂ ಸಾಕ್ಷಿಚೈತನ್ಯದಿಂದ ಬೆಳಗುವವನಾಗಿ.

6 ಸ್ಥೂಲ ಸೂಕ್ಷ್ಮ ಕಾರಣ ಶರೀರಗಳು, ಅವುಗಳಿಂದಾಗಿದ್ದ ಕರ್ಮಗಳು.

7 ಇವೆಲ್ಲಕ್ಕೂ ಆಶ್ರಯವಾಗಿದ್ದ ಮೂಲ-ಅಜ್ಞಾನವೇ ನಾಶವಾಗುವುದರಿಂದ ಇವು ಸಹ ಉಳಿಯಲಾರವು.

8 ಕೇವಲ ತಾನೊಂದೇ ಉಳಿದಿರುವ, 'ಏಕಮೇವಾದ್ವಿತೀಯಮ್' ಎಂಬ ಸ್ಥಿತಿ.

9 ಆನಂದವನ್ನು ಬಿಟ್ಟು ಮತ್ತೇನೂ ಇಲ್ಲದ.

10 ಸಜಾತೀಯ ವಿಜಾತೀಯ ಸ್ವಗತ ಎಂಬ ಯಾವ ರೀತಿಯ ಭೇದವೂ ಇಲ್ಲದೆ.

'ನ ತಸ್ಯ ಪ್ರಾಣಾಃ ಉತ್ಕ್ರಾಮಂತಿ' (ಬೃ.ಉ. ೪.೪.೬)
ತ್ರೈವ ಸಮವನೀಯಂತೇ' (ಬೃ.ಉ. ೩.೨.೧೧), ವಿಮುಕ್ತಶ್ಚ
ಮುಚ್ಯತೇ' (ಕ.ಉ. ೫.೧) ಇತ್ಯಾದಿಶ್ರುತೇಃ ॥೨೨೭॥

ಶ್ರೀಮತ್ಪರಮಹಂಸ - ಪರಿವ್ರಾಜಕಾಚಾರ್ಯ - ಸದಾನಂದ -
ವಿರಚಿತೋ ವೇದಾಂತಸಾರಃ ಸಮಾಪ್ತಃ ॥

೨೨೭. 'ಅವನ ಪ್ರಾಣಗಳು ಉತ್ಕ್ರಮಿಸುವುದಿಲ್ಲ'[1] (ಬೃ.ಉ. .೬), '(ಅವು) ಇಲ್ಲಿಯೇ ಲಯಹೊಂದುತ್ತವೆ'[2] (ಬೃ.ಉ.೩.೨.೧೧)' ಮೊದಲೇ) ಮುಕ್ತನಾಗಿದ್ದು ವಿಮುಕ್ತನಾಗುತ್ತಾನೆ'[3] (ಕ.ಉ.೫.೧) ತ್ಯಾದಿ ಶ್ರುತಿಯಿಂದ (ಹೀಗೆ ತಿಳಿದುಬರುತ್ತದೆ).

ಇಲ್ಲಿಗೆ ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಸದಾನಂದ ೀಗೀಂದ್ರರಿಂದ ರಚಿಸಲ್ಪಟ್ಟ 'ವೇದಾಂತಸಾರ'ವು ಮುಗಿಯಿತು.

1 ದೇಹವನ್ನು ಬಟ್ಟು ಪ್ರಾಣಗಳು ಸೂಕ್ಷ್ಮಶರೀರದೊಂದಿಗೆ ಹೊರಹೊರಡು ನ್ನು ಉತ್ಕ್ರಾಂತಿಯೆಂದು ಕರೆಯುತ್ತಾರೆ. ಉತ್ಕ್ರಾಂತಿಯಿದ್ದರೆ ಪುನರ್ಜನ್ಮ ು. ಬ್ರಹ್ಮಜ್ಞಾನಿಯು ಪುನರ್ಜನ್ಮಬೀಜವಾದ ಅಜ್ಞಾನವನ್ನು ನಾಶಪಡಿಸಿರುವುದ ಅವನಿಗೆ ಉತ್ಕ್ರಾಂತಿಯಿಲ್ಲ. ಪ್ರಾಣಗಳು ಇಲ್ಲಿಯೇ ಪರಬ್ರಹ್ಮದಲ್ಲಿ ಏಕೀಭೂತ ುತ್ತವೆ.

2 ಮುಕ್ತಪುರುಷನು ದೇಹತ್ಯಾಗ ಮಾಡಿದಾಗ ಅವನ ಇಂದ್ರಿಯಗಳು ಪರ ದಲ್ಲಿಯೇ ಲಯಹೊಂದುತ್ತವೆ.

3 ಆಶೆಗಳು ಪುನರ್ಜನ್ಮಕ್ಕೂ, ಪುನರ್ಜನ್ಮಕ್ಕೆ ಅಜ್ಞಾನವೂ ಮೂಲ. ಆಶೆಗಳಿಂದ ೊದಲೇ ಬಿಡಲ್ಪಟ್ಟಿರುವವನು, ಅಜ್ಞಾನವನ್ನು ಬದುಕಿರುವಾಗಲೇ ನಾಶಮಾಡಿ ಡಿರುವವನು ದೇಹವು ಬಿದ್ದುಹೋದಾಗ ವಿಮುಕ್ತನಾಗುತ್ತಾನೆ. ಇದು ಕೇವಲ ಚಾರದ ಮಾತಷ್ಟೆ.

ಜೀವನು ಪರಮಾರ್ಥವಾಗಿ ಪರಬ್ರಹ್ಮವೇ ಆಗಿರುವುದರಿಂದ ಅವನಿಗೆ ಎಂದೂ ನವಿರಲಿಲ್ಲ; ಆದುದರಿಂದ ಮೋಕ್ಷವೂ ಹೊಸದಾಗಿ ಬಂದಂಥ ಅವಸ್ಥೆಯಲ್ಲ. ಳಲ್ಲಿದ್ದ ಹಾರವನ್ನು ಮರೆತು, ಎಲ್ಲೆಲ್ಲೋ ಹುಡುಕಿ ಸುಸ್ತಾಗಿ, ಕಡೆಗೆ ತನ್ನ ಳಲ್ಲಿಯೇ ಇರುವುದನ್ನು ಮತ್ತೆ ಕಂಡುಕೊಳ್ಳುವಂತೆಯೇ ಇದೂ ಕೂಡ. ದರಿಂದಲೇ ಗೌಡಪಾದಾಚಾರ್ಯರು, (೨. ೩೨) 'ನ ನಿರೋಧೋ ನ

ಚೋತ್ಪತ್ತಿಃ ನ ಬಂಧೋ ನ ಚ ಸಾಧಕಃ । ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥', '(ಜೀವನಿಗೆ) ನಾಶವೂ ಇಲ್ಲ, ಉತ್ಪತ್ತಿಯೂ ಇಲ್ಲ; (ಅವನು) ಬದ್ಧನೂ ಅಲ್ಲ, ಸಾಧಕನೂ ಅಲ್ಲ; ಮುಮುಕ್ಷುವೂ ಅಲ್ಲ, ಮುಕ್ತನೂ ಅಲ್ಲ. ಹೀಗೆ ಇದೇ ಪರಮಾರ್ಥಸತ್ಯ' ಎಂದು ಹೇಳಿರುತ್ತಾರೆ.

ಶ್ರೀನೃಸಿಂಹಸರಸ್ವತಿಗಳು ತಮ್ಮ 'ಸಂಬೋಧಿನೀ' ವ್ಯಾಖ್ಯೆಯಲ್ಲಿ, ಶ್ರೀರಾಮತೀರ್ಥರು ತಮ್ಮ ವಿದ್ವನ್ಮನೋರಂಜನೀ' ಟೀಕೆಯಲ್ಲಿ ಕೊಟ್ಟಿರುವ ಎರಡು ಶ್ಲೋಕಗಳು ತುಂಬ ಸ್ವಾರಸ್ಯವಾಗಿರುವುದರಿಂದ ಇಲ್ಲಿ ಅವನ್ನು ಉದ್ಧರಿಸುತ್ತೇವೆ:

ಆತ್ಮಾಜ್ಞಾನಮಲಂ ನಿರಸ್ತಮಮಲಂ ಪ್ರಾಪ್ತಂ ಚ ತತ್ತ್ವಂ ಪರಂ
ಕಂಠಸ್ಥಾಭರಣಾದಿಸದ್ ಭ್ರಮವಶಾಚ್ಛಾಯಾಪಿಶಾಚೀ ಯಥಾ ।
ಆಪ್ತೋಕ್ತ್ಯಾಪ್ತಿನಿವೃತ್ತಿವಚ್ಛ್ರುತಿಶಿರೋವಾಕ್ಯಾದ್ಗುರೋರುತ್ಥಿತಾತ್
ಧ್ವಸ್ತಧ್ವಾಂತನಿರಾಸತಃ ಪರಸುಖಂ ಪ್ರಾಪ್ತಂ ತಯೋರುಚ್ಯತೇ ॥

'ಆತ್ಮನ ಬಗೆಗಿದ್ದ ಅಜ್ಞಾನವೆಂಬ ಕೊಳೆಯು ಹೋಗಲಾಡಿಸಲ್ಪಟ್ಟಿತು. ಪರಿಶುದ್ಧವಾದ ಪರತತ್ತ್ವವು ಹೊಂದಲ್ಪಟ್ಟಿತು. ಆಪ್ತರ ವಚನದ ಫಲವಾಗಿ, ಕಂಠದಲ್ಲಿದ್ದು (ಮರೆತಿದ್ದ) ಆಭರಣವೇ ಮೊದಲಾದುವನ್ನು ಮತ್ತೆ ಪಡೆವಂತೆ, ಅಥವಾ, ನೆರಳನ್ನು ಪಿಶಾಚಿಯೆಂದು ಭ್ರಮಿಸಿ ಹೆದರಿದ್ದಾಗ ಆ ಹೆದರಿಕೆಯು) ಹೋಗುವಂತೆ, ಗುರೂಪದಿಷ್ಟ ವೇದಾಂತವಾಕ್ಯದಿಂದ (ಅಜ್ಞಾನವೆಂಬ) ಕತ್ತಲೆಯು ನಾಶವಾಗುವುದರ ಮೂಲಕ ಪರಮಸುಖವು ಹೊಂದಲ್ಪಟ್ಟಿತು—ಎಂದು ಗುರುವಚನದಿಂದಲೂ ವೇದಾಂತವಾಕ್ಯದಿಂದಲೂ ಹೇಳಲ್ಪಡುತ್ತದೆ.' (ಸಂಬೋಧಿನೀ)

ವಿದ್ಯಾಸೀತಾವಿಯೋಗಕ್ಷುಭಿತನಿಜಸುಖಃ ಶೋಕಮೋಹಾಭಿಪನ್ನಃ
ಚೇತಸ್ಸೌಮಿತ್ರಿಮಿತ್ರೋ ಭವಗಹನಗತಃ ಶಾಸ್ತ್ರಸುಗ್ರೀವಸಖ್ಯಃ ।
ಹತ್ವಾಽಸ್ತೇ ದೈನ್ಯವಾಲಿಂ ಮದನಜಲನಿಧೌ ಧೈರ್ಯಸೇತುಂ ಪ್ರಬದ್ಧ್ಯ
ಪ್ರಧ್ವಸ್ತಾಬೋಧರಕ್ಷಃಪತಿರಧಿಗತಚಿಜ್ಜಾನಕಿಃ ಸ್ವಾತ್ಮರಾಮಃ ॥

'ನನ್ನ ಆತ್ಮನೆಂಬ ಶ್ರೀರಾಮನು, ಜ್ಞಾನವೆಂಬ ಸೀತೆಯ ವಿಯೋಗದ ಫಲವಾಗಿ ತನ್ನ ಸುಖವು ಹದಗೆಡಲು, ಶೋಕಮೋಹಗಳನ್ನು ಹೊಂದಿ ಮನಸ್ಸೆಂಬ ಲಕ್ಷ್ಮಣಸಹಿತನಾಗಿ ಸಂಸಾರವೆಂಬ ಅರಣ್ಯವನ್ನು ಪ್ರವೇಶಿಸಿ, ಶಾಸ್ತ್ರವೆಂಬ ಸುಗ್ರೀವನ ಸ್ನೇಹವನ್ನು ಸಂಪಾದಿಸಿ, ದೈನ್ಯವೆಂಬ ವಾಲಿಯನ್ನು ಕೊಂದು, ಕಾಮವೆಂಬ ಸಾಗರಕ್ಕೆ ಧೈರ್ಯವೆಂಬ ಸೇತುವೆಯನ್ನು ಕಟ್ಟಿ, ಅಜ್ಞಾನವೆಂಬ ರಾವಣನನ್ನು ಕೊಂದು, ಚೈತನ್ಯವೆಂಬ ಜಾನಕಿಯನ್ನು ಪಡೆದಿರುತ್ತಾನೆ.' (ವಿದ್ವನ್ಮನೋರಂಜನೀ)

# ಶಬ್ದ ಸೂಚಿ

[ಸಂಖ್ಯೆಗಳು ಪುಟಗಳನ್ನು ಸೂಚಿಸುತ್ತವೆ.]

